# ಸಗರನಾಡಿನ ಶಾಸನಗಳ ಸಾಂಸ್ಕೃತಿಕ ಅಧ್ಯಯನ

(ಪಿಎಚ್.ಡಿ. ಪದವಿಗಾಗಿ ಹಂಪಿಯ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ)

ಸಂಶೋಧಕರು

ನಿವೇದಿತಾ ಸ್ವಾಮಿ

ಮಾರ್ಗದರ್ಶಕರು

ಡಾ.ಎಂ.ಕೊಟ್ರೇಶ್

ಸಹ ಪ್ರಾಧ್ಯಾಪಕರು

ಪುರಾತತ್ತ್ವ ಮತ್ತು ಇತಿಹಾಸ ಅಧ್ಯಯನ ವಿಭಾಗ

ಗುಲಬರ್ಗಾ ವಿಶ್ವವಿದ್ಯಾನಿಲಯ, ಗುಲಬರ್ಗಾ





ಇತಿಹಾಸ ವಿಭಾಗ

ಸಮಾಜವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ ಹಂಪಿ,

ವಿದ್ಯಾರಣ್ಯ – ೫೮೩ ೨೭೬

೨೦೧೩

# ಸಗರನಾಡಿನ ಶಾಸನಗಳ ಸಾಂಸ್ಕೃತಿಕ ಅಧ್ಯಯನ

(ಪಿಎಚ್.ಡಿ. ಪದವಿಗಾಗಿ ಹಂಪಿಯ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ)

ಸಂಶೋಧಕರು

**ನಿವೇದಿತಾ ಸ್ವಾಮಿ**

ಮಾರ್ಗದರ್ಶಕರು

**ಡಾ.ಎಂ.ಕೊಟ್ರೇಶ್**

ಸಹ ಪ್ರಾಧ್ಯಾಪಕರು

ಪುರಾತತ್ವ ಮತ್ತು ಇತಿಹಾಸ ಅಧ್ಯಯನ ವಿಭಾಗ

ತುಮಕೂರು ವಿಶ್ವವಿದ್ಯಾನಿಲಯ, ತುಮಕೂರು




ಶಾಸನಶಾಸ್ತ್ರ ವಿಭಾಗ

ಸಮಾಜವಿಜ್ಞಾನಗಳ ನಿಕಾಯ

**ಕನ್ನಡ ವಿಶ್ವವಿದ್ಯಾಲಯ ಹಂಪಿ,**

ವಿದ್ಯಾರಣ್ಯ – ೫೮೩೨೭೬

೨೦೧೨

## ಪ್ರಮಾಣ ಪತ್ರ

**"ಸಗರನಾಡಿನ ಶಾಸನಗಳ ಸಾಂಸ್ಕೃತಿಕ ಅಧ್ಯಯನ"** ಎಂಬ ಈ ಮಹಾಪ್ರಬಂಧವನ್ನು ಹಂಪಿಯ ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ **ಡಾ.ಎಂ.ಕೊಟ್ರೇಶ್** ಸಹ ಪ್ರಾಧ್ಯಾಪಕರು. ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಸಮಾಜವಿಜ್ಞಾನಗಳ ನಿಕಾಯದ ಶಾಸನಶಾಸ್ತ್ರ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಮಹಾಪ್ರಬಂಧವು ನನ್ನ ಸ್ವಂತ ಪರಿಶ್ರಮದ ಫಲವಾಗಿದ್ದು, ಈ ಮೊದಲು ಇದನ್ನು ಇನ್ನಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ: 24/12/12

**ನಿವೇದಿತಾ ಸ್ವಾಮಿ**
ಸಂಶೋಧಕರು
ಶಾಸನಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ ಹಂಪಿ,
ವಿದ್ಯಾರಣ್ಯ.

# ದೃಢೀಕರಣ ಪತ್ರ

**ನಿವೇದಿತಾ ಸ್ವಾಮಿ** ಇವರು **"ಸಗರನಾಡಿನ ಶಾಸನಗಳ ಸಾಂಸ್ಕೃತಿಕ ಅಧ್ಯಯನ"** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಹಂಪಿಯ ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಸಮಾಜವಿಜ್ಞಾನಗಳ ನಿಕಾಯದ ಶಾಸನಶಾಸ್ತ್ರ ವಿಭಾಗಕ್ಕೆ ಸಲ್ಲಿಸುತ್ತಿದ್ದಾರೆ. ಪ್ರಸ್ತುತ ಮಹಾಪ್ರಬಂಧವು ಇವರ ಸ್ವಂತ ಪರಿಶ್ರಮದ ಫಲವಾಗಿದ್ದು, ಈ ಮೊದಲು ಇದನ್ನು ಇನ್ನಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ: ವಿದ್ಯಾರಣ್ಯ

ದಿನಾಂಕ: 24/12/12

**ಡಾ.ಎಂ.ಕೊಟ್ರೇಶ್**

M. Kotresh

ಮಾರ್ಗದರ್ಶಕರು

ಪುರಾತತ್ವ ಮತ್ತು ಇತಿಹಾಸ ಅಧ್ಯಯನ ವಿಭಾಗ

ತುಮಕೂರು ವಿಶ್ವವಿದ್ಯಾನಿಲಯ,

ತುಮಕೂರು.


ಪರಿವಿಡಿ





# ಸಂಕೇತಾಕ್ಷರಗಳು

1. APGAS : Andhra Pradesh Government Archaeological Series.
2. BKI : Bombay Karanataka Inscriptions.
3. EC : Epigraphia Carnatica
4. EI : Epigraphia Indica
5. HC : Hyderabad Carnatica
6. IA : Indian Antiquary
7. JISI : Jainism in south India and some Jaina Epigraphas
8. KI : Karanataka Inscriptions
9. SII : South Indian Inscriptions.

## ಪ್ರಸ್ತಾವನೆ :

ಕರ್ನಾಟಕದ ಇತಿಹಾಸ ಸುಮಾರು ಎರಡು ಸಾವಿರ ವರ್ಷಗಳ ಸುಧೀರ್ಘವಾದ ಸಂಸ್ಕೃತಿ, ಪರಂಪರೆ ಒಳಗೊಂಡಿದೆ. ವಿಶಾಲವಾದ ಸಗರ ನಾಡಿನಲ್ಲಿ ಆಳ್ವಿಕೆ ಮಾಡಿದ ಎಷ್ಟೋ ರಾಜವಂಶಗಳು ಘನತೆ ಗೌರವ ಪಡೆದಿವೆ. ಅಷ್ಟೇ ವೀರತನದಿಂದ ಮೆರೆದಿವೆ. ಅವರ ಆಡಳಿತಕ್ಕೆ ಅನುಗುಣವಾಗಿ ಎಷ್ಟೋ ಪ್ರದೇಶಗಳು ಬೇರೆ-ಬೇರೆಯಾಗಿ ಆಡಳಿತ ಮಾಡಿದ್ದು ಕಂಡುಬರುತ್ತದೆ. ಸಣ್ಣ ದೊಡ್ಡ ಆಡಳಿತ ವಿಭಾಗ, ಉಪವಿಭಾಗ, ಅವುಗಳ ಆಡಳಿತ ವರ್ಗ ಹಾಗೂ ಅಲ್ಲಿರುವ ವಿವಿಧ ಜನಾಂಗ, ಸಾಮಾಜಿಕ, ಧಾರ್ಮಿಕ, ಆರ್ಥಿಕ ಹಾಗೂ ಸಾಂಸ್ಕೃತಿಕವಾಗಿರುವ ಜನ ಜೀವನ ಒಂದೇ ದೃಷ್ಟಿಯಿಂದ ಕಾಣುವುದು ಬಹಳ ಕಠಿಣವಾದ ಕೆಲಸ. ಅಂತೆಯೇ ಸಗರ ನಾಡಿನ ಇತಿಹಾಸವನ್ನು ಅಧ್ಯಯನದ ದೃಷ್ಟಿಯಿಂದ ಕಾಲ, ರಾಜ ಮನೆತನ, ಸಂಸ್ಕೃತಿ ಮತ್ತು ಪ್ರದೇಶಕ್ಕೆ ಅನುಗುಣವಾಗಿ ವಿಭಜಿಸಲಾಗಿದೆ.

ನಮ್ಮ ನಾಡಿನ ಸಂಸ್ಕೃತಿಯ ಮೂಲ ಬೇರು ಶಾಸನಗಳಾಗಿವೆ. ಇವುಗಳ ಅಧ್ಯಯನದಿಂದ ಅಂದಿನ ರಾಜರ ಆಳ್ವಿಕೆ. ಸಾಮಾಜಿಕ ಮೌಲ್ಯಗಳು, ಸಂಪ್ರದಾಯ, ಧಾರ್ಮಿಕ ವಿಧಿ ವಿಧಾನಗಳು ಹೀಗೆ ಅನೇಕ ಅಂಶಗಳು ತಿಳಿಯುತ್ತವೆ. ಆದರೆ ಇಂದು ಸಂಸ್ಕೃತಿ, ಸಂಪ್ರದಾಯದಿಂದ ಜನ ದೂರ ಉಳಿದಿದ್ದಾರೆ. ಹಬ್ಬ ಹರಿದಿನ, ಜಾತ್ರೆ, ಉತ್ಸವ ಇಂದು ಕಣ್ಮರೆಯಾಗುತ್ತಿವೆ. ಹಾಗಾಗಿ ಶಾಸನಗಳ ಅಧ್ಯಯನದಿಂದ ರಾಜಕೀಯವಾಗಿ ಆರ್ಥಿಕವಾಗಿ, ಸಾಮಾಜಿಕವಾಗಿ ಹಾಗೂ ಧಾರ್ಮಿಕವಾಗಿ ಸಂಶೋಧನೆ ನಡೆದರೆ ನಮ್ಮ ಮುಂದಿನ ಪೀಳಿಗೆಗೆ ಇತಿಹಾಸವನ್ನು ತಿಳಿಸಿಕೊಡಲು ಸಾಧ್ಯವಾಗುತ್ತದೆ. ಇಲ್ಲಿರುವ ಶಿಲಾಶಾಸನಗಳು, ದೇವಾಲಯಗಳು, ಸ್ತೂಪಗಳು ಹಾಗೂ ವೀರಗಲ್ಲುಗಳ ಸಹಾಯದಿಂದ ನಾಡಿನ ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟಿಕೊಂಡುವ ಪ್ರಯತ್ನ ನಡೆದಿದೆ.

ಸಗರ ನಾಡಿನ ಸಂಶೋಧನೆಯಲ್ಲಿ ಈ ನಾಡನ್ನು ಆಳಿದ ರಾಜರ, ಈ ನಾಡಿನ ಇತಿಹಾಸವನ್ನು ಕಟ್ಟಿಕೊಡುವ ಗ್ರಂಥಗಳೊಂದಿಗೆ, ಕಲೆ ಧರ್ಮವನ್ನು ತಿಳಿದುಕೊಳ್ಳುತ್ತೇವೆ. ಸಗರನಾಡಿನ ಜನರು ಬದುಕಿದ ರೀತಿ-ನೀತಿ ಅವರ ಜೀವನದ ಸಮಸ್ಯೆಗಳು ಹಾಗೂ ಮೌಲ್ಯಗಳ ಕುರಿತ ಅಧ್ಯಯನ ಇದಾಗಿದೆ. ಈ ನಾಡಿನ ರಾಜಕೀಯ ಇತಿಹಾಸದ ಮೇಲೆ ಬೆಳಕು ಚೆಲ್ಲುವ ಕೆಲವು ಗ್ರಂಥಗಳು ರಚನೆಗೊಂಡಿವೆ. ಈ ಕಾಲದ ರಾಜಕೀಯ ಇತಿಹಾಸವನ್ನು ತಿಳಿಸುವುದರ ಮೂಲಕ ಸಾಮಾಜಿಕ, ಸಾಂಸ್ಕೃತಿಕ ಬದುಕು ಅಂದು ಹೇಗೆ ನಡೆದುಕೊಂಡು ಬರುತ್ತಿತ್ತು ಎಂಬುದರ ಕುರಿತು ಅಧ್ಯಯನ ಮಾಡಲು ಯೋಚಿಸಲಾಗಿದೆ. ಇಲ್ಲಿ ಮುಖ್ಯವಾಗಿ ಶಾಸನಗಳ ಅಧಾರದಿಂದ ಅಂದಿನ ರಾಜಕೀಯ ಇತಿಹಾಸ ಚಿತ್ರಿಸುವುದರ ಮೂಲಕ ಸಾಮಾಜಿಕ ಸ್ಥಿತಿಗಳನ್ನು ನಿರೂಪಿಸುವುದಾಗಿದೆ. ಸಾಂಸ್ಕೃತಿಕ

ಪರಂಪರೆಯನ್ನು ಅಧ್ಯಯನದ ತೆಕ್ಕೆಗೆ ಒಳಪಡಿಸಿಕೊಂಡು, ಆ ಮೂಲಕ ನಾಡಿನ ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟಿಕೊಡುವುದು ಈ ಮಹಾಪ್ರಬಂಧದ ಚಿಕ್ಕ ಪ್ರಯತ್ನವಾಗಿದೆ. ಸಗರ ನಾಡಿನ ರಾಜರ ಆಳ್ವಿಕೆಯಲ್ಲಿದ್ದ ಸಾಮಾಜಿಕ, ಆಡಳಿತ, ಆರ್ಥಿಕ ಹಾಗೂ ಧಾರ್ಮಿಕ ಸ್ಥಿತಿ–ಗತಿಗಳ ವಿವರವಾದ ಅಧ್ಯಯನವನ್ನು ಶಾಸನಗಳ ಮೂಲಕ ಮಾಡಲು ಪ್ರಯತ್ನಿಸಿರುವೆ. ಬೇರೆ–ಬೇರೆ ಶತಮಾನಗಳಿಗೆ ಸೇರಿದ ರಾಜರ ಮತ್ತು ಅವರ ಕಾಲದ ಶಾಸನಗಳಲ್ಲಿ ಹೇಳಿದ ವಿಷಯಗಳನ್ನು ಆಧಾರವಾಗಿಟ್ಟುಕೊಂಡು ಸಗರನಾಡಿನ ಜನ ಜೀವನದ ಸ್ಥಿತಿ ಗತಿಗಳನ್ನು ನೋಡುವುದು ಈ ಮಹಾಪ್ರಬಂಧದ ಉದ್ದೇಶ.

## ಅಧ್ಯಯನದ ಉದ್ದೇಶ ಮತ್ತು ಮಹತ್ವ :

ಕರ್ನಾಟಕ ಸಂಸ್ಕೃತಿ ಹಿರಿಮೆಯ ಗರಿ ಎತ್ತಿ ನಿಂತಿರುವ ಕೆಲ ಚರಿತ್ರೆಗಳಲ್ಲಿ 'ಸಗರನಾಡು' ಕೂಡ ತನ್ನ ಘನ ಐತಿಹ್ಯ ಮೆರೆದ ನಾಡಾಗಿದೆ. ಕಲಬುರ್ಗಿ ಜಿಲ್ಲೆಯ ಸುರಪುರ, ಶಹಾಪುರ, ಹಾಗೂ ಜೇವರ್ಗಿ ತಾಲೂಕುಗಳ ಮಧ್ಯ ಹರಿಯುವ ಕೃಷ್ಣಾ ಭೀಮಾ ನದಿಗಳ ನಡುವಿನ ಪ್ರದೇಶವೇ ಸಗರನಾಡು. ಹಿಂದೆ ಈ ನಾಡು ಇಕ್ಷ್ವಾಕು ವಂಶದ ಸಗರ ಚಕ್ರವರ್ತಿಯ ಆಳ್ವಿಕೆಗೆ ಒಳಪಟ್ಟತ್ತು. ಸಗರ ಚಕ್ರವರ್ತಿಯ ಕಾಲದಲ್ಲಿ ಈ ಸಾಮ್ರಾಜ್ಯವು ವೈಭವಯುತವಾಗಿ ಮೆರೆದಿದೆ. ನಂತರ ಅನೇಕ ರಾಜವಂಶಗಳ ಆಳ್ವಿಕೆಗೆ ಒಳಪಟ್ಟಿದೆ. ಇಲ್ಲಿ ಮುಖ್ಯವಾಗಿರುವ ಮೂರು ಮತಗಳಾದ ಬೌದ್ಧ, ಜೈನ ಹಾಗೂ ಶೈವ ಧರ್ಮಗಳ ಪ್ರಭಾವನಿದೆ. ಸಮಾನ ರೀತಿಯಲ್ಲಿ ಇದ್ದದ್ದು, ಶಾಶನಗಳಿಂದ ತಿಳಿದು ಬರುತ್ತದೆ. ಈ ಸಂದರ್ಭದಲ್ಲಿ ನಾಡಿನ ಜನರು ಹೇಗೆ ಬಾಳಿದರು. ಅವರ ಸಂಸ್ಕೃತಿಯ ವೈಶಿಷ್ಟವೇನು ಎಂಬುದೇ ಈ ಮಹಾಪ್ರಬಂಧದ ಮುಖ್ಯ ಉದ್ದೇಶ. ಶಾಸನಗಳ ಕುರಿತು ಅಧ್ಯಯನ ಮಾಡುವಾಗ ರಾಜಕೀಯ ವ್ಯವಸ್ಥೆಯಲ್ಲಿ ರಾಜರು, ಮಹಾಮಂಡಳೇಶ್ವರರು, ಪ್ರಭುಗಳು, ಅಧಿಕಾರಿಗಳ ವರ್ಗ, ಸ್ಥಳೀಯ ಆಡಳಿತ ಇವೆಲ್ಲವನ್ನು ಗಮನದಲ್ಲಿಟ್ಟುಕೊಂಡು ಅವರುಗಳು ಮಾಡಿರುವ ಆಡಳಿತದ ಹಲವಾರು ಮಾರ್ಪಾಡುಗಳಲ್ಲಿ ಸಾಂಸ್ಕೃತಿಕ ರೂಪರೇಷಗಳು ಹೇಗೆ ಹೆಣೆದುಕೊಂಡಿವೆ ಎಂಬುದನ್ನು ಇಲ್ಲಿ ಕಂಡುಕೊಳ್ಳಲಾಗಿದೆ. ರಾಜಕೀಯ, ಸಾಮಾಜಿಕ, ಆರ್ಥಿಕ ಹಾಗೂ ಧಾರ್ಮಿಕ ವ್ಯವಸ್ಥೆಯನ್ನು ಇಟ್ಟುಕೊಂಡು ಅಧ್ಯಯನವನ್ನು ಕೈಗೊಂಡು, ಸಾಂಸ್ಕೃತಿಕ ಲೋಕವನ್ನು ಪರಿಚಯಿಸುವ ಕೆಲಸ ಈ ಮಹಾಪ್ರಬಂಧದಲ್ಲಿದೆ.

ಸಗರ ನಾಡಿನ ಶಾಸನಗಳ ಮಹತ್ವವನ್ನು ಕಟ್ಟಿಕೊಡುವುದು ಈ ಮಹಾಪ್ರಬಂಧದ ಉದ್ದೇಶ. ಶಾಸನಗಳು ರಾಜಕೀಯ, ಸಾಮಾಜಿಕ, ಆರ್ಥಿಕ ಹಾಗೂ ಧಾರ್ಮಿಕ ಪದ್ಧತಿಗಳ

ಮೇಲೆ ವಿಶೇಷವಾದ ಬೆಳಕನ್ನು ಚೆಲ್ಲುತ್ತವೆ. ಈ ನಾಡಿನ ಶಾಸನಗಳನ್ನು ಕುರಿತು ಅಧ್ಯಯನ ಮಾಡಲು ಹೊರಟಾಗ, ರಾಜಕೀಯ ಇತಿಹಾಸದ ಜೊತೆ ಜೊತೆಗೆ ಸಾಂಸ್ಕೃತಿಕ ಇತಿಹಾಸವನ್ನು ಅನಾವರಣಗೊಳಸಬಹುದು ಎಂಬ ದೃಷ್ಟಿಕೋನವನ್ನು ಇಟ್ಟುಕೊಂಡು ಈ ವಿಷಯವನ್ನು ಆಯ್ಕೆ ಮಾಡಿಕೊಳ್ಳಲಾಗಿದೆ.

ಪ್ರಾಗಿತಿಹಾಸದ ನಂತರ ಶಾತವಾಹನರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಹೈಹಯರು, ಕಳಚೂರ್ಯರ ಆಳ್ವಿಕೆಗೆ ಒಳಪಟ್ಟ ನಾಡು. ಈ ನಾಡಿನ ಹೆಚ್ಚು ಶಾಸನಗಳೂ ಕಲ್ಯಾಣ ಚಾಲುಕ್ಯರ ಕಾಲದವು. ಎಂದರೆ ತಪ್ಪಾಗಲಾರದು. ಇವರ ಮಹಾಮಂಡಳೇಶ್ವರರಾದ ದೇವಗಿರಿಯ ಯಾದವರು ಅಥವಾ ಸೇವುಣರ ಕಾಲದವರೆಗೂ ಶಾಸನಗಳು ಲಭ್ಯವಾಗಿದ್ದು, ವಿಜಯನಗರದ ಕಾಲದ ಶಾಸನಗಳು ಲಭ್ಯವಾಗಿಲ್ಲ. ಹಾಗಾಗಿ ಈ ಮಹಾಮಂಡಳೇಶ್ವರ ಕಾಲದವರೆಗೂ ಶಾಸನಗಳು ಮಾಹಿತಿ ಒದಗಿಸುತ್ತವೆ. ನಂತರ ಈ ನಾಡು ವಿಜಯನಗರದ ರಾಜರ ಆಳ್ವಿಕೆ ಒಳಪಟ್ಟಾಗ ಬಹುಮನಿ ಸುಲ್ತಾನರಿಗೂ ಮತ್ತು ಇವರಿಗೂ ಪರಸ್ಪರ ದ್ವೇಷ, ಅಸೂಯೆಯಿಂದ ನಿರಂತರ ದಾಳಿಗೆ ಈ ನಾಡು ತುತ್ತಾಯಿತು. ನಂತರ ಹೈದ್ರಾಬಾದ ನಿಜಾಂನ ಆಳ್ವಿಕೆಗೆ ಒಳಪಟ್ಟಿತು. ಹೀಗಾಗಿ ಮತ್ತಷ್ಟು ತತ್ತರಿಸಿದ ಈ ನಾಡಿನ ಘನತೆ, ಗೌರವಕ್ಕೆ ಬಲವಾದ ಪೆಟ್ಟು ಬಿದ್ದಿತು.

ಸಗರ ನಾಡಿನ ಅಧ್ಯಯನ ಕಾರ್ಯ ಇನ್ನು ಹೆಚ್ಚಿನ ಪ್ರಮಾಣದಲ್ಲಿ ನಡೆಯಬೇಕಿದೆ. ಲೇಖನ ಮತ್ತು ಗ್ರಂಥಗಳು ವಿಪುಲವಾಗಿ ಬರಬೇಕಾಗಿದೆ. ಇಲ್ಲಿನ ಸ್ಮಾರಕಗಳ ರಕ್ಷಣೆ ನಡೆಯಬೇಕಾಗಿದೆ. ಒಟ್ಟಾರೆಯಾಗಿ ಸಗರ ನಾಡಿನ ಬಗ್ಗೆ ಏನೇ ಅಧ್ಯಯನ ನಡೆದಿದ್ದರೂ, ಅವುಗಳಲ್ಲಿನ ಕೆಲವು ಅಂಶಗಳು ಮಾತ್ರ ಉಲ್ಲೇಖಗೊಂಡಿವೆ. ಈ ಮಹಾಪ್ರಬಂಧ ವಿಸ್ತಾರವಾದ ಅಧ್ಯಯನಕ್ಕೆ ಆಕರ ಗ್ರಂಥಗಳ ಕೊರತೆ ಉಂಟಾಗಿದೆ. ಶಾಸನಗಳಲ್ಲಿಯ ವಿಷಯವನ್ನು ಮೊದಲು ವಿವರವಾದ ಅಧ್ಯಯನ ಮಾಡಲಾಗಿದೆ. ಈ ನಾಡಿನಲ್ಲಿ ದೊರೆಕಿರುವ ಒಟ್ಟು ಇನ್ನೂರಕ್ಕೂ ಹೆಚ್ಚು ಶಾಸನಗಳು ಲಭ್ಯವಾಗಿವೆ. ಆದರೆ ಕೇವಲ ಮೂರು ತಾಲೂಕುಗಳಲ್ಲಿ ದೊರತ ಅಂದರೆ ಜೇವರ್ಗಿ, ಶಹಾಪುರ ಹಾಗೂ ಸುರಪುರಗಳಲ್ಲಿ ದೊರೆತ ಶಾಸನಗಳನ್ನು ಮಾತ್ರ ಈ ಮಹಾ ಪ್ರಬಂಧದಲ್ಲಿ ಅಳವಡಿಸಿಕೊಳ್ಳಲಾಗಿದೆ. ಶಾಸನಗಳ ವಿಷಯ ಅವುಗಳಲ್ಲಿ ಕಂಡುಬರುವ ಸಾಂಸ್ಕೃತಿಕ ವೈವಿಧ್ಯತೆ ಮೊದಲಾದ ಅಂಶಗಳನ್ನು ವಿವರವಾಗಿ ಅಧ್ಯಯನ ಮಾಡಲು ಪ್ರಯತ್ನಿಸಲಾಗಿದೆ. ರಾಜಕೀಯ, ಸಾಮಾಜಿಕ, ಆರ್ಥಿಕ ಹಾಗೂ ಧಾರ್ಮಿಕ ಅಂಶಗಳನ್ನು ಇಲ್ಲಿ ಚರ್ಚಿಸಲಾಗಿದೆ.

ಒಟ್ಟಿನಲ್ಲಿ ಈ ಪ್ರದೇಶದಲ್ಲಿ ದೊರೆಯುವ ಶಾಸನಗಳು, ದೇವಾಲಯಗಳು ಮತ್ತು ಸ್ಮಾರಕಗಳನ್ನು ಅಧ್ಯಯನ ಮಾಡುವುದರ ಮೂಲಕ ಸಗರನಾಡಿನ ಪರಂಪರೆ ಮತ್ತು ಸಂಸ್ಕೃತಿಯನ್ನು ಪುನರ್ ರಚಿಸಲು ಪ್ರಯತ್ನಿಸಲಾಗಿದೆ. ಐತಿಹಾಸಿಕ ಹಿನ್ನಲೆಯೊಂದಿಗೆ ನಡೆಸಲಾದ ಈ ಅಧ್ಯಯನದಲ್ಲಿ ಒಟ್ಟು ಎಂಟು ಅಧ್ಯಯನಗಳು ಒಳಗೊಂಡಿವೆ. ದೊರಕುವ ಎಲ್ಲ ಆಕರಗಳನ್ನು ಸಮರ್ಥವಾಗಿ ಬಳಸಿಕೊಂಡು ಕರ್ನಾಟಕದ ಒಂದು ಸಾಂಸ್ಕೃತಿಕ ಪ್ರದೇಶವಾದ ಸಗರನಾಡನ್ನು ವಿವಿಧ ಮಗ್ಗಲುಗಳಿಂದ ನೋಡಿ, ಒಂದು ರೂಪ ಕೊಡಲು ಪ್ರಯತ್ನಿಸಿದ ಫಲವೇ ಈ ಮಹಾಪ್ರಬಂಧ.

## ವ್ಯಾಪ್ತಿ :

ಕೃಷ್ಣಾ–ಭೀಮಾ ನದಿಯ ನಡುವಿನ ಪ್ರದೇಶವೇ ಸಗರನಾಡು. ಈ ನಾಡು ಮೌರ್ಯರು, ಶಾತವಾಹನರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಯಾದವರು, ಸಿಂಘಣರು, ಕಲಚೂರಿಗಳು ಮುಂತಾದ ರಾಜರ ಆಳ್ವಿಕೆಗೆ ಒಳಪಟ್ಟಿದೆ. ನಂತರದಲ್ಲಿ ಗೋಸಲ ವಂಶವದವರು ಆಳ್ವಿಕೆ ಮಾಡಿದರು.

ಔರಂಗಜೇಬನಿಂದ ಪ್ರಾರಂಭಗೊಂಡು ಹೈದ್ರಾಬಾದಿನ ನಿಜಾಂನವರೆಗೂ ವಿವಿಧ ರಾಜ್ಯಗಳ ಆಡಳಿತ ಮಾಡಿದ ನಿರ್ದಶನಗಳಿವೆ. ಒಳಪಟ್ಟಿದೆ. ವಿಜಯನಗರದ ಕಂಪಿಲರಾಯನು ಅತ್ಯಂತ ವೈಭವದಿಂದ ಆಳಿದ ನಾಡಿದು. ಇವರ ಕಾಲದಲ್ಲಿ ನಾಡು–ನುಡಿ, ಕಲೆಗಳಿಗೆ ಹೆಚ್ಚಿನ ಪ್ರೋತ್ಸಾಹ ನೀಡಿದ್ದರಿಂದ ಸಗರ ನಾಡು ಒಂದು ಸಂಸ್ಕೃತಿಯ ತಾಣವಾಗಿ ಇಂದು ನಮಗೆ ಕಂಡುಬರುತ್ತದೆ. ಕಾಲದಿಂದ ಕಾಲಕ್ಕೆ ಕ್ರಮೇಣವಾಗಿ ತನ್ನ ಗಡಿ ವಿಸ್ತಾರವಾಗಿಯೂ, ಮೊಟಕಾಗಿಯೂ, ಕೊನೆಗೆ ಕೃಷ್ಣಾ–ಭೀಮಾ ನದಿಗಳವರೆಗೆ (ಸುರಪುರ ಶಹಾಪುರ, ಜೇವರ್ಗಿ ತಾಲೂಕು) ಸೀಮಿತಗೊಂಡಿತು. ಈ ಸೀಮೆಗೆ ಸಗರನಾಡು ಎನ್ನುವ ರೂಢಿ ಈ ನಾಡಿನ ಪ್ರತಿ ಹಳ್ಳಿ ಹಳ್ಳಿಯಲ್ಲೂ ಬಂದಿದೆ. 'ಸಗರ ಸಾವಿರಹಳ್ಳಿ, ಏಕ ದೊರನಹಳ್ಳಿ' ಎಂದು ಇದಕ್ಕೆ ಕರೆಯಲಾಗುತ್ತಿತ್ತು. ಒಂದು ದೋರನಹಳ್ಳಿ ಸಾವಿರ ಹಳ್ಳಿಗಳಿಗೆ ಸಮವಾಗಿತ್ತು. ಸಗರ ಸಾವಿರ ಹಳ್ಳಿ ಕಂದಾಯ ಇಲಾಖೆಯಾದರೆ, ದೋರನಹಳ್ಳಿ ಒಂದೇ ಕೇಂದ್ರದಲ್ಲಿ ಸಗರ ನಾಡಿನಷ್ಟು ಹಣ ಸಂಗ್ರಹವಾಗುತ್ತಿತ್ತು. ಹಾಗಾಗಿ ಈ ನಾಡು 'ಸಗರ ಸಾವಿರಹಳ್ಳಿ ಏಕ ದೋರನಹಳ್ಳಿ' ಎಂದು ಖ್ಯಾತಿ ಪಡೆದಿದೆ. ಸಗರನಾಡಿನ 'ಪೂರ್ವಕ್ಕೆ ಎಡದೊರೆ ಎರಡು ಸಾಸಿರ, ಪಶ್ಚಿಮಕ್ಕೆ ತರ್ದವಾಡಿ ಸಾಸಿರ ಮತ್ತು ಉತ್ತರಕ್ಕೆ ಅಲಂದೆ ಸಾಸಿರ ಹಾಗೂ ದಕ್ಷಿಣಕ್ಕೆ ಕರಡುಕಲ್ಲು ಮುನ್ನೂರ ವರೆಗೆ ಇದರ ವ್ಯಾಪ್ತಿಯಿದೆ.

## ಅಧ್ಯಯನದ ವಿಧಾನ :

ಸಗರ ನಾಡಿನ ಜನ ಜೀವನವನ್ನು ಕುರಿತು ತಿಳಿದುಕೊಳ್ಳಬೇಕಾದರೆ, ನಾವು ಶಾಸನಗಳ ಅಧ್ಯಯನದ ಮೊರೆ ಹೋಗಲೇಬೇಕು. ಈ ನಾಡಿನಲ್ಲಿ ಸುಮಾರು ಇನ್ನೂರಕ್ಕೂ ಹೆಚ್ಚು ಶಾಸನಗಳು ಲಭಿಸಿವೆ. ಇನ್ನು ಸಿಗುತ್ತಲೆ ಇವೆ. ತೋಟ, ಹೊಲ, ಗದ್ದೆ, ಬಾವಿ, ದೇವಾಲಯಗಳ ಬಳಿ ಶಾಸನಗಳು ಲಭಿಸುತ್ತವೆ. ಅಂದು ಕೆತ್ತಿಸಿದ ಶಾಸನಗಳು ಇಂದು ನಮಗೆ ಬಹು ಉಪಯುಕ್ತವಾದ ಆಕರ ಸಾಮಗ್ರಿಯನ್ನು ಒದಗಿಸಿಕೊಡುತ್ತವೆ. ವ್ಯಕ್ತಿಗಳ ಜೀವನ ಚಿತ್ರಣ ಅವರು ದಾನ-ದತ್ತಿಗಳನ್ನು ನೀಡಿದ ವಿವರ, ಮನಶಾಂತಿಗಾಗಿ, ಪೂಜ್ಯಭಾವನೆಗಳಿಗೆ ಬೆಲೆ ತರಲು ಕಟ್ಟಿಸಿದ ದೇವಾಲಯ, ನೆಲೆಗೊಳಿಸಿದ ವ್ಯವಸ್ಥೆ, ಪ್ರಜೆಗಳನ್ನು ಯೋಗ್ಯ ರೀತಿಯಲ್ಲಿ ನೋಡಿಕೊಳ್ಳುವ ರೀತಿ, ಶಿಕ್ಷಣ ವ್ಯವಸ್ಥೆ, ನಮ್ಮ ನಾಡು, ನುಡಿ, ಕಲೆ, ಸಂಸ್ಕೃತಿಯನ್ನು ಸಮರ್ಪಿಸುವುದು, ರಾಷ್ಟ್ರಕ್ಕಾಗಿ ತ್ಯಾಗ, ಭಕ್ತಿ, ಪೌರುಷ, ಸ್ವಾಭಿಮಾನ, ಆದರ್ಶದಿಂದ ಬಾಳಿ ಮುಂದಿನ ಪೀಳಿಗೆಗೆ ಮಾರ್ಗದರ್ಶನ ನೀಡುವ ಸ್ಮಾರಕಗಳಿಂದ ಹಾಗೂ ಅಧ್ಯಯನ ಮಾಡುವುದರ ಮೂಲಕ ತೋರಿಸಿಕೊಡಬೇಕಾಗಿದೆ. ಅಂದಿನ ರಾಜ-ರಾಜ್ಯ, ಮನೆತನ, ಸಾಮ್ರಾಜ್ಯಗಳು ಅಳಿದು ಹೋಗಿದ್ದರೂ, ಆವತ್ತಿನ ಸಾಂಸ್ಕೃತಿಕ ಹಿರಿಮೆ- ಗರಿಮೆಗಳನ್ನು ಶಾಸನಗಳಲ್ಲಿ ಕೆತ್ತಿಸಿರುವುದನ್ನು ಇಂದಿನ ಅಧ್ಯಯನ ಮುಂದಿನ ಜನಾಂಗಕ್ಕೆ ಸಿಗುವಂತಾಗಲಿ ಎಂಬುದೇ ಈ ಮಹಾಪ್ರಬಂಧದ ಆಶಯವಾಗಿದೆ.

## ಈವರೆಗಿನ ಅಧ್ಯಯನಗಳು :

ಸಗರನಾಡು ತನ್ನದೇ ಆದ ಮಹತ್ವ ಪಡೆದಿದೆ. ಈ ನಾಡು ವಿಶಿಷ್ಟ ಪರಂಪರೆಯನ್ನು ಹೊಂದಿದೆ. ಈ ನಾಡಿನಲ್ಲಿ ದಾಖಲೆಗಳು ಹಾಳಾಗಿರುವುದೇ ಹೆಚ್ಚು. ಇಲ್ಲಿ ಅಳಿದುಳಿದ ದಾಖಲೆಗಳನ್ನು ರಕ್ಷಿಸುವ, ಪರಿವೀಕ್ಷಿಸುವ, ಪ್ರಕಟಿಸುವ ಕಾರ್ಯದ ಬಗೆಗೆ ಯಾರು ತಲೆಕೆಡಿಸಿಕೊಂಡಿಲ್ಲ. ತಲೆಕೆಡಿಸಿ ಕೊಂಡ ಕೆಲವರಲ್ಲಿ ಮಹತ್ವ ಪೂರ್ಣವಾದ ಕೆಲಸವನ್ನು ಮಾಡಿದ್ದಾರೆ. ಅವರು ಸಂಪಾದಿಸಿದ ಶಾಸನಗಳನ್ನು ಇಟ್ಟುಕೊಂಡೇ ಈ ನಾಡಿನ ಸಾಂಸ್ಕೃತಿಕ ಬದುಕನ್ನು ಇಟ್ಟುಕೊಂಡು ಅಧ್ಯಯನ ಮಾಡಲು ಪ್ರಯತ್ನಿಸಿದೆ.

ಡಾ. ಫ್ಲೀಟರು ಕೇವಲ "Note on kembhavi inscription", "Note on wodageri inscriplion" ಎಂದು ಟಿಪ್ಪಣಿಗಳನ್ನು ಬರೆದರೇ ಹೊರತು, ಈ ನಾಡಿನ ಶಾಸನಗಳನ್ನು ಪ್ರಕಟಿಸಲಿಲ್ಲ. ಡಾ.ಬಾರ್ನೆಟ್‌ರವರು ಏವೂರಿನ ಏಳು ಶಾಸನಗಳನ್ನು ಮಾತ್ರ ಪ್ರಕಟಿಸಿದರು. ಸರ್. ವಾಲ್ಟರ್ ಇಲಿಯಟ್‌ರು, ಕಾಲಿನ್ ಮೆಕೆಂಝಿ, ಜೆ.ಎಫ್, ಫ್ಲೀಟ್,

ಎಲ್.ಡಿ.ಬಾರ್ನೆಟ್‌ರಂತಹ ವಿದೇಶಿ ವಿದ್ವಾಂಸರಿಂದಲೇ ಈ ನಾಡಿನ ಶಾಸನ ಅಧ್ಯಯನ ನಡೆದುದ್ದು ಒಂದು ದುರಂತವೆ ಸರಿ.

ಈ ನಾಡಿನಲ್ಲಿ ಶಾಸನ ಪರಿವೀಕ್ಷಣೆ ನಡೆಸಿದ ದೇಸಿಯ ವಿದ್ವಾಂಸರಲ್ಲಿ ಪಿ.ಬಿ.ದೇಸಾಯಿಯವರು ಮೊದಲಿಗರು. ನಂತರ ಡಾ.ಬಿ.ಆರ್.ಹಿರೇಮಠ ಹಾಗೂ ಹನುಮಾಕ್ಷಿ ಗೋಗಿ ಅವರು ಸೇರಿ 'ಮುದನೂರು ಮತ್ತು ಯಡ್ರಾಮಿ ಶಾಸನಗಳು' ಎಂಬ ಹೆಸರಿನಿಂದ ಪುಸ್ತಕ ರೂಪದಲ್ಲಿ ಮೂವತ್ತಮೂರು ಶಾಸನಗಳನ್ನು ಪ್ರಕಟಪಡಿಸಿದ್ದಾರೆ. ಡಾ.ವ್ಹಿ.ಶಿವಾನಂದ ಅವರು 'ಹೈದ್ರಾಬಾದ ಕರ್ನಾಟಕದ ಕನ್ನಡ ಶಿಲಾ ಶಾಸನಗಳು' ಎಂಬ ಪುಸ್ತಕದಲ್ಲಿ ಈ ನಾಡಿನ ಶಾಸನಗಳು ಸಂಗ್ರಹಗೊಂಡಿವೆ.

ಹನುಮಾಕ್ಷಿ ಗೋಗಿ ಅವರ 'ಅನುಶಾಸನ' ಎಂಬ ಇನ್ನೊಂದು ಪುಸ್ತಕದಲ್ಲಿ ಈ ನಾಡಿನ ಕೆಲ ಶಾಸನಗಳನ್ನು ಪ್ರಕಟಿಸಿದ್ದಾರೆ. 'ಸಗರನಾಡ ಸಿರಿ' ಎಂಬ ಪುಸ್ತಕದಲ್ಲಿ ಹತ್ತೊಂಬತ್ತು ಲೇಖನಗಳು ಪ್ರಕಟಗೊಂಡಿವೆ. ಹಾಗೂ 'ಸಗರನಾಡ ದರ್ಶನ' ಎಂಬ ಸ್ಮರಣ ಸಂಚಿಕೆಯಲ್ಲಿ ಕೆಲ ಶಾಸನಗಳು ಪ್ರಕಟಗೊಂಡಿವೆ. ಹಾಗೂ ಸುರಪುರ ತಾಲೂಕ ಪ್ರಥಮ ಕನ್ನಡ ಸಾಹಿತ್ಯ ಸಮ್ಮೇಳನ ಕೆಂಬಾವಿಯಲ್ಲಿ ನಡೆದಿತ್ತು. 'ತವನಿಧಿ' ಎಂಬ ಸ್ಮರಣ ಸಂಚಿಕೆಯಲ್ಲಿ ಈ ನಾಡಿನ ಕೆಲ ಶಾಸನಗಳು ಪ್ರಕಟಿಸಿದ್ದಾರೆ. 'ಶಹಾಪುರ ತಾಲೂಕಿನ ಶಾಸನಗಳು : ಒಂದು ಸಮೀಕ್ಷೆ' ಎಂಬ ಪುಸ್ತಕದಲ್ಲಿ ಡಾ.ರಂಗರಾಜ ವನದುರ್ಗ ಅವರು ಶಹಾಪುರ ತಾಲೂಕಿನ ಹದಿನೈದು ಶಾಸನಗಳು ಪ್ರಕಟಿಸಿದ್ದಾರೆ. 'ಸುರಪುರ ತಾಲೂಕಿನ ಶಾಸನಗಳು' ಎಂಬ ಪುಸ್ತಕದಲ್ಲಿ ಹನುಮಾಕ್ಷಿ ಗೋಗಿ ಅವರು ನೂರು ಶಾಸನಗಳ ಪಾಠವನ್ನು ಪ್ರಕಟಿಸಿದ್ದಾರೆ. ಹಾಗೂ ಇವರ ಇನ್ನೊಂದು ಕೃತಿ 'ಕಲ್ಬುರ್ಗಿ ಜಿಲ್ಲೆಯ ಶಾಸನಗಳು' ಇದರಲ್ಲಿ ಈ ನಾಡಿನ ಜೇವರ್ಗಿ ತಾಲೂಕಿನ ಎಪ್ಪತ್ತನಾಲ್ಕು ಶಾಸನಗಳು ಹಾಗೂ ಶಹಾಪುರ ತಾಲೂಕಿನ ನಲವತ್ತೆರಡು ಶಾಸನಗಳ ಪಾಠವನ್ನು ಪ್ರಕಟಿಸಿದ್ದಾರೆ. ಇತರ ಪುಸ್ತಕಗಳು ಹಾಗೂ ಲೇಖನಗಳು ಪ್ರಕಟಗೊಂಡಿವೆಯಾದರೂ, ಶಾಸನಗಳ ಅಧ್ಯಯನ ಇನ್ನೂ ಪೂರ್ಣಗೊಂಡಿಲ್ಲ. ಇಲ್ಲಿಯವರೆಗೂ ಶಾಸನಗಳ ಸಾಂಸ್ಕೃತಿಕ ಅಧ್ಯಯನ ನಡೆದಿಲ್ಲ. ಎಂಬುದನ್ನು ನಾವು ಗಮನಿಸಬೇಕು. ಸಗರನಾಡಿನ ಸಾಂಸ್ಕೃತಿಕ ಅಧ್ಯಯನ ನಡೆದಿದೆ. ರಾಜಕೀಯ, ಇತಿಹಾಸಕ್ಕೆ ಸಂಬಂಧ ಪಟ್ಟಂತೆ ಹಲವಾರು ಲೇಖನಗಳು ಬಂದಿವೆ ಹೊರತು, ಶಾಸನಗಳ ಸಾಂಸ್ಕೃತಿಕ ವಿಷಯಗಳ ಕುರಿತು ಗ್ರಂಥಗಳು ಹೊರಬಂದಿಲ್ಲ ಎಂಬುದನ್ನು ಮನಗಂಡು ಈ ವಿಷಯವನ್ನು ಆಯ್ಕೆ ಮಾಡಿಕೊಳ್ಳಲಾಗಿದೆ.

ಸಗರನಾಡಿನ ಇತಿಹಾಸದ ಮೇಲೆ ಬೆಳಕು ಚಲ್ಲುವ ಹಲವಾರು ಗ್ರಂಥಗಳು ಬಂದಿವೆ. ಅವುಗಳನ್ನು ಇಟ್ಟುಕೊಂಡು ಶಾಸನಗಳ ಮೂಲಕವೂ ಈ ನಾಡಿನ ಇತಿಹಾಸವನ್ನು ಸಾಂಸ್ಕೃತಿಕವಾಗಿ ನೋಡುವುದರ ಮೂಲಕ ಶಾಸನಗಳಲ್ಲಿ ದೊರೆತ ಆಧಾರಗಳಿಂದ ರಾಜಕೀಯ, ಸಾಮಾಜಿಕ, ಆರ್ಥಿಕ, ಧಾರ್ಮಿಕ ವ್ಯವಸ್ಥೆಯನ್ನು ಅರ್ಥೈಸುವುರ ಮೂಲಕ ಈ ನಾಡಿನ ಸಾಂಸ್ಕೃತಿಕ ಬದುಕನ್ನು ಕಟ್ಟಿಕೊಡುವ ಪ್ರಯತ್ನ ಈ ಮಹಾಪ್ರಬಂಧದಲ್ಲಿದೆ.

# ಅಧ್ಯಾಯ–೨

## ಭೌಗೋಳಿಕ ಮತ್ತು ಐತಿಹಾಸಿಕ ಹಿನ್ನಲೆ

೨.೧ ಭೌಗೋಳಿಕ ಹಿನ್ನಲೆ

೨.೨. ಪೌರಾಣಿಕ ಹಿನ್ನಲೆ

೨.೩. ಪ್ರಾಗಿತಿಹಾಸ

೨.೪. ಇತಿಹಾಸದ ಆರಂಭ ಕಾಲ

## ಪ್ರಸ್ತಾವನೆ :

ಕರ್ನಾಟಕ ಸಾಂಸ್ಕೃತಿಕ ಚರಿತ್ರೆಯಲ್ಲಿ ಸಗರನಾಡಿನ ಇತಿಹಾಸವು ಮಹತ್ವದಾಗಿದೆ. ಈ ನಾಡು ಕಲೆ, ಸಾಹಿತ್ಯ, ಸಂಸ್ಕೃತಿ, ವಾಸ್ತುಶಿಲ್ಪ ಹಾಗೂ ಶಾಸನಗಳಿಂದ ಶ್ರೇಷ್ಠತೆಯನ್ನು ಪಡೆದುಕೊಂಡಿದೆ. ಅದೇ ರೀತಿ ಒಂದು ನಾಡಿನ ಚರಿತ್ರೆಯನ್ನು ಕಟ್ಟಿಕೊಡುವಲ್ಲಿ ಶಾಸನಗಳ ಪಾತ್ರವೂ ಕೂಡ ಅಷ್ಟೇ ಮಹತ್ವದಾಗಿದೆ. ಶಾಸನಗಳು ಅಂದಿನ ರಾಜರು ಹೊರಡಿಸಿದ ರಾಜಾಜ್ಞೆಗಳು. ಇವುಗಳ ಪರಿಪಾಲನೆ ಮಾಡುವುದು ನಾಡಿನ ಸಮಸ್ತ ನಾಗರಿಕರ ಕರ್ತವ್ಯವಾಗಿತ್ತು. ಅಂತೆಯೇ ಪ್ರತಿ ಶಾಸನವು ಪ್ರಾರ್ಥನಾ ಗೀತೆ ಅಥವಾ ಶ್ಲೋಕದೊಂದಿಗೆ ಪ್ರಾರಂಭವಾಗಿ, ಶಾಪಾಶಯದೊಂದಿಗೆ ಕೊನೆಗೊಳ್ಳುತ್ತದೆ. ಹೀಗಾಗಿ ಎಲ್ಲರು ರಾಜಾಜ್ಞೆಯನ್ನು ಪರಿಪಾಲನೆ ಮಾಡುತ್ತಿದ್ದರು. ಸಗರನಾಡಿನಲ್ಲಿ ಮುನ್ನೂರಕ್ಕೂ ಹೆಚ್ಚು ಶಾಸನಗಳು ದೊರೆತಿವೆ. ಯಾವುದೇ ಒಂದು ನಾಡಿನ ಚರಿತ್ರೆಯನ್ನು ಅರಿಯಬೇಕಾದರೆ ಅಲ್ಲಿ ದೊರೆತ ಅವಶೇಷಗಳಿಂದ ಮಾತ್ರ ಸಾಧ್ಯ. ಆದರೆ ಇಂದು ಅವಶೇಷಗಳು ಮಣ್ಣಿನಲ್ಲಿ ಹುದುಗಿಹೋಗಿವೆ. ಅದರಲ್ಲೂ ಶಾಸನಗಳು ಹೆಚ್ಚಿನ ಮಾಹಿತಿಯನ್ನು ಒದಗಿಸಿಕೊಡುತ್ತವೆ. ಇಂದು ಇವುಗಳು ಬಚ್ಚಲ ಮೋರೆಯ ಕಲ್ಲಾಗಿ, ಮನೆಯ ಮೇಲ್ಹಾವಣಿಗಾಗಿ ಬಳಸುವ ಸಾಧನವಾಗಿ ಉಪಯೋಗಿಸಲ್ಪಡುತ್ತಿವೆ.

"ಸಮ ಭೂಮಧ್ಯರೇಖಾಯಾಂ ಶ್ರೀಶೈಲಸ್ಯ ಪಶ್ಚಿಮೇ
ಕೃಷ್ಣವೇಣೀ ಭೀಮರತ್ಯ : ಮಧ್ಯ ಜಗತಿ ಪಾವನೇ ||
ಸೂರ್ಯವಂಶ ಕುಲೋತ್ಪನ್ನ ಸಂಗರೇಣ ವಿನಿರ್ಮಿತಂ
ಸಗರಂ ನಗರಂ ನಾಮ ಜಯತ್ಯದ್ಯಾಪಿ ವಿಶ್ರುತಂ ||
ಭೀಮಾ ದಕ್ಷಿಣ ದಿಗ್ಭಾಗೆ ಪರ್ವತೋಸ್ತಿ ಮನೋರಮಃ
ಸಗರಾದ್ರಿರತಿ ಖ್ಯಾತಃ ಹೇಮಕೂಟಸ್ಯ ಸೋದರಃ ||"[1]

ಎಂಬ ಶಾಸನೋಕ್ತಿಯಲ್ಲಿ ಕೃಷಾ ಭೀಮಾ ನಡುವಿನ ಪ್ರದೇಶದೊಂದಿಗೆ, ಸುರಪುರ ಶಹಾಪುರ, ಜೇವರ್ಗಿ ತಾಲೂಕುಗಳು ಒಳಗೊಂಡಿದ್ದ ನಾಡೇ ಸಗರನಾಡು. ಬಿಜಾಪುರ ಜಿಲ್ಲೆಯ ಮುದ್ದೇಬಿಹಾಳ ಹಾಗೂ ಸಿಂದಗಿ ತಾಲೂಕುಗಳವರೆಗೆ ವ್ಯಾಪ್ತಿ ಹೊಂದಿದೆ. ಅತಿ

ಪ್ರಾಚೀನವಾದುದಲ್ಲದೆ ತನ್ನ ಘನ ಐತಿಹ್ಯವನ್ನು ಮೆರೆದ ನಾಡು ಇದಾಗಿದೆ ಎಂಬುದು ಗಮನಾರ್ಹವಾಗಿದೆ.

## ೨.೧. ಭೌಗೋಳಿಕ ಹಿನ್ನಲೆ :

ಒಂದು ಪ್ರದೇಶದ ಭೌಗೋಳಿಕ ಪರಿಚಯವು ಆ ಪ್ರದೇಶದ ವಾಸ್ತವ ಸ್ಥಿತಿಯನ್ನು ಪರಿಚಯಿಸುವ ಆಕರವಾಗುತ್ತದೆ. ಈ ಪ್ರದೇಶದ ಆಗು ಹೋಗುಗಳಿಗೆ ಅಲ್ಲಿನ ಭೌಗೋಳಿಕ ಪರಿಸರವೇ ಪ್ರಧಾನ. ಭೌಗೋಳಿಕವಾಗಿ ಸಗರ ನಾಡಿನ ವ್ಯಾಪ್ತಿಯಲ್ಲಿ ಬರುವ ಜೇವರ್ಗಿ ಕಲಬುರ್ಗಿಯಿಂದ ೪೦ ಕಿ.ಮೀ.ದೂರದಲ್ಲಿ ಇದೆ. ಪೂರ್ವದಲ್ಲಿ ಚಿತ್ತಾಪೂರ, ಪಶ್ಚಿಮದಲ್ಲಿ ಶಹಾಪುರ, ದಕ್ಷಿಣದಲ್ಲಿ ಸುರಪೂರ, ಉತ್ತರದಲ್ಲಿ ಅಫಜಲಪೂರದಿಂದ ಆವೃತ್ತವಾಗಿದೆ. "ಜೇವರ್ಗಿ ತಾಲೂಕು ೧೮೨೨ ಚ.ಕಿ.ಮೀ.ವಿಸ್ತೀರ್ಣ ಹೊಂದಿದೆ. ೧೫೮ ಗ್ರಾಮಗಳನ್ನೊಳಗೊಂಡ ಈ ತಾಲೂಕಿನಲ್ಲಿ ೧೨ ಗ್ರಾಮಗಳು ಜನವಸತಿ ಇಲ್ಲದೆ ಉಳಿದವೆ. ೧೮೨೩೧೩ ಹೆಕ್ಟೇರ್ ಭೌಗೋಳಿಕ ವಿಸ್ತೀರ್ಣದಿಂದ ಕೂಡಿದೆ"[೨] ಶಹಾಪುರ ತಾಲೂಕವು ಸಮುದ್ರ ಮಟ್ಟದಿಂದ ೧೪೦೦ ಅಡಿ (೪೨೭ ಮೀ) ಎತ್ತರದಲ್ಲಿದೆ. "ಉತ್ತರ ಅಕ್ಷಾಂಶ ೧೬ ಡಿಗ್ರಿಯಿಂದ ೫೩, ಇಂಚು ಪೂರ್ವ ರೇಖಾಂಶ ೭೬-೫೯ ಡಿಗ್ರಿಯಿಂದ ೭೭-೧೨' ವರೆಗೆ ವ್ಯಾಪ್ತಿಸಿರುವ ಈ ತಾಲೂಕಿನ ವಿಸ್ತೀರ್ಣ ೧೬೯೪ ಚ.ಕಿ.ಮೀ ದಷ್ಟಿದೆ"[೩] ಈ ತಾಲೂಕಿನಲ್ಲಿ ೧೫೫ಗ್ರಾಮಗಳಿವೆ. ೧೦ ಗ್ರಾಮಗಳಲ್ಲಿ ದೀಪ ಹಚ್ಚುವವರೆ ಇಲ್ಲ. ಕಲಬುರ್ಗಿಯಿಂದ ೧೧೦ ಕಿ.ಮೀ ದಲ್ಲಿರುವ "ಸುರಪುರ ತಾಲೂಕುವು ೧೬ ಡಿಗ್ರಿ ಯಿಂದ ೧೨ ಇಂಚ್ ಅಕ್ಷಾಂಶ ಹಾಗೂ ೭೬ ಡಿಗ್ರಿ ೪ ಇಂಚ್ ದಿಂದ ೭೬ ಡಿಗ್ರಿ ೨೦ ಇಂಚ ರೇಖಾಂಶಗಳ ಮಧ್ಯದಲ್ಲಿದೆ. ಇದರ ಒಟ್ಟು ವಿಸ್ತೀರ್ಣ ೧೮೨೦ ಚ.ಕಿ.ಮೀ ದಷ್ಟಿದೆ"[೪] ಈ ತಾಲೂಕಿನಲ್ಲಿ ೧೮೭ ಗ್ರಾಮಗಳಿವೆ. ಈ ತಾಲೂಕುಗಳನ್ನೊಳಗೊಂಡ ನಾಡನ್ನೇ ಸಗರನಾಡು ಎಂದು ಕರೆಯುತ್ತಾರೆ.

ಶಹಾಪುರ ಬೆಟ್ಟ ಗುಡ್ಡಗಳಿಂದ ಆವೃತ್ತವಾಗಿದೆ. ಈ ತಾಲೂಕಿನಾದ್ಯಂತ ೫೬ ಕೆರೆಗಳಿವೆ. ಸಗರನಾಡಿನ "ಪೂರ್ವಕ್ಕೆ ಎಡದೊರೆ ಎರಡು ಸಾಸಿರ, ಪಶ್ಚಿಮಕ್ಕೆ ತರ್ದವಾಡಿ ಸಾಸಿರ ಮತ್ತು ಉತ್ತರಕ್ಕೆ ಅಲಂದೆ ಸಾಸಿರ ಹಾಗೂ ದಕ್ಷಿಣಕ್ಕೆ ಕರಡಕಲ್ಲು ಮುನ್ನೂರನ್ನು ಹೊಂದಿದ್ದಿತು"[೫] ಸಗರನಾಡು ನೈಸರ್ಗಿಕವಾಗಿ ಸಂಪದ್ಭರಿತವಾಗಿತ್ತು. ಮುಂಗಾರು ಹಾಗೂ ಹಿಂಗಾರು ಬೆಳೆಯನ್ನು ಬೆಳೆಯುಲಾಗುತ್ತದೆ. ಇವುಗಳಿಗೆ ಖಾರಿಫ್ ಮತ್ತು ರಾಬಿ ಬೆಳೆ ಎಂತಲೂ ಕರೆಯುತ್ತಾರೆ. ಇಲ್ಲಿ ಜೋಳ, ಸಜ್ಜೆ, ಗೋಧಿ, ಕಡಲೆ, ತೊಗರಿ, ಅಕ್ಕಿ, ನವಣಿ,

ಬೇಳೆ, ದ್ವಿದಳ ಧಾನ್ಯಗಳನ್ನು ಸಹ ಬೆಳೆಯುತ್ತಾರೆ. ಸೀತಾಫಲ ನೈಸರ್ಗಿಕವಾಗಿ ಇಲ್ಲಿ ದೊರಕುತ್ತವೆ. ಕೃಷಿ ಹಾಗೂ ನೀರಾವರಿಯಲ್ಲಿ ಸಾಗುವಳಿ ಮಾಡಿ ಅಭಿವೃದ್ಧಿ ಸಾಧಿಸಿದ ಈ ನಾಡಿನಲ್ಲಿ ಪ್ರಾಕೃತಿಕ ಹವಾಗುಣದಿಂದ ಕ್ರಮೇಣವಾಗಿ ಮಳೆ ಕಡಿಮೆಯಾಗುತ್ತ ಬಂದಿದೆ. ಈಗ ಈ ನಾಡು ಬರಗಾಲದ ಸುಡು ಬಿಸಿಲಿನ ನಾಡಾಗಿದೆ.

ಸಗರನಾಡಿನಲ್ಲಿ ವೈವಿಧ್ಯ ಪೂರ್ಣವಾದ ಖನಿಜ ನಿಕ್ಷೇಪಗಳಿವೆ. ತಂತಿ ಮತ್ತು ಶಿಲೀಂದ್ರ ನಾಶಕಗಳ ತಯಾರಿಕೆಯಲ್ಲಿ ಲೋಹವನ್ನು ಬಳಸಲಾಗುತ್ತದೆ. ತಾಮ್ರದ ನಿಕ್ಷೇಪವನ್ನು ತಿಂಥಿಣಿಯಲ್ಲಿ ಪತ್ತೆ ಮಾಡಲಾಗಿದೆ. ಬೆಣಚು ಸಿರಗಳು ಸುರಪುರ ತಾಲೂಕಿನ ಕೆಲವೆಡೆ ಕಾಣಬಹುದಾಗಿದೆ. ಸುಣ್ಣದ ಕಲ್ಲಿನ ನಿಕ್ಷೇಪಗಳು ಸಹ ದೊರೆತಿವೆ. "ರಾಜಾಪುರ, ಗಂಗನಾಳ, ಹೊಸಕೇರಾ, ನಾಗನಟಗಿ, ಕರ್ಕಿಹಳ್ಳಿ, ವಾಗನಗೇರಾ, ತಳವಾರಗೇರಾ ಅಲಹಳ್ಳಿ, ಬದಿಯಾಪುರಗಳ ಸುತ್ತ-ಮುತ್ತಲಿನ ಪ್ರದೇಶಗಳಲ್ಲಿ ಕೆಂಪು ಕಲ್ಲು ದೊರೆತಿವೆ"[೬].

## ೨.೨. ಪೌರಾಣಿಕ ಹಿನ್ನಲೆ :

ಭಾರತದಲ್ಲಿ ಪುರಾಣಗಳಿಗೆ ಎಲ್ಲಿಲ್ಲದ ಮಹತ್ವವಿದೆ. ಅಂತೆಯೇ ಭಾರತವನ್ನು ಪೌರಾಣಿಕ ದೇಶವೆಂದು ಕರೆಯಲಾಗುತ್ತದೆ. ಈ ಪುರಾಣಗಳು ಸಂದರ್ಭಾನುಸಾರ ಭಾರತದ ಅನೇಕಾನೇಕ ಸ್ಥಳ ಮತ್ತು ಪ್ರದೇಶಗಳ ಮಹತ್ವದ ಬಗ್ಗೆ ಎತ್ತಿ ಹೇಳುತ್ತವೆ. ಪುರಾಣೋಕ್ತ ಸ್ಥಳಗಳು ಪವಿತ್ರ ಕ್ಷೇತ್ರಗಳೆಂಬ ಹೆಗ್ಗಳಿಕೆಗೆ ಪಾತ್ರವಾಗುತ್ತವೆ. ಪೌರಾಣಿಕ ಹಿನ್ನೆಲೆಯಿಂದಾಗಿ ಸಗರನಾಡಿನ ಸ್ಥಳಗಳು ಪವಿತ್ರ ಕ್ಷೇತ್ರಗಳಾಗಿ ಮಹತ್ವ ಪಡೆದಿವೆ.

ಪುರಾಣ ಪ್ರಸಿದ್ಧನಾದ ಸಗರ ಚಕ್ರವರ್ತಿಯು ಸಗರ ನಾಡನ್ನು ತನ್ನ ರಾಜಧಾನಿಯನ್ನಾಗಿಸಿ ಕೊಂಡಿದ್ದನೆಂಬುದು ಪೌರಣಿಕ ನಂಬಿಕೆ. ಪುರಾಣಗಳು ಹೇಳುವಂತೆ ಇಕ್ಷ್ವಾಕು ವಂಶದ ಅಂಬರೀಷನೆಂಬ ರಾಜ ಪರಮಜ್ಞಾನಿಯೂ, ರಾಜರ್ಷಿಯೂ ಎಂದು ಪ್ರಸಿದ್ಧಿ ಹೊಂದಿದ್ದನು. ಆತ ಮನುಪುತ್ರ ನಭಗನ ಮಗನಾದ ನಾಭಾಗನ ಮಗನು. ಅಂಬರೀಷ ಬ್ರಹ್ಮನ ಶಾಪದಿಂದ ಮರಣ ಅಪ್ಪಿದನು. ಇದೇ ವಂಶದಲ್ಲಿ ಜನಿಸಿದ ತ್ರಿಶಂಕು (ಸತ್ಯವ್ರತ)ನಿಗೆ ಹರಿಶ್ಚಂದ್ರನೆಂಬ ಮಗ ಜನಿಸಿದನು. ಹರಿಶ್ಚಂದ್ರನಿಂದ ರೋಹಿತ, ರೋಹಿತನಿಂದ ಹರಿತ, ಹರಿತನಿಂದ ಚಂಪ, ಚಂಪನಿಂದ ಸುದೇವ, ಸುದೇವನಿಂದ ವಿಜಯ, ವಿಜಯನಿಂದ ಭರುಕ, ಭರುಕನಿಂದ ವಕ್ರ, ವಕ್ರನಿಂದ ಬಾಹುಕ ಹೀಗೆ ಸಾಗುತ್ತದೆ. ಇಕ್ವಾಕು ವಂಶವಾಹಿನಿ. ಆದರೆ ಬಾಹುಕನಿಂದ ಶತ್ರುಗಳು ರಾಜ್ಯವನ್ನು ಕಸಿದುಕೊಂಡರು. ಮುಂದೆ ಈತ ತನ್ನ ಪತ್ನಿ ಯಾದವಿಯೊಂದಿಗೆ ಅರಣ್ಯಕ್ಕೆ ತೆರಳಿ ಜೀವ ತ್ಯಾಗ ಮಾಡಿದನು. ಯಾದವಿ

ಸಹಗಮನ ಮಾಡುವ ಉದ್ದೇಶದಿಂದ ಚಿತೆಯನ್ನು ಏರಲು ಸಿದ್ಧಳಾದಳು. ಆದರೆ ಅವಳು ಗರ್ಭವತಿಯಾಗಿದ್ದರಿಂದ ಭಾರ್ಗವ ಮುನಿ ಅವಳನ್ನು ತಡೆದರು. ಆಕೆಯ ಸವತಿಯರು ಆಕೆಗೆ ಕೆಡು ಬಯಸಿ ವಿಷ ಉಣಿಸಿ ಭ್ರೂಣ ಹತ್ಯೆ ಮಾಡಲು ಪ್ರಯತ್ನಿಸಿದರು. ''ಆಕೆಯ ಊಟದಲ್ಲಿ ವಿಷ (ಗರ) ಬೆರೆಸಿದರು. ಆದರೆ ಆಕೆಯ ಗರ್ಭದ ಮೇಲೆ ವಿಷದ ಯಾವ ಪರಿಣಾಮವೂ ಆಗಲಿಲ್ಲ. ಅದರ ಬದಲಾಗಿ ಗರದೊಡನೆಯೇ 'ಸಗರ'ನ ಜನ್ಮವಾಯಿತು'',[೬] ಈ ಕಾರಣದಿಂದ ಭಾರ್ಗವ ಮುನಿ ಇವನಿಗೆ ಸಗರನೆಂದು ಹೆಸರಿಟ್ಟರು. ಈತನೇ ಮುಂದೆ ಸಗರ ಚಕ್ರವರ್ತಿ ಎನಿಸಿಕೊಂಡನು.

## ಛಾಯಾಭಗವತಿ :

ಕೃಷ್ಣಾ ನದಿ ತೀರದಲ್ಲಿರುವ 'ಛಾಯಾಭಗವತಿ'ಯು ಸೂರ್ಯನಿಗೆ ಸಂಬಂಧಿಸಿದ ಈ ನಾಡಿನ ಇನ್ನೊಂದು ಪುರಾಣ ಪ್ರಸಿದ್ಧ ಸ್ಥಳವಾಗಿದೆ. ಒಮ್ಮೆ ಸೂರ್ಯನ ಹೆಂಡತಿಯಾದ ಸಂಧ್ಯಾ ಸೂರ್ಯನ ಶಾಖದ ತಾಪವನ್ನು ತಾಳದೆ ತವರು ಮನೆಗೆ ಹೊರಡಲು ಸಿದ್ಧಳಾದಳು. ತನ್ನ ಸ್ಥಳದಲ್ಲಿ ತನ್ನ ಪ್ರತಿರೂಪವನ್ನು ಮಾಡಿ ಅದಕ್ಕೆ ಛಾಯೆ ಎಂದು ಹೆಸರಿಟ್ಟು ಹೊರಟು ಹೋದಳು. ನಂತರ ಸೂರ್ಯ ಛಾಯೆಯನ್ನು ಸಂಧ್ಯಾ ಎಂದು ತಿಳಿದು ಅವಳೊಂದಿಗೆ ಜೀವನ ನಡೆಸಿದ. ನಂತರದಲ್ಲಿ ವಿಷಯ ತಿಳಿದ ''ಸೂರ್ಯ ಸಂಧ್ಯಾ ಇದ್ದಲ್ಲಿಗೆ ಹೋದನು. ಇತ್ತ ಛಾಯೆ ಒಂಟಿತನದಿಂದ ಜೀವನ ಸಾಗಿಸಿದಳು. ನಂತರದಲ್ಲಿ ಸೂರ್ಯನಿಗೆ ತನ್ನ ತಪ್ಪಿನ ಅರಿವಾಗಿ ಪಶ್ಚಾತ್ತಾಪ ಪಟ್ಟನು.''[೮] ತನ್ನ ಪಾಪ ಪರಿಹಾರ ಮಾಡಿಕೊಳ್ಳಲು ತನ್ನ ಪ್ರಥಮ ಸೂರ್ಯ ಕಿರಣವನ್ನು ಅವಳ ಪಾದಕ್ಕೆ ತಾಕಿಸುವನು. ಇಂದಿಗೂ ಈ ದೇವಿಯ ಹೆಸರಲ್ಲಿ ಜಾತ್ರೆ ನಡೆಯುತ್ತದೆ. ಸುತ್ತ ಮುತ್ತಲಿನ ಗ್ರಾಮಗಳಷ್ಟೆ ಅಲ್ಲದೇ, ಜಿಲ್ಲೆಯಿಂದ ಅನೇಕ ಜನರು ಬಂದು ದೇವಿಯ ದರ್ಶನ ಪಡೆಯುತ್ತಾರೆ.

## ಮಂದಾಕಿನಿ ಮಹಾತ್ಮ:

ಹೇಮಕೂಟ ಸೋದರನೆಂದು ಪ್ರಸಿದ್ಧಿ ಹೊಂದಿದ 'ಸಗರಾದ್ರಿ'ಯು ಮನೋಹರವಾಗಿದೆ. ಈ ನಾಡನ್ನು ಸಗರ ಚಕ್ರವರ್ತಿಯು ಆಳ್ವಿಕೆ ಮಾಡುತ್ತಿದ್ದನು. ಈತನಿಗೆ ಕೇಶಿನಿ ಹಾಗೂ ಸುಮತಿ ಎಂಬ ಇಬ್ಬರು ರಾಣಿಯರು. ಕೇಶಿನಿಗೆ ೬೦,೦೦೦ ಮಕ್ಕಳು, ಸುಮತಿಗೆ ಅಸಮಂಜಸನೆಂಬ ಒಬ್ಬನೇ ಮಗ. ಸಗರ ಚಕ್ರವರ್ತಿಗೆ ಇಂದ್ರ ಪದವಿ

ಸಹಗಮನ ಮಾಡುವ ಉದ್ದೇಶದಿಂದ ಚಿತೆಯನ್ನು ಏರಲು ಸಿದ್ಧಳಾದಳು. ಆದರೆ ಅವಳು ಗರ್ಭವತಿಯಾಗಿದ್ದರಿಂದ ಭಾರ್ಗವ ಮುನಿ ಅವಳನ್ನು ತಡೆದರು. ಆಕೆಯ ಸವತಿಯರು ಆಕೆಗೆ ಕೆಡು ಬಯಸಿ ವಿಷ ಉಣಿಸಿ ಭ್ರೂಣ ಹತ್ಯೆ ಮಾಡಲು ಪ್ರಯತ್ನಿಸಿದರು. "ಆಕೆಯ ಊಟದಲ್ಲಿ ವಿಷ (ಗರ) ಬೆರೆಸಿದರು. ಆದರೆ ಆಕೆಯ ಗರ್ಭದ ಮೇಲೆ ವಿಷದ ಯಾವ ಪರಿಣಾಮವೂ ಆಗಲಿಲ್ಲ. ಅದರ ಬದಲಾಗಿ ಗರದೊಡನೆಯೇ 'ಸಗರ'ನ ಜನ್ಮವಾಯಿತು",[೬] ಈ ಕಾರಣದಿಂದ ಭಾರ್ಗವ ಮುನಿ ಇವನಿಗೆ ಸಗರನೆಂದು ಹೆಸರಿಟ್ಟರು. ಈತನೇ ಮುಂದೆ ಸಗರ ಚಕ್ರವರ್ತಿ ಎನಿಸಿಕೊಂಡನು.

## ಛಾಯಾಭಗವತಿ :

ಕೃಷ್ಣಾ ನದಿ ತೀರದಲ್ಲಿರುವ 'ಛಾಯಾಭಗವತಿ'ಯು ಸೂರ್ಯನಿಗೆ ಸಂಬಂಧಿಸಿದ ಈ ನಾಡಿನ ಇನ್ನೊಂದು ಪುರಾಣ ಪ್ರಸಿದ್ಧ ಸ್ಥಳವಾಗಿದೆ. ಒಮ್ಮೆ ಸೂರ್ಯನ ಹೆಂಡತಿಯಾದ ಸಂಧ್ಯಾ ಸೂರ್ಯನ ಶಾಖದ ತಾಪವನ್ನು ತಾಳದೆ ತವರು ಮನೆಗೆ ಹೊರಡಲು ಸಿದ್ಧಳಾದಳು. ತನ್ನ ಸ್ಥಳದಲ್ಲಿ ತನ್ನ ಪ್ರತಿರೂಪವನ್ನು ಮಾಡಿ ಅದಕ್ಕೆ ಛಾಯೆ ಎಂದು ಹೆಸರಿಟ್ಟು ಹೊರಟು ಹೋದಳು. ನಂತರ ಸೂರ್ಯ ಛಾಯೆಯನ್ನು ಸಂಧ್ಯಾ ಎಂದು ತಿಳಿದು ಅವಳೊಂದಿಗೆ ಜೀವನ ನಡೆಸಿದ. ನಂತರದಲ್ಲಿ ವಿಷಯ ತಿಳಿದ "ಸೂರ್ಯ ಸಂಧ್ಯಾ ಇದ್ದಲ್ಲಿಗೆ ಹೋದನು. ಇತ್ತ ಛಾಯೆ ಒಂಟಿತನದಿಂದ ಜೀವನ ಸಾಗಿಸಿದಳು. ನಂತರದಲ್ಲಿ ಸೂರ್ಯನಿಗೆ ತನ್ನ ತಪ್ಪಿನ ಅರಿವಾಗಿ ಪಶ್ಚಾತ್ತಾಪ ಪಟ್ಟನು."[೭] ತನ್ನ ಪಾಪ ಪರಿಹಾರ ಮಾಡಿಕೊಳ್ಳಲು ತನ್ನ ಪ್ರಥಮ ಸೂರ್ಯ ಕಿರಣವನ್ನು ಅವಳ ಪಾದಕ್ಕೆ ತಾಕಿಸುವನು. ಇಂದಿಗೂ ಈ ದೇವಿಯ ಹೆಸರಲ್ಲಿ ಜಾತ್ರೆ ನಡೆಯುತ್ತದೆ. ಸುತ್ತ ಮುತ್ತಲಿನ ಗ್ರಾಮಗಳಷ್ಟೆ ಅಲ್ಲದೇ, ಜಿಲ್ಲೆಯಿಂದ ಅನೇಕ ಜನರು ಬಂದು ದೇವಿಯ ದರ್ಶನ ಪಡೆಯುತ್ತಾರೆ.

## ಮಂದಾಕಿನಿ ಮಹಾತ್ಮ :

ಹೇಮಕೂಟ ಸೋದರನೆಂದು ಪ್ರಸಿದ್ಧಿ ಹೊಂದಿದ 'ಸಗರಾದ್ರಿ'ಯು ಮನೋಹರವಾಗಿದೆ. ಈ ನಾಡನ್ನು ಸಗರ ಚಕ್ರವರ್ತಿಯು ಆಳ್ವಿಕೆ ಮಾಡುತ್ತಿದ್ದನು. ಈತನಿಗೆ ಕೇಶಿನಿ ಹಾಗೂ ಸುಮತಿ ಎಂಬ ಇಬ್ಬರು ರಾಣಿಯರು. ಕೇಶಿನಿಗೆ ೬೦,೦೦೦ ಮಕ್ಕಳು, ಸುಮತಿಗೆ ಅಸಮಂಜಸನೆಂಬ ಒಬ್ಬನೇ ಮಗ. ಸಗರ ಚಕ್ರವರ್ತಿಗೆ ಇಂದ್ರ ಪದವಿ

ಪಡೆಯಬೇಕೆಂಬ ಹಂಬಲವಿತ್ತು. ಅದಕ್ಕಾಗಿ ಶತಕ್ರುತು ಯಜ್ಞವನ್ನು ಮಾಡಲಾರಂಭಿಸಿದನು. ಈ ವಿಷಯ ಇಂದ್ರನಿಗೆ ತಿಳಿಯಿತು. ಇಂದ್ರ ತನ್ನ ಪದವಿಯನ್ನು ಬಿಡಲಾಗದೆ. ಸಗರನ ಯಜ್ಞ ಪೂರ್ಣಗೊಳ್ಳದಂತೆ ಪ್ರಯತ್ನಿಸಿದ. ಸಗರನ ಮಕ್ಕಳು ಸಾಯಂಕಾಲ ಸಂಧ್ಯಾವಂದನೆಯನ್ನು ಮುಗಿಸಿಕೊಂಡು ಬರುತ್ತಿರುವಾಗ ಯಜ್ಞದ ಕುದುರೆಗಳು ತಪ್ಪಿಸಿಕೊಂಡವು. ಸಗರನ ಮಕ್ಕಳು ಕುದುರೆಯನ್ನು ಅರಸುತ್ತಾ ಪದ್ಮ ಸರೋವರದ ಕಡೆ ಬಂದರು. ಅಲ್ಲಿ ದನ ಕಾಯುತ್ತಿದ್ದ ಮಕ್ಕಳನ್ನು, ತಮ್ಮ ಕುದುರೆಗಳು ಇತ್ತ ಕಡೆ ಬಂದಿವೆಯೇ ಎಂದು ಕೇಳಿದರು. ಆಗ ಆ ದನ ಕಾಯುವ ಮಕ್ಕಳು ಸರೋವರದ ಬಳಿ ಇರುವ ಗುಹೆ ಒಳಗೆ ಕುದುರೆಗಳು ಹೋಗಿರುವ ವಿಷಯ ತಿಳಿಸಿದರು. ಆಗ ಸಗರನ ಮಕ್ಕಳು ಗುಹೆ ಒಳಗೆ ಹೋದರು. ಅಲ್ಲಿ ಕಪಿಲ ಮಹರ್ಷಿಗಳು ತಪಸ್ಸು ಮಾಡುತ್ತಿದ್ದರು. ಆ ಋಷಿ ಬಳಿ ಕುದುರೆಗಳು ಬಿಟ್ಟು ಇಂದ್ರ ಮಾಯವಾದ್ದ. ಇದು ಇಂದ್ರನ ಕುತಂತ್ರವೇ ಆಗಿತ್ತು. ಈ ಋಷಿ ಮುನಿಗಳೇ ತಮ್ಮ ಕುದುರೆಯನ್ನು ಕದ್ದಿರಬಹುದೆಂದು ತಿಳಿದು ಅವರ ತಪಸ್ಸನ್ನು ಭಂಗ ಗೊಳಿಸಿದರು. ಆಗ ಋಷಿಗಳು ಕಣ್ಣು ತೆಗೆದು ಸಗರನ ಮಕ್ಕಳನ್ನು ಚಿತಾ ಭಸ್ಮಗೊಳಿಸಿದರು. ಇದರಿಂದ ಸಗರನ ಯಜ್ಞ ಪೂರ್ಣಗೊಳ್ಳಲಿಲ್ಲ. ಅಸಮಂಜಸನ ಮಗ ಅಂಶುವಂತನು ತನ್ನ ತಂದೆ ಆಜ್ಞೆಯಂತೆ ಗುಹೆಗೆ ಬಂದು ಕಪಿಲ ಮಹರ್ಷಿಗಳಲ್ಲಿ ಪ್ರಾರ್ಥನೆ ಮಾಡಿಕೊಂಡನು. ಆಗ ಋಷಿಮುನಿಗಳು “ದೇವಗಂಗೆ ಭೂಮಿಗಿಳಿದು ಬಂದು ಆ ಭಸ್ಮರಾಶಿಯ ಮೇಲೆ ಹರಿದಾಗಲೇ ಅವರಿಗೆ ಮುಕ್ತಿ ಎಂದು ತಿಳಿಸಿದರು.”[೯] ಆಗ ಅಂಶುವಂತ ತನ್ನ ತಾತನಿಗೆ ೯೯ ಯಜ್ಞ ಕುದುರೆಗಳನ್ನು ಕೊಟ್ಟು ಯಜ್ಞ ಪೂರ್ಣಗೊಳ್ಳಲು ಸಹಾಯ ಮಾಡಿದ. ಆದರೆ ವೃದ್ಧ್ಯಾಪದಿಂದ ಸಗರರಾಯನಿಗೆ ಯಜ್ಞ ಪೂರ್ಣ ಮಾಡಲು ಆಗಲಿಲ್ಲ.

ಕೊನೆಗೆ ಸಗರರಾಯ ತನ್ನ ಮೊಮ್ಮಗನಾದ ಅಂಶುವಂತನಿಗೆ ರಾಜ್ಯಬಾರವನ್ನು ಒಪ್ಪಿಸಿದನು. ಅಂಶುವಂತ ತನ್ನ ಮಗ ದೀಲಿಪನಿಗೆ ರಾಜ್ಯವನ್ನು ನೀಡಿ ತಾನು ಸಹ ತಪಸ್ಸನ್ನು ಕೈಗೊಂಡನು. ಜೀವನ ಪೂರ್ತಿ ತಪಸ್ಸು ಕೈಗೊಂಡ ಸಗರಾಯನ ಮಕ್ಕಳು ಪಾಪಗ್ರಸ್ಥರಾಗಿದ್ದರು. ಅವರನ್ನು ಮುಕ್ತಿಗೊಳಿಸಲು ಪ್ರಯತ್ನಿಸಿದರೂ ವಿಫಲವಾಯಿತು. ಕೊನೆಗೆ ಭಗೀರಥನ ಪ್ರಯತ್ನದಿಂದ “ಭಾಗೀರಥಿಯು ಸೀತಾ, ಅಲಕಾ, ನಂದಾ ಮತ್ತು ಭದ್ರಾ ಎಂಬ ನಾಲ್ಕು ರೂಪದಲ್ಲಿ ಧರೆಗೆ ಬಂದಳು. ‘ನಂದಾ’ ಎಂಬ ಪ್ರವಾಹವೇ ಸಗರಾಚಲಕ್ಕೆ ಹರಿದು ಬಂದು ಸರೋವರವನ್ನು ಸೇರಿ ಸಗರರಾಯನ ಮಕ್ಕಳನ್ನು ಉದ್ಧರಿಸಿದಳು.”[೧೦] ಅವಳೇ ಮಂದಾಕಿನಿ. ಈ ದೇವಿಯ ದರ್ಶನ ಪಡೆಯಲು ಅನೇಕ ಜನರು ಬರುತ್ತಾರೆ. ಇವಳು ಪಾಪವನ್ನು ತೊಳೆಯುವ ಪಾಪನಾಶಿನಿಯೂ ಆಗಿದ್ದಾಳೆ.

ಪುರಾಣ ಪ್ರಸಿದ್ಧನೂ, ಶಕ್ತಿಶಾಲಿಯೂ ಆದ ಸಗರ ಚಕ್ರವರ್ತಿ ದಕ್ಷಿಣ ಭಾಗವನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದನು ಎಂಬುದಕ್ಕೆ ಈ ಶ್ಲೋಕವೇ ನಿದರ್ಶನ.

"ಚತುರ್ದಿಕ್ಷು ಮಹಾದ್ವಾರೈಶ್ವ ತುರ್ಭಶ್ಚ ಸಮಾವೃತಂ ॥

ಪ್ರಖ್ಯಾತಂ ಭೂತಲೇ ನಾಮ್ನಾ ಸಾಗರಪುರೀತಿಚ ॥

ಗಿರಿರಥಸ್ಥಿತೇ ತಸ್ಮಿನ್ ಪುರೇ ಸೂರ್ಯಾನ್ವಯೋಭವ: ॥

ಆಸೀದ್ರಾಜಾ ಮಹಾನ್ನಾಮ್ನಾ ಸಗರಾಖ್ಯ ಪ್ರತಾಪವಾನ್ ॥ : [೧೧]

ಸಗರಾದ್ರಿ ಶಹಾಪುರ ಸಮೀಪ ಇರುವ ಬೆಟ್ಟದ ಕೆಳಗಡೆಯಿರುವ ಸಾಗರಪುರಿ, ಸಗರಪುರದಲ್ಲಿ ಸೂರ್ಯವಂಶದ ಅರಸನಾದ ಸಗರನು ಪ್ರಖ್ಯಾತಿ ಪಡೆದು ಚತುರಂಗ ಬಲದಿಂದ ಆಳ್ವಿಕೆ ಮಾಡಿ, ಮಂತ್ರಿಗಳು ಸೇವಕರು ಮುಂತಾದವರು ಕೂಡಿಕೊಂಡು ಉತ್ತಮವಾದ ರೀತಿಯಲ್ಲಿ ಆಳ್ವಿಕೆ ಮಾಡುತ್ತಿದ್ದನೆಂಬುದು ಈ ಶ್ಲೋಕದಿಂದ ತಿಳಿದು ಬರುತ್ತದೆ.

ಇತಿಹಾಸ ಕಾಲದಿಂದಲೂ ಸಗರನಾಡು ಎಂದು ಪ್ರಖ್ಯಾತಿ ಪಡೆದ ಈ ನಾಡಿಗೆ ಸಗರ, ಸಾಗರಪುರಿ, ಸಗರಪುರ, ಸಗರಗಡ್ಡಿ, 'ಜಂಭೂದ್ವೀಪ, ದಂಡಕಾರಣ್ಯ' ಎಂದು ಕರೆಯಲಾಗುತ್ತಿತ್ತು. ಜಂಭೂದ್ವೀಪವನ್ನು ಅನೇಕ ಅರಸರು ಹಂಚಿಕೊಂಡು ಆಳ್ವಿಕೆ ಮಾಡುತ್ತಿದ್ದರು. ದಂಡಕನೆಂಬುವವನು ಈ ಭಾಗವನ್ನು ಆಳ್ವಿಕೆ ಮಾಡುತ್ತಿದ್ದ ಕಾರಣ ದಂಡಕಾರಣ್ಯ ಎಂದು ಕರೆಯುತ್ತಿರಬಹುದು. ಆದರೆ ಈ ಸೀಮೆಗೆ ಸಗರನಾಡು ಎನ್ನುವ ರೂಢಿ ಈ ನಾಡಿನ ಪ್ರತಿ ಹಳ್ಳಿಯಲ್ಲೂ ಬಂದಿದೆ. "ಸಗರ ಸಾವಿರ ಹಳ್ಳಿ ಏಕ ದೋರನ ಹಳ್ಳಿ"[೧೨] ಎಂದು ಖ್ಯಾತಿ ಪಡೆದಿದೆ. ಸಗರನಾಡು ಒಂದು ಸಾವಿರದಾ ಒಂದು ಹಳ್ಳಿಗಳಿಂದ ಕೂಡಿದ ನಾಡು ಒಂದು ದೋರನಹಳ್ಳಿಗೆ ಸಮಾನ ಎಂಬ ಅರ್ಥವಿರಬಹುದು.

ಶಹಾಪುರ ತಾಲೂಕಿನಲ್ಲಿ ತಿರುಪತಿ ತಿಮ್ಮಪ್ಪ ಬಂದು ನೆಲೆಸಿದ. ಭೀಮಾ ನದಿಯಾಚೆಯಿರುವ ಸನ್ನತಿ ಚಂದ್ರಲಾಂಬೆಗೆ ಪದ್ಮಾವತಿ ಎಂದು ಕರೆಯಲಾಗುತಿತ್ತು. "ತಿಮ್ಮಪ್ಪ ಗವಿಯಲ್ಲಿ ಬಂದು ನೆಲೆಸಿದ. ತನ್ನ ಗವಿಯಿಂದ ಸನ್ನತಿ ಚಂದ್ರಲಾಂಬೆ ದೇವಾಲಯದವರೆಗೂ ಸುರಂಗ ಮಾರ್ಗವಿತ್ತು. ಈ ಮಾರ್ಗದಿಂದಲೇ ಇವರಿಬ್ಬರು ಸಂಧಿಸುತ್ತಿದ್ದರು."[೧೩] ಹಾಗಾಗಿ ತಿರುಪತಿ ತಿಮ್ಮಪ್ಪ ಗವಿರಂಗನಾಥನೆಂದು ಪ್ರಸಿದ್ಧಿ ಪಡೆದನು ಎಂದು ಪುರಾಣದಿಂದ ತಿಳಿದು ಬರುತ್ತದೆ.

ಶಹಾಪುರ ಬೆಟ್ಟದಲ್ಲಿ ಪಾಂಡವರು ವನವಾಸಕ್ಕೆ ಹೋಗುವಾಗ ಇಲ್ಲಿ ಕೆಲ ಕಾಲ ಉಳಿದು ಓಡಾಡಿದ್ದರು. "ಅವರ ಪಾದದ ಗುರುತು ಈ ಬಂಡೆಗಳ ಮೇಲೆ ಮೂಡಿವೆ. ಹಾಗಾಗಿ ಭೀಮನ ಗವಿ"[೧೪] ಎಂದು ಇದಕ್ಕೆ ಕರೆಯುತ್ತಾರೆ.

ಜೇವರ್ಗಿ ತಾಲೂಕಿಗೆ ಒಮ್ಮೆ ಭೀಕರ ಬರಗಾಲ ಸಂಭವಿಸಿತ್ತು. ಜನರು ಕಂಗಾಲಾಗಿ ಭಯ ಭೀತಿಗೊಂಡರು. ಇವರ ರಕ್ಷಣೆಗಾಗಿ ಒಬ್ಬ ಕಾವಿಯ ಜಟಾಧಾರಿ ಕಲ್ಯಾಣಕ್ಕೆ ಹೋಗುತ್ತಿರುವಾಗ ಇಲ್ಲಿಗೆ ಬಂದು ವಿಶ್ರಾಂತಿ ಪಡೆಯುತ್ತಿದ್ದನು. ಜನರೆಲ್ಲ ಅವನನ್ನು ತಮ್ಮ ಪಾಲಿಗೆ ಬಂದ ದೇವರೆಂದು ಬಗೆದು, ಎಲ್ಲರೂ ನಮಸ್ಕರಿಸಿ ತಮ್ಮ ಕಷ್ಟಕ್ಕೆ ಪರಿಹಾರ ಕೇಳಿದರು. ಆಗ ಕಾವಿಯ ಜಟಾಧಾರಿ ಜನರಿಗೆ ಹೆದರದಿರಿ, ದುಃಖ ಪಡಬೇಡಿ "ಶಿವನ ಜಡೆಯಲ್ಲಿ ಕುಳಿತ ಗಂಗೆ ಝುರಿಯಾಗಿ ಹರಿದು ನಿಮ್ಮ ಕಷ್ಟ ಪರಿಹಾರ ಮಾಡುವಳು"[೧೫] ಎಂದು ಹೇಳಿದ. ಅಂದೇ ರಾತ್ರಿ ಆ ಕಾವಿಯ ಜಟಾಧಾರಿ ಕುಳಿತು ಧ್ಯಾನಗೈದ ಬಂಡೆಗಲ್ಲಿನ ಸಂಧಿಯಿಂದಲೇ ನೀರಿನ ಝುರಿ ಬರಲು ಪ್ರಾರಂಭಿಸಿತು. ಈ ಜಟಾಧಾರಿಯೇ ಅಖಂಡೇಶ್ವರರು. ಅವರು ಕುಳಿತು ಧ್ಯಾನ ಮಾಡಿದ ಬಂಡೆಗಲ್ಲಿಗೆ ಬತ್ತದ ಬುಗ್ಗಿ ಎಂದು ಪ್ರಸಿದ್ಧಿ ಪಡೆಯಿತು. ಈ ರೀತಿ ಅನೇಕ ಪೌರಾಣಿಕ ಐತಿಹ್ಯ ಪಡೆದ ನಾಡು ಈ ಸಗರನಾಡು.

## ೨.೩. ಪ್ರಾಗಿತಿಹಾಸ :

ನೈಸರ್ಗಿಕ ಸಂಪನ್ಮೂಲಗಳಿಂದ ಸಂಪದ್ಭರಿತವಾಗಿರುವ ಸಗರನಾಡಿನಲ್ಲಿ ಕೃಷ್ಣಾ ಹಾಗೂ ಇತರ ಉಪ ನದಿಗಳು ಹರಿದು ಪ್ರಾಚೀನ ಕಾಲದ ಜನರು ಇಲ್ಲಿ ವಾಸಿಸುವಂತೆ ಮಾಡಿದ್ದವು. ಈ ನಾಡಿನಲ್ಲಿ ಹಬ್ಬಿರುವ ಬೆಟ್ಟ ಗುಡ್ಡಗಳ ಸಾಲು ನೋಡಲು ಸುಂದರ, ರಮಣೀಯವಾಗಿವೆ. ತ್ರಾಮ, ಕಬ್ಬಿಣ ಮುಂತಾದ ಖನಿಜ ಸಂಪನ್ಮೂಲಗಳಿಂದ ತುಂಬಿದೆ. ಹೀಗಾಗಿ ಪ್ರಾಚೀನ ಸಂಸ್ಕೃತಿಯ ನೆಲೆಯಲ್ಲಿ ಜನಾಂಗ ಒಂದೆಡೆ ನಿಲ್ಲಲು ಪ್ರಾಂಭಿಸಿದರು. ಇಂತಹ ಸುಂದರ ಪ್ರದೇಶದಲ್ಲಿ ಪ್ರಾಚೀನ ಕಾಲದ ಜನಾಂಗದವರ ಕುರುಹುಗಳು ಸಿಕ್ಕಿರುವುದರಿಂದ ಈ ನಾಡಿನ ಸಾಂಸ್ಕೃತಿಕ ಅಧ್ಯಯನಕ್ಕೆ ಸಹಾಯಕವಾಗಿವೆ.

ಸಗರನಾಡಿನಲ್ಲಿ ಆದಿ ಹಳೆಯ ಶಿಲಾಯುಗ, ಮಧ್ಯಹಳೆಯ ಶಿಲಾಯುಗ, ಅಂತ್ಯ ಹಳೆಯ ಶಿಲಾಯುಗ, ಸೂಕ್ಷ್ಮ ಶಿಲಾಯುಗ, ನೂತನ ಶಿಲಾಯುಗ, ಶಿಲಾತಾಮ್ರಯುಗ, ಕಬ್ಬಿಣಯುಗದ ಬೃಹತ್ ಶಿಲಾಯುಗ ಮತ್ತು ಇತಿಹಾಸ ಆರಂಭ ಯುಗದ ಕುರುಹುಗಳು ದೊರೆತಿವೆ. ಇದರಿಂದ ಈ ನಾಡು ಜನವಸತಿ ಪ್ರದೇಶವಾಗಿತ್ತೆಂದು ತಿಳಿದುಬರುತ್ತದೆ.

ಭಾರತದ ಪ್ರಾಗಿತಿಹಾಸದ ಅಧ್ಯಯನದ ಆರಂಭ ಕರ್ನಾಟಕ ಪ್ರದೇಶದಿಂದಲೇ ಆಗಿದೆ ಎನ್ನುವುದು ಒಂದು ಪ್ರಮುಖ ಸಂಗತಿಯಾಗಿದೆ. "ಬ್ರಿಟಿಷ ಅಧಿಕಾರಿ ಕ್ಯಾಪ್ಟನ್ ಕ್ಯೂಬೋಲ್ಡ್ ೧೮೩೬ರಲ್ಲಿ ಮಾಡಿದ ಕುಡಿತಿನಿ ಮತ್ತು ಕುಪ್ಪಗಲ್‌ನ ಬೂದಿ ದಿಬ್ಬ ನೆಲೆಗಳು ಪ್ರಪ್ರಥಮ ಶೋಧವಾಗಿವೆ."[೧೬] ಭಾರತದ ಭೂಭಾಗವು ಸಹ ಮಾನವನ ಅತೀ ಪ್ರಾಚೀನ ವಾಸ್ತವ್ಯ ನೆಲೆಗಳಲ್ಲೊಂದು ಎಂದು ಎತ್ತಿತೋರಿಸಿದ ರಾಬರ್ಟ ಬ್ರೂಸ್ ಪೂಟ್‌ರನ್ನು ಭಾರತದ ಪ್ರಾಗಿತಿಹಾಸದ ಪಿತಾಮಹ ಎಂದು ಕರೆಯಲಾಗುತ್ತದೆ.

ರಾಬರ್ಟ ಬ್ರೂಸಪೂಟ್‌ರು ೧೯ನೇ ಶತಮಾನದ ಆದಿ ಭಾಗದ ಹಳೆ ಶಿಲಾಯುಗದ ಸೇದಿ ಕಲ್ಲಿನ ಕೊಡಲಿಗಳನ್ನು ಎಡೆಹಳ್ಳಿಯಲ್ಲಿ ಪತ್ತೆ ಹಚ್ಚಿದ್ದಾರೆ. "ಸುರಪುರ ಸಂಗಮ ಪ್ರದೇಶದ ಪ್ರಾಗಿತಿಹಾಸ ಮತ್ತು ಪೂರ್ವಭಾವಿ ಇತಿಹಾಸ ಸಂಸ್ಕೃತಿಗಳು" ಎಂಬ ವಿಷಯವನ್ನು ಕೆ. ಪೆದ್ದಯ್ಯನವರು ತಮ್ಮ ಪಿಹೆಚ್.ಡಿ ಪದವಿಗಾಗಿ ಆಯ್ಕೆ ಮಾಡಿಕೊಂಡು ಈ ಭಾಗದಲ್ಲಿ ಸಂಶೋಧನೆ ಮಾಡಿದ್ದು ಇಲ್ಲಿ ಸ್ಮರಿಸಬಹುದಾಗಿದೆ. ಅದೇ ರೀತಿ ಕರ್ನಲ್ ಮೆಡೋಸ್ ಟೈಲರ್, ಅ.ಸುಂದರ, ಎಸ್.ನಾಗರಾಜು, ಕಪಟರಾಳ ಕೃಷ್ಣರಾಯರು, ಎಸ್.ಶೇಷಾದ್ರಿ, ಪಿ.ಬಿ.ದೇಸಾಯಿ, ಎಂ.ಎಸ್. ನಾಗರಾಜರಾವ್ ಹೀಗೆ ಅನೇಕ ಸಂಶೋಧಕರು ಈ ಭಾಗದಲ್ಲಿ ಶೋಧನೆ ಮಾಡಿದ್ದು ಶ್ಲಾಘನೀಯವಾಗಿದೆ.

## ಆದಿ ಹಳೆಯ ಶಿಲಾಯುಗ :

ಭಾರತದಲ್ಲಿ ಆದಿ ಹಳೆಯ ಶಿಲಾಯುಗದ ಕುರುಹುಗಳು ೧೮೬೩ರಲ್ಲಿ ಬೆಳಕಿಗೆ ಬಂದಿವೆ. ಈ ಶಿಲಾಯುಗ ಒಂದು ಲಕ್ಷದಿಂದ, ನಾಲ್ಕು ಲಕ್ಷ ವರ್ಷಗಳಷ್ಟು ಪೂರ್ವದಲ್ಲಿತ್ತು. ಕೆ. ಪೆದ್ದಯ್ಯನವರು ಈ ಭಾಗದಲ್ಲಿ ಶೋಧನೆ ಮಾಡಿದ್ದಾರೆ. ಕೂಡಲಗಿ, ಅರಕೇರಾ, ಕಚಕನೂರು,. ಹೆಬ್ಬಾಳ, ಚನ್ನೂರು, ದೇವಾಪುರ, ಬೈಚಬಾಳ, ಮುದನೂರು, ಎಡೆಯಪುರ, ಮುಂತಾದ ಕಡೆ ಆದಿ ಹಳೆಯ ಶಿಲಾಯುಗದ ಕುರುಹುಗಳು ಪತ್ತೆಯಾಗಿವೆ. ಈ ಶಿಲಾಯುಗದಲ್ಲಿ ದೊರೆತ ಉಪಕರಣಗಳು ಅಶ್ಯೂಲ್ ಮಾದರಿಯಲ್ಲಿವೆ. ಇವುಗಳಲ್ಲಿ ಕೈಗೊಡಲಿ, ಸೀಳುಗತ್ತಿ, ಮಚ್ಚುಗತ್ತಿ, ಕೊರೆಗ, ದುಂಡಾದ ಚಪ್ಪಟೆ ಉಪಕರಣ, ಮೊನೆ ಕೊಚ್ಚುಗತ್ತಿ, ಕಡಿಗತ್ತಿ ಮುಖ್ಯ ಉಪಕರಣಗಳಾಗಿವೆ. ಇವುಗಳಲ್ಲಿ ಹೆಚ್ಚಾಗಿ ಕೈಗೊಡಲಿಗಳನ್ನು ಬಳಸುತ್ತಿದ್ದರು.

ಅತ್ಯಂತ ಪ್ರಾಚೀನವಾದ ಮಾನವ ವಸತಿಯು ಆದಿ ಹಳೆ ಶಿಲಾಯುಗದ ಹಂತದ್ದು. ಈ ಸಂಸ್ಕೃತಿಯ ಉಪಕರಣಗಳು ಹುಣಸಗಿ ಕಣಿವೆಗೆ ಹರಿಯುವ ಒಂದು ಕಿರು ಹರವಿನ

ದಂಡೆಯ ಮೇಲಿದ್ದು ಪ್ರಮುಖ ಉಪಕರಣ ಮಾದರಿಗಳಾದ "ಕೈಗೊಡಲಿ, ಏಕ ಮತ್ತು ದ್ವಿಮುಖ ಮಚ್ಚುಗತ್ತಿ, ಕೊಚ್ಚುಗುತ್ತಿ, ಚಕ್ಕೆ ಮತ್ತು ಉಂಡೆಕಲ್ಲು ಉಪಕರಣಗಳ ನೆಲೆಗಳು"[೧೬] ಗುಲಬಾಳೆ, ಅಗತೀರ್ಥ, ಇಸಮಪುರ, ಫತೆಪುರ, ಬನಹಟ್ಟಿ, ಬೆನಕನಹಳ್ಳಿ, ಮಲ್ಲೂರ್, ಕುಪ್ಪಿ ಕಾಲ್ದೇವನಹಳ್ಳಿ, ಯಡಿಯಾಪುರ, ಯಡಹಳ್ಳಿಗಳಲ್ಲಿ ಕಂಡುಬಂದಿವೆ. ತೆಗ್ಗಿಹಳ್ಳಿಯಲ್ಲಿ ಅಬ್ಬೆ ವಿಲಿಯನ್ ಮಾದರಿ ಉಪಕರಣ ದೊರೆತಿವೆ. ಆನೆಯ ಅವಶೇಷ ಕೂಡ ದೊರೆತಿವೆ. ಇಂತಹ ಉಪಕರಣಗಳನ್ನು ಆದಿ ಮಾನವರು ಉಪಯೋಗಿಸುತ್ತಿದ್ದರೆಂದು ಸಂಶೋಧಕರು ತಮ್ಮ ಅಧ್ಯಯನಗಳಿಂದ ತೋರಿಸಿಕೊಟ್ಟಿದ್ದಾರೆ.

## ಮಧ್ಯ ಹಳೆಯ ಶಿಲಾಯುಗ :

ರಾಬರ್ಟ ಬ್ರೂಸ್‌ಪೂಟ್‌ರಂತೆ ಆರ್.ಡಿ.ಬ್ಯಾನರ್ಜಿಯವರು ಕರ್ನಾಟಕದಲ್ಲಿ ಈ ಸಂಸ್ಕೃತಿಯ ಉಪಕರಣಗಳನ್ನು ೧೯೫೭ರಲ್ಲಿ ಗುರುತಿಸಿದ್ದಾರೆ. ಈ ಯುಗವು ಆದಿ ಮತ್ತು ಅಂತಿಮ ಹಳೆ ಶಿಲಾಯುಗ ಸಂಸ್ಕೃತಿಗಳ ನಡುವಿನ ಕಾಲದ್ದಾಗಿದೆ. ಇತಿಹಾಸ ತಜ್ಞರು ಇದರ ಕಾಲವನ್ನು "ರೇಡಿಯೋ ಕಾರ್ಬನ್‌ನ ಅನ್ವಯದಂತೆ ಇಂದಿಗೆ ಸುಮಾರು ೧೦,೦೦೦ ದಿಂದ ೪೦,೦೦೦ ವರ್ಷಗಳಷ್ಟು ಪೂರ್ವದಲ್ಲಿತ್ತೆಂದು ಗುರುತಿಸಿದ್ದಾರೆ"[೧೮] ಮಧ್ಯ ಹಳೆಯ ಶಿಲಾಯುಗದ ಸಂಸ್ಕೃತಿಯ ನೆಲೆಯಿದು. ಈ ಸಂಸ್ಕೃತಿಯ ಹಂತದಲ್ಲಿ ಮಾನವನು ವಿವಿಧ ಮಾದರಿಯ ಉಪಕರಣಗಳಾದ ಕಂದು-ಕೆಂಪು, ಬಿಳಿ ವರ್ಣದ ಚರ್ಟ್ ಶಿಲೆಯಲ್ಲಿ ರೂಪಿಸಿದ ಉಪಕರಣಗಳು, ಹೆರೆಚಕ್ಕೆ, ನೀಳಚಕ್ಕೆ, ಹಾಗೂ ಮೊನೆ ಮಾದರಿಯಲ್ಲಿದ್ದ ಚರ್ಟ್ ಜಾಸ್ಪರ್ ಹಾಗೂ ಇನ್ನಿತರ ಶಿಲೆಗಳಲ್ಲಿ ರೂಪಿಸಲಾಗಿದೆ. ಕೊರೆಗ ಕಡಿಗತ್ತಿ. ಮಚ್ಚುಗತ್ತಿ, ಕಿರುಕೊಡಲಿ, ದಬ್ಬಳ, ಕೊರೆಯುಳಿ ಮುಂತಾದ ಉಪಕರಣಗಳು ದೊರೆತಿವೆ. ಇವುಗಳು ತಮ್ಮ ಜೀವನ ನಿರ್ವಹಣೆಗಾಗಿ ಆಯುಧಗಳನ್ನಾಗಿ ಮಾನವನು ಉಪಯೋಗಿಸಿದ್ದಾನೆ. ಇಂತಹ ಉಪಕರಣಗಳು ಸಗರನಾಡಿನಾದ್ಯಂತ ಅನೇಕ ಸ್ಥಳಗಳಲ್ಲಿ ದೊರೆತಿವೆ.

ಮಧ್ಯ ಹಳೆಯ ಶಿಲಾಯುಗ ಸಂಸ್ಕೃತಿಗೆ ಸೇರಿದ ನೆಲೆಗಳೆಂದರೆ, ಚೆನ್ನೂರು, ರಾಜೋಳ್, ಹೋತಿನಮಡು, ತುಮಕೂರು, ಶಹಾಪುರ, ಮಾಚನೂರು, ಲಿಂಗೇರಾ, ಶಿರಿವಾಳ, ಅಗತೀರ್ಥ, ಅಗ್ನಿ, ಅರಿಕೇರಾ, ಇಸಮಪುರ, ಕಾಲ್ದೇದೇವನಹಳ್ಳಿ, ಕೊಲ್ಲೂರು, ಗುಲಬಾಳ, ಗುಡಿಹಾಳ, ಗುಂಡಲಗೇರಾ, ಗುಂಡಿಯನೂರ್, ಚೆಹನೂರ್, ಜೋಗನಿಗುಡ್ಡ, ದೇವಾಪುರ, ಬನಹಟ್ಟಿ, ಬರ್ನಲ್, ಬಪ್ಪರಗಾ, ಬೂಸುರ್ಗ್, ಮಟಕನದೇವನಹಳ್ಳಿ, ಮಲನೂರ್, ಮಸ್ಕನೇಲ್, ಮಾರಲಭಾವಿ, ಮುದನೂರ, ಹಗರಟಗಿ, ಲಿಂಗದಹಳ್ಳಿ,

ವಜ್ಜಲ, ಹುಣಸಗಿ, ಹುರ್‌ಹಟ್ಟಿ, ಹೆಬ್ಬಾಳ, ಭೀಮರಾಯನಗುಡಿ, ಹೀಗೆ ಮುಂತಾದ ನೆಲೆಗಳನ್ನು ತಜ್ಞರು ಗುರುತಿಸಿದ್ದಾರೆ.

## ಅಂತಿಮ ಹಳೆಯ ಶಿಲಾಯುಗ :

ಅಂತಿಮ ಹಳೆ ಶಿಲಾಯುಗ ಸಂಸ್ಕೃತಿಯು ಹಳೆ ಶಿಲಾಯುಗದ ಸಂಸ್ಕೃತಿಯ ಕೊನೆಯ ಹಂತವಾಗಿದೆ. ಪ್ರಪ್ರಥಮ ಬಾರಿಗೆ "ಅ.ಸುಂದರ ಅವರು ೧೯೫೯ರಲ್ಲಿ ಸಾಲವಾಡಗಿಯಲ್ಲಿ ಉಪಕರಣ ಉತ್ಪಾದನಾ ನೆಲೆಯನ್ನು ಗುರುತಿಸಿದ್ದಾರೆ."[೧೯] ಇಂಗಾಲ-೧೪ ಪರೀಕ್ಷೆಯಂತೆ, ಈ ಹಂತದ ಕಾಲಮಾನವು ಇಂದಿಗೆ ಸುಮಾರು ೧೦,೦೦೦ದಿಂದ ೨೫,೦೦೦ ವರ್ಷಗಳಷ್ಟು ಹಿಂದಿನ ಕಾಲದ ಸಂಸ್ಕೃತಿಯಾಗಿದೆ. ನೀಳ ಅಲಗುಗಳು ಹೆರೆಯುವ ವಿವಿಧ ಮಾಧರಿಗಳು ಮೊನೆ ಹೊಂದಿರುವ ಮಾದರಿಗಳು ಚಕ್ಕೆ ಕೊರೆಯುಳಿ, ಕೊರೆಗ, ಅಲಗು, ಮೊನೆ ಮುಂತಾದ ಉಪಕರಣಗಳು ಅಲ್ಲದೆ ಎಲುಬು ದಂತ ಮತ್ತು ಜಿಂಕೆಯ ಕೊಂಬು ಉಪಕರಣಗಳ ಬಳಕೆ ಇದದ್ದು ಕಂಡು ಬರುತ್ತದೆ. ಈ ಉಪಕರಣಗಳ ನೆಲೆಗಳನ್ನು ತಜ್ಞರು ಮಾರಲಬಾವಿಯಲ್ಲಿ ಗುರುತಿಸಿದ್ದಾರೆ.

## ಸೂಕ್ಷ್ಮ ಶಿಲಾಯುಗ :

ಕರ್ನಾಟಕದಲ್ಲಿ ಸೂಕ್ಷ್ಮ ಶಿಲಾಯುಗದ ನಿವೇಶನಗಳು ೧೯೪೯ರ ವೇಳೆಗೆ ಬೆಳಕಿಗೆ ಬಂದಿದೆ. ಈ "ಸಂಸ್ಕೃತಿಯು ಇಂದಿಗೆ ಸುಮಾರು ೨೫,೦೦೦ದಿಂದ ೧೦,೦೦೦ ವರ್ಷಗಳಷ್ಟು ಪೂರ್ವದಲ್ಲಿತ್ತೆಂದು ತಿಳಿಯುತ್ತದೆ."[೨೦] ಬಿಳಿ ವರ್ಣದ ಕ್ವಾರ್ಟ್ಸ ಮತ್ತು ಚರ್ಟ್ ಶಿಲೆಯ ಇಬ್ಬದಿ ನೀಳಚಕ್ಕೆ, ಮೊನೆ, ಹೆರೆಚಕ್ಕೆ, ಕೊರೆಗ, ಉಪಕರಣಗಳು ಹಾಗೂ ನೀಳಗೆರೆಗಳುಳ್ಳ ಮೂಲ ಶಿಲಾಗಟ್ಟಗಳು ದೊರೆತಿವೆ. ಇವುಗಳ ಜೊತೆಗೆ ಅಂದಿನ ಜನರ ಆಹಾರ, ವಸತಿ ಮತ್ತು ಶವಸಂಸ್ಕಾರ ಪದ್ಧತಿಯ ಬಗ್ಗೆಯು ಸಹ ತಿಳಿದು ಬರುತ್ತದೆ. "ಶವಸಂಸ್ಕಾರ ಪದ್ಧತಿಗೆ ಕಿಸ್ಟ್‌ವೇನ್ಸ್ ಎಂದು ಕರೆಯಲಾಗುತ್ತದೆ."[೨೧] ಬೂದಿ, ಎಲುಬು, ಇದ್ದಿಲುಗಳನ್ನು ಮಡಿಕೆಯಲ್ಲಿ ತುಂಬಿ ಅದನ್ನು ಶವದ ಜೊತೆಗೆ ಇಡುತ್ತಾರೆ. ಅದರ ಮೇಲೆ ಬಂಡೆಗಲ್ಲುಗಳನ್ನು ಇಡುತ್ತಿದ್ದರು. ಇಂತಹ ನೆಲೆಗಳು ರಾಜನಕೋಳೂರು ಹಾಗೂ ಹಗರಟಗೆಯಲ್ಲಿ ತಜ್ಞರು ಗುರುತಿಸಿದ್ದಾರೆ.

ಈ ಸಂಸ್ಕೃತಿಯ ನೆಲೆಗಳು ಚಿಗರಹಳ್ಳಿ, ಕನ್ಯಾಕೋಳೂರು, ಕರಿಹಾಳ, ತುಮಕೂರು, ಚೆನ್ನೂರು, ಜೇವರ್ಗಿ, ಬಸವಂತಪುರ, ಮಂಗಿನಹಾಳ, ರಸ್ತಾಪುರ, ವಿಭೂತಿಹಳ್ಳಿ, ಸಗರ,

ಶಿರಿವಾಳ, ಯೆರಕಿಹಾಳ, ಅಗತೀರ್ಥ, ಅಗ್ನಿ, ಅರಿಕೇರಾ, ಇಸಮಪುರ, ಕುಪ್ಪಿ, ಕಾಲ್ದೇವನಹಳ್ಳಿ, ಕೊಡೇಕಲ್, ಕೊನ್‌ಹಳ್ಳಿ, ಗುಲಬಾಳ, ಗುಂಡಲಗೇರಾ, ಚನ್ನೂರು, ತೆಗ್ಗಿಹಳ್ಳಿ, ದೋರನಹಳ್ಳಿ, ಫತ್ತೆಪುರ, ಬನಹಟ್ಟಿ, ಬರದೇವನಹಳ್ಳಿ, ಬಿಜಾಸಪುರ, ಬೇಹತ್ತಿ ಬೆನಕನಹಳ್ಳಿ, ಮಲ್ಲೂರ್, ಮುದನೂರು, ಯಡಿಯಾಪುರ, ರಾಜನಕೋಳೂರ, ರಾಂಪುರ, ಹುಣಸಗಿ, ಹೆಬ್ಬಾಳ, ಬೈಚಬಾಳ ಮುಂತಾದ ಕಡೆ ತಜ್ಞರು ಗುರುತಿಸಿದ್ದಾರೆ.

ಸೂಕ್ಷ್ಮ ಶಿಲಾಯುಗ ಸಂಸ್ಕೃತಿಯ ವೇಳೆಗೆ ಮಾನವನು ಒಂದಡೆ ನೆಲೆ ನಿಲ್ಲಲು ಪ್ರಾರಂಭಿಸಿದನು. ಬೇಟೆ, ಮೀನು, ಆಹಾರ ಸಂಗ್ರಹಣೆಯ ಜೊತೆಗೆ ಉತ್ಪಾದನೆ ಮಾಡಲು ಪ್ರಾರಂಭಿಸಿದನು. ಈ ಯುಗವನ್ನು ಸ್ಥಿತ್ಯಂತರ ಸೂಕ್ಷ್ಮ ಶಿಲಾಯುಗ ಎಂದು ಕರೆಯಲಾಗುತ್ತದೆ. ಈ ಯುಗದಲ್ಲಿ ಇನ್ನು ಒಂದು ಮಹತ್ವದ ಬದಲಾವಣೆ ಎಂದರೆ ಜನರು ಪರಸ್ಪರ ಬೆರೆಯಲಾರಂಭಿಸಿದರು. ಎಲ್ಲರೂ ಒಂದೇ ಎನ್ನುವ ಮನೋಭಾವದಿಂದ ಸಮಾಜವನ್ನು ಕಟ್ಟುವ ನಿಟ್ಟಿನಲ್ಲಿ ಪ್ರಯತ್ನಿಸತೊಡಗಿದರು.

## ನೂತನ ಶಿಲಾಯುಗ :

ಕರ್ನಾಟಕದಲ್ಲಿ ನೂತನ ಶಿಲಯುಗ ಸಂಸ್ಕೃತಿಗೆ ಸಂಬಂಧಿಸಿದ ಶೋಧನೆ ಪ್ರಪ್ರಥಮ ಬಾರಿಗೆ ೧೮೭೨ರಲ್ಲಿ ಬೆಳಕಿಗೆ ಬಂದಿದೆ. ಇದರ ಕಾಲಮಾನವನ್ನು ಕ್ರಿ.ಪೂ ೧೪೦೦ ದಿಂದ ೧೦೦೦ ವರೆಗೆ ಎಂದು ತಿಳಿದುಬರುತ್ತದೆ.''[೨೨] ಈ ನೂತನ ಶಿಲಾಯುಗ ಸಂಸ್ಕೃತಿಯಲ್ಲಿ ತಜ್ಞರು ಅನೇಕ ಉಪಕರಣಗಳ ಶೋಧನೆ ಕೈಗೊಂಡಿದ್ದಾರೆ. ತೆಳು ನೀಳಚಕ್ಕೆ, ಮೊನೆ, ಹೆರೆಚಕ್ಕೆ, ಕೊರೆಗ ಮೊದಲಾದ ಉಪಕರಣಗಳನ್ನು ಬಳಸುತ್ತಿದ್ದರು. ಅಗೇಟ್, ಚರ್ಟ್, ಜಾಸ್ಪರ್ ಮೊದಲಾದ ಕಲ್ಲಿನ ಉಪಕರಣಗಳಾಗಿದ್ದವು. ಈ ಸಂಸ್ಕೃತಿಯು ವಾಸ್ತವ್ಯದ ನೆಲೆಯಾಗಿದೆ. ಕೊಡಲಿಯ ಉಪಕರಣಗಳು ತಯಾರಿಕೆಯ ವಿವಿಧ ಹಂತದ್ಲಲಿದ್ದು, ಭೂ ಉತ್ಖನನದಲ್ಲಿ ಮಡಿಕೆಗಳು, ಪ್ರಾಣಿಯ ಮೂಳೆ, ಉಂಡೆಕಲ್ಲು ಮುಂತಾದ ಅವಶೇಷಗಳು ದೊರೆತಿವೆ. ನೂತನ ಶಿಲಾಯುಗದ ನೆಲೆಗಳು ತಳಬಿಡಿ, ಬೀರನೂರ, ಬೂದಿಹಾಳ, ಬೆನಕನಹಳ್ಳಿ, ಕೊಡೆಕಲ್,. ರೋಜಾ, ಶಿರಿವಾಳ, ಕುಪ್ಪಿ ಬಿಜಾಸಪುರ, ತನ್ಮಂಡಿ, ಯೆರಕಿಹಾಳ, ಹುಣಸಗಿ ಮುಂತಾದ ಕಡೆ ತಜ್ಞರು ಗುರುತಿಸಿದ್ದಾರೆ.

## ಶಿಲಾ–ತಾಮ್ರ ಯುಗ :

ಶಿಲಾ ತಾಮ್ರ ಯುಗವು ವಿಕಸನಗೊಂಡ ಹಂತವಿದು. ತಾಮ್ರದಿಂದ ಲೋಹಗಳ ಬಳಕೆ, ಶಿಲೆಯ ಬದಲಾಗಿ ಲೋಹಗಳ ಬಳಕೆ, ಸುಟ್ಟ ಮಣ್ಣಿನ ಪಾತ್ರೆಗಳ ಬಳಕೆ ಪ್ರಾರಂಭವಾಗಿ, ವ್ಯವಸಾಯದಲ್ಲಿ ಅಭಿವೃದ್ಧಿ ಸಾದಿಸಿದ ಹಂತ ಇದಾಗಿದೆ. "ಈ ಯುಗದ ಕಾಲಮಾನವನ್ನು ಕ್ರಿ.ಪೂ.೧೩೦೦ ದಿಂದ ೮೦೦ ಎಂದು ಹೇಳಲಾಗಿದೆ."[೨೩] ನೀಳಚಕ್ಕೆ ಹೆರೆಚಕ್ಕೆ ಉಪಕರಣಗಳು ಹಾಗೂ ಉಬ್ಬೇಣುಳ್ಳ ಮೂಲಶಿಲಾಗಟ್ಟಿ, ಕಂದು, ಕಡುಗೆಂಪು, ಕಪ್ಪು ಬಣ್ಣದ ಮಡಿಕೆಗಳು ದೊರೆತಿವೆ. ಉಪಕರಣಗಳು ದೊರೆತಿರುವ ನೆಲೆಗಳೆಂದರೆ ಇಜೇರಿ, ವಡಗೇರಾ ಹರನೂರು, ಕನ್ಯಾಕೋಳರು ಬೀರನೂರು, ಹುಣಸಗಿ, ಬೂದಿಹಾಳ, ಕಕ್ಕೇರಾ, ಕೊಡೆಕಲ್, ತೀರ್ಥ, ತಿಂಥಿಣಿ, ಥನ್‌ಮಂಡಿ, ಥಂಡ, ಬೂದಿಹಾಳ, ಬೋನಾಳ, ಬಂಡೋಳಿ, ಬೆನಕನಹಳ್ಳಿ, ಬೇಹತ್ತಿ, ಮಲನೂರ್, ರಾಜನಕೋಳೂರು, ರಾಯನ್‌ಗೋಳ, ಹುಣಸಗಿ ಮುಂತಾದ ಕಡೆಗಳಲ್ಲಿ ತಜ್ಞರು ನೆಲೆಗಳನ್ನು ಗುರುತಿಸಿದ್ದಾರೆ.

## ಕಬ್ಬಿಣ ಯುಗದ ಬೃಹತ್ ಶಿಲಾಯುಗ :

ಬೃಹತ್ ಶಿಲಾಯುಗ ಸಂಸ್ಕೃತಿಯ ಜನರು ಕುತೂಹಲಕರವಾದ "ವಿವಿಧ ಮಾದರಿಯ ಬೃಹತ್ ಶಿಲಾಗೋರಿಗಳನ್ನು ನಿರ್ಮಿಸುತ್ತಿದ್ದರಿಂದ ಈ ಸಂಸ್ಕೃತಿಯನ್ನು ಬೃಹತ್ ಶಿಲಾಯುಗ ಸಂಸ್ಕೃತಿ ಎಂದು ಕರೆಯಲಾಗುತ್ತದೆ."[೨೪] ಈ ವೇಳೆಗೆ ಕಬ್ಬಿಣದ ಉಪಕರಣಗಳನ್ನು ಬಳಸುತ್ತಿದ್ದರು. ಇದರ ಕಾಲವನ್ನು ಇತಿಹಾಸ ತಜ್ಞರು ಕ್ರಿ.ಪೂ.೧೨೦೦ದಿಂದ ೨೫೦ ರವರೆಗೆ ಎಂದು ಗುರುತಿಸಿದ್ದಾರೆ. ಈ ಹಂತದಲ್ಲಿ ಮಾನವ ಸಂಸ್ಕೃತಿಕರಣಗೊಳ್ಳುವ ಕಡೆಗೆ ಹೆಜ್ಜೆ ಇಟ್ಟನು. ಶವ ಸಂಸ್ಕಾರ ಪದ್ಧತಿಯಲ್ಲಿ ಬೆಳವಣಿಗೆ ಹೊಂದಿತ್ತು. ದೊಡ್ಡ ಬಂಡೆಗಳನ್ನು ವೃತ್ತಾಕಾರದಲ್ಲಿಟ್ಟು ಕೆಳಗೆ ಗೋರಿಗಳನ್ನು ಕಲ್ಲಿನ ಮನೆ (**Stone Chests**) ಗಳನ್ನು ಕಟ್ಟಿ ಅವುಗಳಲ್ಲಿ ಶವಗಳನ್ನು ಹಾಗೂ ಶವದ ಜೊತೆಗೆ ಮಡಿಕೆ ಕುಡಿಕೆಗಳನ್ನು ಇಡುತ್ತಿದ್ದರು. ಅರಿಕೇರಾದಲ್ಲಿ ೫೦ಕ್ಕೂ ಹೆಚ್ಚು ಕಲ್ಲಿನ ಗೋರಿಗಳು ದೊರೆತಿವೆ.

ಕಬ್ಬಿಣ ಯುಗದ ಬೃಹತ್ ಶಿಲಾಯುಗ ಸಂಸ್ಕೃತಿಯ ಗೋರಿಗಳ ನೆಲೆಗಳು ಕಂಡುಬಂದಿವೆ. ಆಂದೋಲ, ಇಜೇರಿ, ಹೆಬ್ಬಾಳ, ಜೇವರ್ಗಿ, ವಡಗೇರಾ, ಸಿಗರ್ಥಹಳ್ಳಿ, ಕೊಲ್ಲೂರು, ರಖುಮಗೇರಾ, ರೋಜಾ, ವಿಭೂತಿಹಳ್ಳಿ, ಅರಿಕೇರಾ, ಚಿಕ್ಕೇನಹಳ್ಳಿ, ದ್ಯಾಮನಹಾಳ, ಬಾಲಶೆಟ್ಟಿಹಾಳ, ರಾಜನಕೋಳೂರು, ಯೆಡ್ಡಲಬಾವಿ, ಶ್ರೀನಿವಾಸಪುರ,

ಹಗರಟ್ಟಗಿ, ಯೆರಕಿಹಾಳ, ರಾಯಗೇರಾ, ಹನುಮಸಾಗರ, ಹಾಲಭಾವಿ, ಹುಣಸಗಿ, ಹೆಬ್ಬಾಳ ಮುಂತಾದವು ಕಬ್ಬಿಣ ಯುಗದ ಬೃಹತ್ ಶಿಲಾಯುಗದ ನೆಲೆಗಳಾಗಿವೆ.

## ೨.೪. ಇತಿಹಾಸದ ಆರಂಭ ಕಾಲ :

“ಮಾನವನು ಜೀವನದ ವಿವಿಧ ಸಂಸ್ಕೃತಿಗಳ ಹಂತದಿಂದ ಲಿಪಿಯ ಬಳಕೆಗೆ ಬಂದ ಹಂತವನ್ನು ಇತಿಹಾಸ ಆರಂಭ ಕಾಲವೆಂದು ಹೇಳಬಹುದು”[೨೫] ಈ ಯುಗದ ಕಾಲಮಾನವನ್ನು ತಜ್ಞರು ಕ್ರಿ.ಶ.೧ನೇ ಶತಮಾನದಿಂದ ಕ್ರಿ.ಶ.೩ನೇ ಶತಮಾನವೆಂದು ಗುರುತಿಸಿದ್ದಾರೆ. ಈ ವೇಳೆಗೆ ಮಾನವನು ಕೃಷಿಯಲ್ಲಿ ಅಭಿವೃದ್ಧಿ ಸಾಧಿಸಿದನು. ಉಪಕಸಬುಗಾಗಿ ಪ್ರಾಣಿಗಳನ್ನು ಸಾಕುವುದುನ್ನು ರೂಢಿಸಿಕೊಂಡರು. ಆರ್ಥಿಕವಾಗಿ ಪ್ರಗತಿ ಸಾಧಿಸಿದ ಯುಗವಾಗಿದೆ. ಅಲ್ಲದೆ ಕಪ್ಪು, ಬಿಳಿ, ಕಪ್ಪು–ಕೆಂಪು ಬಣ್ಣದ ಮಡಿಕೆಗಳು ದೊರೆತಿವೆ. ರೋಜಾ, ಹಸರಗುಂಡಿಗೆ, ಕೊಲ್ಲೂರು, ದೇವರಗೋನಾಳ, ದೇವಾಪುರ, ಹಗರಟಗಿಯಲ್ಲಿ ಇತಿಹಾಸ ಆರಂಭ ಕಾಲದ ಸಂಸ್ಕೃತಿಯ ನೆಲೆಗಳನ್ನು ಪ್ರಾಗಿತಿಹಾಸ ತಜ್ಞರು ಈ ನೆಲೆಗಳನ್ನು ಗುರುತಿಸಿದ್ದಾರೆ.

ಒಂದು ನಾಗರಿಕತೆಯ ಅಧ್ಯಯನ ಮಾಡಬೇಕಾದರೆ ಮುಖ್ಯವಾಗಿ ಕುರುಹುಗಳು ಅತಿ ಅವಶ್ಯಕ. ಕುರುಹುಗಳಿಂದ ಪ್ರಾಗಿತಿಹಾಸ ಕಾಲದ ಸಂಸ್ಕೃತಿಯ ಬಗ್ಗೆ ಅರಿಯಲು ಸಾಧ್ಯವಾಗುತ್ತದೆ. ಇಂತಹ ಅನೇಕ ಕುರುಹುಗಳು ಸಗರನಾಡಿನ ನೆಲೆಗಳಲ್ಲಿ ದೊರೆತಿವೆ. ಅದರಲ್ಲೂ ಕಲ್ಗೋರಿ ಮತ್ತು ಬೂದಿ ದಿಬ್ಬಗಳಂತೂ ಅಂತರರಾಷ್ಟ್ರೀಯ ಮಟ್ಟದ ಖ್ಯಾತಿಯನ್ನು ಪಡೆದಿವೆ. ಆದರೆ ಖೇದದ ಸಂಗತಿ ಎಂದರೆ ಅವು ನಾಶ ಹೊಂದುತ್ತಿವೆ. ಇವುಗಳನ್ನು ಸಂರಕ್ಷಿಸಿ ಇನ್ನೂ ಹೆಚ್ಚಿನ ಸಂಶೋಧನೆ ಆಗಬೇಕಿದೆ. ಇವೆಲ್ಲವುಗಳ ಜವಾಬ್ದಾರಿ ಸಂಶೋಧಕರ ಹಾಗೂ ಜನಸಾಮಾನ್ಯರದಾಗಿದೆ.

## ಟಿಪ್ಪಣಿಗಳು

೧. ಸಗರನಾಡ ದರ್ಶನ : ಸಂಶೋಧನಾತ್ಮಕ ಲೇಖನ–ಕವನಗಳ ಸಂಕಲನ, ಮಹಾಕವಿ ಲಕ್ಷ್ಮೀಶ ವಾಚನ ಸಂಘ, ಸುರಪುರ, ೧೯೮೫, ಪು.ಸಂ.೧೦.

೨. ಜೇವರ್ಗಿ ತಾಲ್ಲೂಕು ದರ್ಶನ : ಪಾಟೀಲ ಸದಾನಂದ ಎಸ್. ತಾಲ್ಲೂಕ ಕನ್ನಡ ಸಾಹಿತ್ಯ ಪರಿಷತ್, ಜೇವರ್ಗಿ, ೨೦೦೩, ಪು.ಸಂ.೧.

೩. ಶಹಾಪುರ ತಾಲ್ಲೂಕು ದರ್ಶನ : ಅಕ್ಕಿ ಡಿ.ಎನ್.ಐಬಿಎಚ್ ಪ್ರಕಾಶನ ಶಹಾಪುರ, ೧೯೮೬, ಪು.ಸಂ.೪.

೪. ಶೋರಾಪುರ ತಾಲ್ಲೂಕು ದರ್ಶನ : ರೇವಣಸಿದ್ದಯ್ಯ, ಆರ್. ಐಬಿಎಚ್ ಪ್ರಕಾಶನ ಗಾಂಧಿನಗರ, ಬೆಂಗಳೂರು–೧೯೮೬, ಪು.ಸಂ.೩.

೫. ಸಗರನಾಡ ದರ್ಶನ : ಸಂಶೋಧನಾತ್ಮಕ ಲೇಖನ–ಕವನಗಳ ಸಂಕಲನ, ಮಹಾಕವಿ ಲಕ್ಷ್ಮೀಶ ವಾಚನ ಸಂಘ, ಸುರಪುರ, ೧೯೮೫, ಪ್ರಸ್ತಾವನೆ ಪು.ಸಂ.೧೦.

೬. ಗುಲಬರ್ಗಾ ಜಿಲ್ಲೆ ಗ್ಯಾಸೆಟಿಯರ್ : ಪಾಟೀಲ ಎಂ.ಬಿ. ಕರ್ನಾಟಕ ರಾಜ್ಯ ಸರಕಾರ ಕರ್ನಾಟಕ ಗ್ಯಾಸೆಟಿಯರ್, ಬೆಂಗಳೂರು, ೧೯೯೭, ಪು.ಸಂ.೧೯.

೭. ಸಗರನಾಡ ದರ್ಶನ ; ಸಂಶೋಧನಾತ್ಮಕ ಲೇಖನ–ಕವನಗಳ ಸಂಕಲನ, ಮಹಾಕವಿ ಲಕ್ಷ್ಮೀಶ ವಾಚನ ಸಂಘ, ಸುರಪುರ–೧೯೮೫, ಪುಸಂ.೫.

೮. ಶೋರಾಪುರ ತಾಲ್ಲೂಕು ದರ್ಶನ : ರೇವಣಸಿದ್ದಯ್ಯ, ಆರ್.ಐಬಿಎಚ್ ಪ್ರಕಾಶನ ಗಾಂಧಿನಗರ, ಬೆಂಗಳೂರು–೧೯೮೬, ಪು.ಸಂ.೭.

೯. ಸಗರನಾಡ ದರ್ಶನ ; ಸಂಶೋಧನಾತ್ಮಕ ಲೇಖನ–ಕವನಗಳ ಸಂಕಲನ, ಮಹಾಕವಿ ಲಕ್ಷ್ಮೀಶ ವಾಚನ ಸಂಘ, ಸುರಪುರ–೧೯೮೫, ಪುಸಂ.೭.

೧೦. ಸಗರನಾಡ ದರ್ಶನ ; ಸಂಶೋಧನಾತ್ಮಕ ಲೇಖನ–ಕವನಗಳ ಸಂಕಲನ, ಮಹಾಕವಿ ಲಕ್ಷ್ಮೀಶ ವಾಚನ ಸಂಘ, ಸುರಪುರ–೧೯೮೫, ಪುಸಂ.೯.

೧೧. ಶಹಾಪುರ ದರ್ಶನ : ಹಿರೇಮಠ ಸೂಗಯ್ಯ, ದರ್ಶನ ಪ್ರಕಾಶನ ಶಹಾಪುರ, ೧೯೯೪,ಪು.ಸಂ.೩.

೧೨. ಸಗರನಾಡ ದರ್ಶನ ; ಸಂಶೋಧನಾತ್ಮಕ ಲೇಖನ–ಕವನಗಳ ಸಂಕಲನ, ಮಹಾಕವಿ ಲಕ್ಷ್ಮೀಶ ವಾಚನ ಸಂಘ, ಸುರಪುರ–೧೯೮೫, ಪುಸಂ.೩.

೧೩. ಶಹಾಪುರ ತಾಲ್ಲೂಕು ದರ್ಶನ : ಅಕ್ಕಿ ಡಿ.ಎನ್.ಐಬಿಎಚ್ ಪ್ರಕಾಶನ ಶಹಾಪುರ, ೧೯೮೬, ಪು.ಸಂ.೧೪.

೧೪. ಶಹಾಪುರ ತಾಲ್ಲೂಕು ದರ್ಶನ : ಅಕ್ಕಿ ಡಿ.ಎನ್.ಐಬಿಐಚ್ ಪ್ರಕಾಶನ ಶಹಾಪುರ, ೧೯೮೬, ಪು.ಸಂ.೧೬.

೧೫. ಜೇವರ್ಗಿ ತಾಲ್ಲೂಕು ದರ್ಶನ : ಪಾಟೀಲ ಸದಾನಂದ ಎನ್.ತಾಲ್ಲೂಕ ಕನ್ನಡ ಸಾಹಿತ್ಯ ಪರಿಷತ್, ಜೇವರ್ಗಿ, ೨೦೦೩, ಪು.ಸಂ.೮.

೧೬. ಕರ್ನಾಟಕದ ಪುರಾತತ್ವ ನೆಲೆಗಳು ; ಶಿವತಾರಕ್ ಕೆ.ಬಿ. ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ, ೨೦೦೧, ಪು.ಸಂ.೪.

೧೭. ಕರ್ನಾಟಕದ ಪುರಾತತ್ವ ನೆಲೆಗಳು ; ಶಿವತಾರಕ್ ಕೆ.ಬಿ. ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ, ೨೦೦೧, ಪು.ಸಂ.೧೮೫.

೧೮. ಕರ್ನಾಟಕದ ಪುರಾತತ್ವ ನೆಲೆಗಳು ; ಶಿವತಾರಕ್ ಕೆ.ಬಿ. ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ, ೨೦೦೧, ಪು.ಸಂ.೧೩.

೧೯. ಕರ್ನಾಟಕದ ಪುರಾತತ್ವ ನೆಲೆಗಳು ; ಶಿವತಾರಕ್ ಕೆ.ಬಿ. ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ, ೨೦೦೧, ಪು.ಸಂ.೧೩.

೨೦. ಕರ್ನಾಟಕದ ಪುರಾತತ್ವ ನೆಲೆಗಳು ; ಶಿವತಾರಕ್ ಕೆ.ಬಿ. ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ, ೨೦೦೧, ಪು.ಸಂ.೧೫.

೨೧. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೧೭.

೨೨. ಕರ್ನಾಟಕದ ಪುರಾತತ್ವ ನೆಲೆಗಳು ; ಶಿವತಾರಕ್ ಕೆ.ಬಿ. ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ, ೨೦೦೧, ಪು.ಸಂ.೧೮.

೨೩. ಕರ್ನಾಟಕದ ಪುರಾತತ್ವ ನೆಲೆಗಳು ; ಶಿವತಾರಕ್ ಕೆ.ಬಿ. ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ, ೨೦೦೧, ಪು.ಸಂ.೧೯.

೨೪. ಕರ್ನಾಟಕದ ಪುರಾತತ್ವ ನೆಲೆಗಳು ; ಶಿವತಾರಕ್ ಕೆ.ಬಿ. ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ, ೨೦೦೧, ಪು.ಸಂ.೨೦.

೨೫. ಕರ್ನಾಟಕದ ಪುರಾತತ್ವ ನೆಲೆಗಳು ; ಶಿವತಾರಕ್ ಕೆ.ಬಿ. ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ, ೨೦೦೧, ಪು.ಸಂ.೨೧.

# ಅಧ್ಯಾಯ–೩

## ರಾಜಕೀಯ ವ್ಯವಸ್ಥೆ

## ಪ್ರಸ್ತಾವನೆ :

ಒಂದು ಕಾಲದ ಚರಿತ್ರೆಯನ್ನು ಅಧ್ಯಯನ ಮಾಡಲು ಆಯಾ ಕಾಲದ ಘಟನೆಗಳೇ ಪ್ರಮುಖ ಆಧಾರಗಳಾಗಿವೆ. ಅದರಂತೆ ಆ ನಾಡಿನಲ್ಲಿ ಆಳಿದುಳಿದ ಎಲ್ಲವೂ ಇತಿಹಾಸಕ್ಕೆ ಪೂರಕ ಅಂಶಗಳಾಗಿ ಕಾರ್ಯನಿರ್ವಹಿಸುತ್ತವೆ. ಅನೇಕ ರಾಜಮನೆತನಗಳು ಈ ನಾಡಿನಲ್ಲಿ ಆಡಳಿತ ನಡೆಸಿ, ಸಾಂಸ್ಕೃತಿಕ ಜೀವನದ ಮೇಲೆ ತಮ್ಮದೇ ಆದ ಪ್ರಭಾವವನ್ನು ಬೀರಿವೆ ಎಂಬುದನ್ನು ಈ ನಾಡಿನಲ್ಲಿ ದೊರೆತಿರುವ ಶಾಸನಗಳಿಂದ ತಿಳಿಯಬಹುದು. ಶಾಸನಗಳು ಸಮಕಾಲೀನ ದಾಖಲೆಗಳಾಗಿರುವುದರಿಂದ ಹೆಚ್ಚಾಗಿ ಇವುಗಳನ್ನು ನಂಬಬಹುದು. ಅಲ್ಲದೆ ರಾಜರು ಯಾವ ಮನೆತನದೊಂದಿಗೆ ತಮ್ಮ ವೈರತ್ವ ಹೊಂದಿದರೆಂಬುದು ತೂಗಿ ನೋಡಿದಾಗ, ಅವರ ವೈರತ್ವ ಯಾವ ಕಾರಣಕ್ಕಾಗಿ, ಯಾವ ರಾಜರೊಂದಿಗೆ ಎಂದು ನಿರ್ಧರಿಸಲು ಬರುವುದು. ಶಾಸನಗಳು ದಾನಕೊಟ್ಟ ವಿಷಯ, ರಾಜರ ಪ್ರಶಸ್ತಿಯ ವಿಷಯಗಳ ಜೊತೆಗೆ ಅಂದಿನ ರಾಜಕೀಯ, ಸಾಮಾಜಿಕ, ಆರ್ಥಿಕ ಹಾಗೂ ಧಾರ್ಮಿಕ ಜೀವನವನ್ನು ಕಟ್ಟಿ ಕೊಡುತ್ತವೆ. ಬರೀ ರಾಜಕೀಯ ಚಾರಿತ್ರ್ಯವನ್ನು ಹೇಳುವುದಿಲ್ಲ. ಬದಲಾಗಿ ಅಂದಿನ ಇತರ ಅಂಶಗಳನ್ನು ತನ್ನಲ್ಲಿ ಅಡಗಿಸಿಕೊಂಡಿರುತ್ತವೆ. ಅವುಗಳಲ್ಲಿ ರಾಜಕೀಯವೇ ಪ್ರಧಾನವಾಗಿ ಕಂಡುಬಂದರೂ ಸೂಕ್ಷ್ಮವಾಗಿ ಗಮನಿಸಿದಾಗ ಅನೇಕ ಘಟನೆಗಳ ಮೇಲೆ ಶಾಸನಗಳು ಬೆಳಕನ್ನು ಚೆಲ್ಲುತ್ತವೆ.

### ೩.೧. ರಾಜಮನೆತನಗಳು :

#### ಶಾತವಾಹನರು

ಮೌರ್ಯ ಸಾಮ್ರಾಜ್ಯ ಪತನ ಹೊಂದಿದ ನಂತರ ಇವರ ಸಾಮಂತರಾಗಿ ಶಾತವಾಹನರು ಕ್ರಿ.ಪೂ.೨–೩ನೇ ಶತಮಾನದಲ್ಲಿ ಅಧಿಕಾರಕ್ಕೆ ಬಂದರು. ಇವರ ಇತಿಹಾಸ ತಿಳಿಯಲು ನಮಗೆ ದೊರೆತ ಪ್ರಮುಖ ಆಧಾರಗಳೆಂದರೆ ಶಾಸನಗಳು, ನಾಣ್ಯಗಳು, ಸ್ಮಾರಕಗಳು ಹಾಗೂ ಪುರಾಣಗಳು. ಇವರು ದಖ್ಖನ್‌ದಲ್ಲಿ ಅಧಿಕಾರಕ್ಕೆ ಬಂದಿರುವುದರಿಂದ ಕರ್ನಾಟಕದ ದಕ್ಷಿಣ ಭಾಗದಲ್ಲಿ ಹೆಚ್ಚಿನ ಪ್ರಭಾವ ಕಂಡು ಬರುವುದಿಲ್ಲ. ಸಗರ ನಾಡಿನಲ್ಲಿ ಇವರ ಪ್ರಭಾವ ಸ್ವಲ್ಪಮಟ್ಟಿಗೆ ಬೀರಿದೆ ಎನ್ನಲು ಅಣಬಿಯಲ್ಲಿ ದೊರೆತ ಶಾಸನದಿಂದ ತಿಳಿದು ಬರುತ್ತದೆ. ಈ ನಾಡನ್ನು ಆಳಿದವರು ಶಾತವಾಹನರು ಎನ್ನುವುದಕ್ಕೆ ಪುಷ್ಠಿ ನೀಡುತ್ತದೆ ಶಾತವಾಹನರ ಕಾಲದಲ್ಲಿ ದೊರೆತ ಈ ಒಂದು ಶಾಸನ ಬಿಟ್ಟರೆ ಯಾವುದೇ ಶಾಸನಗಳು

ಲಭ್ಯವಾಗಿಲ್ಲ. ಇವರ ಕಾಲದಲ್ಲಿ ದೊರೆತ ನಾಣ್ಯಗಳು ಹಾರಣಗೇರಿಯಲ್ಲಿ ಲಭ್ಯವಾಗಿವೆ. ಹಾಗಾಗಿ ಶಾತವಾಹನರ ಕಾಲದಲ್ಲಿ ಹಾರಣಗೇರಿ ಒಂದು ಪ್ರಮುಖ ಪಟ್ಟಣ ಹಾಗೂ ವ್ಯಾಪಾರಿ ಕೇಂದ್ರವಾಗಿತ್ತು. ಶಿರವಾಳದಲ್ಲಿ ಇವರ ಕಾಲದ ಅವಶೇಷಗಳು ದೊರೆತಿವೆ. ಇವೆಲ್ಲವುಗಳ ಆಧಾರದಿಂದ ಶಾತವಾಹನರು ಈ ನಾಡಿನಲ್ಲಿ ಆಳ್ವಿಕೆ ಮಾಡಿದ್ದರು ಎಂಬುದು ತಿಳಿದುಬರುತ್ತದೆ.

**ರಾಷ್ಟ್ರಕೂಟರು :**

ಸಗರ ನಾಡಿನಲ್ಲಿ ಕದಂಬರು ಮತ್ತು ಬಾದಮಿ ಚಾಲುಕ್ಯರು ನೇರವಾಗಿ ಆಡಳಿತ ನಡೆಸಿದ್ದರೆನ್ನುವುದಕ್ಕೆ ಯಾವುದೇ ಉಲ್ಲೇಖ ಲಭ್ಯವಾಗಿಲ್ಲ. ನಂತರ ಎಂಟನೇ ಶತಮಾನದ ವೇಳೆಗೆ ದಕ್ಷಿಣದ ಆಧಿಪತ್ಯವು ಚಾಲುಕ್ಯರ ತತ್ತರಿಸುವ ಕೈಗಳಿಂದ ಜಾರಿ, ದೃಢಮುಷ್ಠಿಯವರೂ, ಉದ್ಯಮಶೀಲರೂ, ಧೈರ್ಯಶಾಲಿಗಳೂ ಆದ ರಾಷ್ಟ್ರಕೂಟರ ಕೈಸೇರಿತು. ರಾಷ್ಟ್ರಕೂಟರು ಸಗರನಾಡಿನ ವ್ಯಾಪ್ತಿಯಲ್ಲಿ ಬರುವ ಶಿರವಾಳದಿಂದಲೇ ಅಧಿಕಾರಕ್ಕೆ ಬಂದರು. ಮೂರನೇ ಕೃಷ್ಣನ ಕಾಲದಲ್ಲಿ ಬೆಳಕಿಗೆ ಬಂದಿರುವ ಕ್ರಿ.ಶ. ೯೩೯ರ ಶಿರವಾಳ ಶಾಸನವೇ ಮೊದಲನೆಯದಾಗಿದೆ. ಶಿರವಾಳದ ಈ ಶಾಸನವು ಪ್ರಥಮ ಕನ್ನಡ ಶಾಸನ ಎಂಬ ಹೆಗ್ಗಳಕೆಗೆ ಪಾತ್ರವಾಗಿದೆ. ಇನ್ನೊಂದು ಆಂದೋಲದಲ್ಲಿರುವ ಕ್ರಿ.ಶ. ೯೫೮ರ ಶಾಸನದಲ್ಲಿ ಮೂರನೇ ಕೃಷ್ಣನ ಉಲ್ಲೇಖ ಕಂಡು ಬರುತ್ತದೆ. 'ಮದಗಜಮಲ್ಲ' 'ಅಕಾಲ ವರ್ಷ' 'ಕನ್ನರ ದೇವ' ಎಂಬ ಬಿರುದುಗಳನ್ನು ಹೊಂದಿದೆ. ಮೂರನೇ ಕೃಷ್ಣನು 'ನರೆಯಂಬೊಳೆ-೭೦ರಲ್ಲಿ ಆಳ್ವಿಕೆ ಮಾಡುತ್ತಿದ್ದನು. ಶೆಳ್ಳಗಿ ಗ್ರಾಮದಲ್ಲಿ ರಾಷ್ಟ್ರಕೂಟರ ಕಾಲದ ಶಾಸನವೊಂದು ದೊರೆತಿದ್ದು, ಲಿಪಿ ಅಸ್ಪಷ್ಟವಾಗಿದೆ. ಈ ನಾಡಿನಲ್ಲಿ ಇವರ ಕಾಲದ ಇಪ್ಪತ್ತಕ್ಕೂ ಹೆಚ್ಚು ದೇವಾಲಯಗಳು ಕಂಡು ಬರುತ್ತವೆ. ಆದರೆ ಇಂದು ಇವುಗಳ ಸ್ಥಿತಿ ಅವನತಿಯ ಅಂಚಿನಲ್ಲಿವೆ.

**ಕಲ್ಯಾಣ ಚಾಲುಕ್ಯರು :**

ಕಲ್ಯಾಣದ ಚಾಲುಕ್ಯರು ಬಾದಾಮಿ ಚಾಲುಕ್ಯರ ವಂಶದಿಂದಲೇ ಬಂದವರಾಗಿದ್ದಾರೆ. ಬೀದರ ಜಿಲ್ಲೆಯ ಬಸವಕಲ್ಯಾಣದಿಂದ ಆಡಳಿತ ಮಾಡುತ್ತಿದ್ದರಿಂದ ಇವರಿಗೆ ಕಲ್ಯಾಣ ಚಾಲುಕ್ಯರೆಂದು ಕರೆಯಲಾಗಿದೆ. ನಾಲ್ಕನೇ ವಿಕ್ರಮಾದಿತ್ಯನ ಮಗ ಇಮ್ಮಡಿ ತೈಲಪ ರಾಷ್ಟ್ರಕೂಟರ ಮಾಂಡಳಿಕನಾಗಿ ಅವರೊಂದಿಗೆ ವೈವಾಹಿಕ ಸಂಬಂಧ ಬೆಳೆಸಿದನು. ಇವರಿಂದ ಇಮ್ಮಡಿ ತೈಲಪ ಇತರ ರಾಜರ ಸಹಾಯದಿಂದ ಇಮ್ಮಡಿ ಕಕ್ಕನ್ನು ಅಧಿಕಾರದಿಂದ ತಳ್ಳಿಹಾಕಿ, ಮಾನ್ಯಖೇಟದಲ್ಲಿ ಚಾಲುಕ್ಯರು ತಮ್ಮ ಸಾಮ್ರಾಜ್ಯವನ್ನು ಸ್ಥಾಪಿಸಿದರು. ಹೀಗೆ ಚಾಲುಕ್ಯರ

ಸಾಮ್ರಾಜ್ಯ ಸಗರನಾಡಿನವರೆಗೂ ವ್ಯಾಪಿಸಿತು. ಕಲ್ಯಾಣ ಚಾಲುಕ್ಯರ ಶಾಸನಗಳು ಈ ನಾಡಿನಲ್ಲಿ ವ್ಯಾಪಕವಾಗಿ ದೊರೆತಿವೆ. ಯಡ್ರಾಮಿ, ಆಂದೋಲಾ, ಕುಳಗೇರಿ, ಗೋಗಿ, ಅಣಬಿ, ಶಿರವಾಳ, ಏವೂರು, ಮುದನೂರು, ಹಗರಟಗಿ ಮುಂತಾದ ಕಡೆ ಇವರ ಕಾಲಕ್ಕೆ ಸಂಬಂಧಿಸಿದ ಶಾಸನಗಳು ದೊರೆತಿವೆ.

ಕೆಲ ಶಾಸನಗಳ ಪ್ರಕಾರ ಕಲ್ಯಾಣ ಚಾಲುಕ್ಯರು ಜನಿಸಿಬಂದದ್ದು ಚಂದ್ರನಿಂದ, ಚಂದ್ರನು ಅತ್ರಿಯಿಂದಲೂ, ಅತ್ರಿಯು ಬ್ರಹ್ಮನಿಂದಲೂ ಜನಿಸಿದುದಾಗಿ ತಿಳಿದು ಬರುತ್ತದೆ. ಇನ್ನೊಂದು ಕಥೆಯ ಪ್ರಕಾರ ಮಾಂಡವ್ಯ, ಮನು ಮತ್ತು ಹಿರಣ್ಯ ಗರ್ಭ ಬ್ರಹ್ಮರ ವಂಶದಲ್ಲಿ ಬಂದ ಹಾರೀತನ ವಂಶಜ ಹಿರಿತಿ–ಪಂಚಶಿಖ. ಇವನ ಚುಲುಕ (ಅಂಗೈ) ದಿಂದ ಚಾಲುಕ್ಯರು ಜನಿಸಿದರು. ಹೀಗೆ ರಾಷ್ಟ್ರಕೂಟರ ಆಡಳಿತ ಬದಿಗೊತ್ತಿ ಮಾನ್ಯಖೇಟದಿಂದ ಅಧಿಕಾರಕ್ಕೆ ಬಂದ ಚಾಲುಕ್ಯರು ಪೊಟಲಕೆರೆ, ಯಾದಗಿರಿ, ಕಲ್ಯಾಣ, ಜಯನ್ತಿಪುರಗಳನ್ನು ರಾಜಧಾನಿಗಳನ್ನಾಗಿ ಮಾಡಿಕೊಂಡು ಸುಮಾರು ಎರಡನೂರು ವರ್ಷಗಳ ಕಾಲ ರಾಜ್ಯಭಾರ ಮಾಡಿದ ಕೀರ್ತಿ ಈ ವಂಶಕ್ಕೆ ಸಲ್ಲುತ್ತದೆ.

**ಕಲ್ಯಾಣ ಚಾಲುಕ್ಯರ ವಂಶಾವಳಿ**



ಈ ರೀತಿ ಇವರ ವಂಶಾವಳಿ ತಿಳಿದು ಬರುತ್ತದೆ. ಕಲ್ಯಾಣ ಚಾಲುಕ್ಯರ ವಂಶಾವಳಿ ಇಮ್ಮಡಿ ತೈಲಪನಿಂದ (ಕ್ರಿ.ಶ.೯೭೩–೯೯೭) ಪ್ರಾರಂಭಗೊಳ್ಳುತ್ತದೆ. ನಂತರ ಸತ್ಯಾಶ್ರಯ (ಕ್ರಿ.ಶ. ೯೯೭–೧೦೦೮), ಐದನೇ ವಿಕ್ರಮಾದಿತ್ಯ (ಕ್ರಿ.ಶ.೧೦೦೮–೧೦೧೫) ಅಯ್ಯಣ (ಕ್ರಿ.ಶ.೧೦೧೫) ಇವರು ಕ್ರಮವಾಗಿ ಆಡಳಿತ ಮಾಡಿದ್ದರು. ಈ ನಾಡಿನಲ್ಲಿ ಇವರ ಪ್ರಭಾವ ಕಂಡು ಬರುವುದಿಲ್ಲ. ನಂತರ ಎರಡನೇ ಜಯಸಿಂಹ ಕ್ರಿ.ಶ.೧೦೧೫–೧೦೪೪ ವರೆಗೆ ಅಧಿಕಾರಕ್ಕೆ ಬಂದನು. ಮಾನ್ಯಖೇಟದ ರಾಷ್ಟ್ರಕೂಟರ ಆಡಳಿತವನ್ನು ಕಿತ್ತೊಗೆದು ಇಮ್ಮಡಿ ಜಯಸಿಂಹ ಆಡಳಿತ ಮುಂದುವರೆಸಿದನು. ಜಯಸಿಂಹ ಏತಗಿರಿ (ಯಾದಗಿರಿ)ಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಡಳಿತ ನಡೆಸುತ್ತಿದ್ದನು. ಆಡಳಿತ ದೃಷ್ಟಿಯಿಂದ ಏತಗಿರಿ ಸುರಕ್ಷಿತವಾಗಿಲ್ಲದ ಕಾರಣ, ಕೆಲ ಕಾಲ ಪೊಟ್ಟಳಕೆರೆ, ಕೊಳ್ಳಪಾಕವನ್ನು ರಾಜಧಾನಿಯನ್ನಾಗಿ ಮಾಡಿಕೊಂಡನು. ನಂತರ ಕಲ್ಯಾಣವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ಮಾಡಿದ್ದರ ಬಗ್ಗೆ ಹಗರಟಗಿ ಶಾಸನದಿಂದ ತಿಳಿದು ಬರುತ್ತದೆ.

“ಶ್ರೀ ಪೃಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರಂ
ಪರಮಭಟ್ಟಾರಕಂ ಸತ್ಯಾಶ್ರಯ ಕುಳತಿಳಕಂ
ಚಾಳುಕ್ಯಾಭರಣಂ ಶ್ರೀಮಜ್ಜಗದೇಕಮಲ್ಲದೇವರ
ಏತಗಿರಿಯ ನೆಲೆವೀಡಿನೊಳೆ ವಿಜಯರಾಜ್ಯ ಮುತ್ತರೋ
ತ್ತರಾಭಿವೃದ್ಧಿ ಪ್ರವರ್ಧಮಾನ ಮಾಚಂದ್ರಾರ್ಕ
ತಾರಂಬರಂ ಸಲುತ್ತಮರೆ ॥”[೧]

ಜಗದೇಕಮಲ್ಲ ಇಮ್ಮಡಿ ಜಯಸಿಂಹನ ಸಂಸ್ಕೃತ ತಾಮ್ರ ಪಟಗಳಲ್ಲಿ ಸಕಲ ಬಿರುದುಗಳೊಂದಿಗೆ ವೈಭವದ ವರ್ಣನೆ ಕಂಡು ಬಂದರೆ,

“ಸಮಸ್ತ ಭುವನಾಶ್ರಯ ಶ್ರೀಪೃಥ್ವಿ ವಲ್ಲಭ
ಮಹಾರಾಜಾಧಿರಾಜ ಪರಮಭಟ್ಟಾರಕಂ
ಸತ್ಯಾಶ್ರಯ ಕುಳತಿಳಕಂ ಚಾಲುಕ್ಯಾಭರಣಂ ॥”

ಎಂಬ ಉಲ್ಲೇಖ ಕ್ರಿ.ಶ.೧೦೧೮ರ ಏವೂರು ಶಾಸನದಿಂದ ತಿಳಿದು ಬರುತ್ತದೆ.

ಕನ್ನಡ ಶಾಸನಗಳಲ್ಲಿಯೂ ಈತನ ಹೊಗಳಿಕೆಯ ಮಾತು ಕಂಡುಬರುತ್ತದೆ. ಈ ನಾಡಿನ ಐವೂರು, ಕಚಕನೂರು, ತಿಂಥಣಿ, ಮುದನೂರು, ಹೆಮ್ಮಡಗಿ, ಮದ್ರಿಕಿ, ಗೋಗಿ ಹೀಗೆ ಅನೇಕ ಶಾಸನಗಳಲ್ಲಿ ಇಮ್ಮಡಿ ಜಯಸಿಂಹನ ಬಿರುದುಗಳ ಉಲ್ಲೇಖ ಕಂಡುಬರುತ್ತವೆ. ನಂತರ ಕಲ್ಯಾಣ ಚಾಲುಕ್ಯ ಸಾಮ್ರಾಜ್ಯ ಉಜ್ವಲ ಬುನಾದಿಯನ್ನು ಹಾಕುವಲ್ಲಿ ಇಮ್ಮಡಿ ಜಯಸಿಂಹನ ಹಿರಿಯ ಮಗನಾದ ಒಂದನೇ ಸೋಮೇಶ್ವರ ಕ್ರಿ.ಶ. ೧೦೪೩–೧೦೬೮ರ ವರೆಗೆ ಆಳ್ವಿಕೆ ಮಾಡುವಲ್ಲಿ ಯಶಸ್ವಿಯಾದನು. ಕಲ್ಯಾಣವನ್ನು ಶಾಶ್ವತ ರಾಜಧಾನಿಯನ್ನಾಗಿ ಮಾಡಿಕೊಂಡನು. ಇಲ್ಲಿಂದ ಈತ ಕಲ್ಯಾಣ ಚಾಲುಕ್ಯರ ಆಡಳಿತಕ್ಕೆ ಆಸ್ತಿಭಾರ ಹಾಕಿದನು. 'ತ್ರೈಲೋಕ್ಯಮಲ್ಲ', 'ಆಹವಮಲ್ಲ' ಮೊದಲಾದ ಬಿರುದುಗಳಿಂದ ಪ್ರಸಿದ್ಧಿ ಪಡೆದ ಈತನ ಕಾಲದ ಶಾಸನಗಳು ಈ ನಾಡಿನಲ್ಲಿ ದೊರೆತಿವೆ.

"ಸ್ವಸ್ತಿ ಸಮಸ್ತ ಭುವನಾಶ್ರಯಂ ಶ್ರೀ ಪೃಥ್ವಿ
ವಲ್ಲಭಂ ಮಹಾರಾಜಾಧಿರಾಜ ಪರಮೇಶ್ವರ
ಪರಮ ಭಟ್ಟಾರಕಂ ಸತ್ಯಾಶ್ರಯ ಕುಳತಿಳಕಂ
ಚಾಳುಕ್ಯಾಭರಣಂ ಶ್ರೀ ಮತ್ರೈಳೋಕ್ಯ ಮಲ್ಲದೇವರ್ಕಲ್ಯಾಣದ
ನೆಲೆವಿಡಿನೊಳು ಸುಖಸಂಕಥಾ ವಿನೋದದಿಂ
ರಾಜ್ಯಂಗೆಯುತ್ತಮಿರೆ ||" ಎಂಬ ಉಲ್ಲೇಖ

ಕ್ರಿ.ಶ. ೧೦೫೪ರ ಕೆಂಬಾವಿ ಶಾಸನದಿಂದ ತಿಳಿದು ಬರುತ್ತದೆ. ಐವೂರು, ಜನಿವಾರ, ಭೀಮರಾಯನಗುಡಿ, ಕೆಂಬಾವಿ, ಸಂಗಮ, ಆಂದೋಲಾ, ಮುದನೂರು, ಹಗರಟಗಿ ಶಾಸನಗಳಲ್ಲಿ ಈತನ ಬಿರುದುಗಳ ಉಲ್ಲೇಖ ಕಂಡುಬರುತ್ತದೆ. ತ್ರೈಲೋಕ್ಯಮಲ್ಲ, ಆಹವಮಲ್ಲ ತುಂಗಭದ್ರಾ ನದಿಯಲ್ಲಿ ದೇಹ ತ್ಯಾಗ ಮಾಡಿದ ನಂತರ ಈತನ ಹಿರಿಯ ಮಗ ಭುವನೈಕ್ಯಮಲ್ಲ ಎರಡನೇ ಸೋಮೇಶ್ವರ ಕ್ರಿ.ಶ. ೧೦೬೮–೧೦೭೬ರವರೆಗೆ ಆಳ್ವಿಕೆ ಮಾಡಿದನು. ಈತ ಕ್ರಿ.ಶ.೧೦೬೮ರಲ್ಲಿ ಪಟ್ಟಕ್ಕೆ ಬಂದನು. ಈತನ ಆಳ್ವಿಕೆಗೆ ಸಂಬಂಧ ಪಟ್ಟಂತೆ ಅರಳಗುಂಡಗಿ ಹಾಗೂ ಸಗರ ಶಾಸನಗಳು ಮಾಹಿತಿ ನೀಡುತ್ತವೆ. ಈತ ಪ್ರಾರಂಭದಲ್ಲಿ ಕಂಪಿಲೆಯ ಮೂಲಕ ಆಡಳಿತ ಮಾಡುತ್ತಿದ್ದನು. ಈತನ ರಾಣಿ ಕಂಚಲದೇವಿ ಪೂವಿನ ಅರಿಕೇರಿಯಿಂದ ಆಳ್ವಿಕೆ ಮಾಡುತ್ತಿದ್ದಳು. ಈತನ ಇನ್ನೊಬ್ಬ ರಾಣಿ ದೇವಲದೇವಿಯ ಉಲ್ಲೇಖ ಸಗರ ಶಾಸನದಲ್ಲಿ ಕಂಡು ಬರುತ್ತದೆ. ಎರಡನೇ ಸೋಮೇಶ್ವರ ಕ್ರಿ.ಶ.೧೦೭೪ರಲ್ಲಿ ಬನವಾಸಿ–೧೨,೦೦೦ ಪ್ರಾಂತ್ಯಗಳ ಅಧಿಕಾರವನ್ನು ತನ್ನ ಸಹೋದರನಾದ ಆರನೇ ವಿಕ್ರಮಾದಿತ್ಯನಿಗೆ

ವಹಿಸಿಕೊಟ್ಟದ್ದ ಆದರೆ ಎರಡನೇ ಸೋಮೇಶ್ವರ ಅತಿಯಾದ ಅಧಿಕಾರದ ದಾಹ ಆಡಳಿತದಲ್ಲಿ ನಿರ್ಲಕ್ಷವಹಿಸಿ ಪ್ರಜೆಗಳ ಕಲ್ಯಾಣವನ್ನು ಕಡೆಗಣಿಸಿದನು. ಇದರಿಂದ ಆರನೇ ವಿಕ್ರಮಾದಿತ್ಯ ತನ್ನ ಅಣ್ಣನನ್ನು ಯುದ್ಧದಲ್ಲಿ ಸೋಲಿಸಿ, ಕ್ರಿ.ಶ. ೧೦೭೬ರಲ್ಲಿ ಸಾರ್ವಭೌಮತ್ವವನ್ನು ವಹಿಸಿಕೊಂಡನು.

## ಆರನೇ ವಿಕ್ರಮಾದಿತ್ಯ : ಕ್ರಿ.ಶ.೧೦೭೬-೧೧೨೬

ಆರನೇ ವಿಕ್ರಮಾದಿತ್ಯನ ತಂದೆ ಒಂದನೇ ಸೋಮೇಶ್ವರ ಮರಣಹೊಂದಿದ ನಂತರ ತನ್ನ ಅಣ್ಣನಾದ ಎರಡನೇ ಸೋಮೇಶ್ವರನನ್ನು ತಂದೆಯ ಸಮಾನನೆಂದು ಭಾವಿಸಿದನು. ಆದರೆ ಸೋಮೇಶ್ವರನಿಗೆ ಅಂತಹ ಉದಾರ ಭಾವನೆ, ಒಳ್ಳೆಯ ಗುಣಗಳು ಇರಲಿಲ್ಲ. ಕಾರಣ ಆರನೇ ವಿಕ್ರಮಾದಿತ್ಯನ ಶೌರ್ಯ, ಸಾಹಸಗಳು ಸಹಿಸಿಕೊಳ್ಳಲಾಗಲಿಲ್ಲ. ತನ್ನ ತಮ್ಮನನ್ನು ಹೇಗಾದರೂ ಮಾಡಿ ಸಂಚಿನಿಂದ ಕೊಲೆ ಮಾಡಲು ಹವಣಿಸಿದ ವಿಷಯ ತಿಳಿದ ವಿಕ್ರಮಾದಿತ್ಯ ಕಲ್ಯಾಣದಿಂದ ಕಾಲ್ತೆಗೆದನು. ಇದರಿಂದ ನಿರಾಳನಾಗಿ ನಿಟ್ಟುಸಿರು ಬಿಟ್ಟ ಎರಡನೇ ಸೋಮೇಶ್ವರ ರಾಜ್ಯದಲ್ಲಿ ಆರಾಮವಾಗಿ ಕಾಲಹರಣ ಮಾಡಿದ. ಇದರಿಂದ ರಾಜ್ಯದಲ್ಲಿ ಅಶಾಂತಿ ಉಂಟಾಗಿ ಸುತ್ತಲೂ ವೈರಿಪಡೆ ಹೆಚ್ಚಾಯಿತು. ಈ ವೇಳೆಗೆ ವಿಕ್ರಮಾದಿತ್ಯನ ವೈರಿಗಳಾದ ವೀರರಾಜೇಂದ್ರ ಚೋಳನ ಮಗಳನ್ನು ವಿವಾಹ ಮಾಡಿಕೊಂಡು ಎರಡು ವಂಶಗಳ ನಡುವೆ ವೈವಾಹಿಕ ಸೇತುವೆ ಕಟ್ಟಿದನು. ನಂತರ ಈತನ ಅಣ್ಣ ಎರಡನೇ ಸೋಮೇಶ್ವರ ವಿಕ್ರಮಾದಿತ್ಯನ ಮೇಲೆ ಯುದ್ಧಕ್ಕೆ ಇಳಿದನು. ಎರಡು ಸೈನ್ಯದ ನಡುವೆ ಕಾಳಗ ಏರ್ಪಟ್ಟಿತು. ಈ ಯುದ್ಧದಲ್ಲಿ ಎರಡನೇ ಸೋಮೇಶ್ವರನನ್ನು ಬಂಧಿಸಿ, ಕಾರಾಗ್ರಹಕ್ಕೆ ತಳ್ಳಲಾಯಿತು. ದುರ್ಬಲನಾದ ಅಣ್ಣ ಎರಡನೇ ಸೋಮೇಶ್ವರನನ್ನು ಬದಿಗೊತ್ತಿ ಕಲ್ಯಾಣ ಚಾಲುಕ್ಯ ಅರಸರಲ್ಲಿಯೇ ಅತಿ ಪರಾಕ್ರಮಿ ಎನಿಸಿದ ಶಕಮರುಷ ಆರನೇ ವಿಕ್ರಮಾದಿತ್ಯ ಆಳ್ವಿಕೆ ವಹಿಸಿಕೊಂಡಿದ್ದು ಕರ್ನಾಟಕ ಇತಿಹಾಸದಲ್ಲೇ ಮಹತ್ವದ ಘಟ್ಟವಾಗಿದೆ.

"ಸಮಸ್ತ ಭುವನಾಶ್ರಯ ಶ್ರೀ ಪೃಥ್ವಿವಲ್ಲಭಂ ಮಹಾರಾಜಾಧಿರಾಜಂ, ಪರಮೇಶ್ವರಂ, ಪರಮಭಟ್ಟಾರಕಂ, ಸತ್ಯಾಶ್ರಯ ಕುಳತಿಳಕಂ, ಚಾಳುಕ್ಯಾಭರಣಂ ಶ್ರೀಮತ್ರಿಭುವನಮಲ್ಲದೇವ"[೩] ಎಂಬ ಹೊಗಳಿಕೆ ಕೊಂಡಗುಳಿ ಶಾಸನದಲ್ಲಿ ಮಾತ್ರ ಕಂಡುಬರುತ್ತದೆ. ತಂದೆಯ ಕಾಲದಿಂದಲೂ ಯುವರಾಜನಾಗಿ ಅನೇಕ ಯುದ್ಧಗಳಲ್ಲಿ ಪಾಲ್ಗೊಂಡು ಜಯ ಸಾಧಿಸಿ ಆಳ್ವಿಕೆ ಮಾಡಿದ್ದು ಸಗರ ನಾಡಿನ ಶಾಸನಗಳಿಂದ ತಿಳಿದುಬರುತ್ತದೆ. ಕ್ರಿ.ಶ.೧೦೭೪ರ ಬೈಚಬಾಳ ಶಾಸನದಲ್ಲಿ "ಸಮಸ್ತ ಭುವನಾಶ್ರಯ ಚಾಲುಕ್ಯಾಭರಣ"[೪] ಎಂದು ಬರೆಯಿಸಿದ್ದಾನೆ. ಗಮನ

ಸೆಳೆಯುವ ವಿಷಯವೆಂದರೆ, ಎರಡನೇ ಸೋಮೇಶ್ವರ ಇನ್ನೂ ಆಳ್ವಿಕೆ ಮಾಡುತ್ತಿರುವಾಗಲೇ ತಾನು ಚಕ್ರವರ್ತಿ ಎಂದು ಘೋಷಿಸಿಕೊಂಡಿದ್ದನು. ಈ ಅಂಶ ಆರನೇ ವಿಕ್ರಮಾದಿತ್ಯ ತಾನು ಕ್ರಿ.ಶ. ೧೦೭೬ ರಲ್ಲಿ ನಿಜವಾಗಿ ಪಟ್ಟಕ್ಕೆ ಬರುವ ಪೂರ್ವದಲ್ಲಿಯೇ ಅಣ್ಣನನ್ನು ಅಲಕ್ಷಿಸಿದ್ದನ್ನು ಶಾಸನಗಳು ಪುಷ್ಠೀಕರಿಸುತ್ತವೆ.

ವಿಕ್ರಮಾದಿತ್ಯ ಪಟ್ಟಕ್ಕೆ ಬಂದ ಮೇಲೆ ಮಾಡಿದ ಪ್ರಥಮ ಸಾಧನೆ, ತನ್ನ ಹೆಸರಿನ ಕಾಲಗಣನೆಯನ್ನು ಜಾರಿಗೆ ತಂದದ್ದು ವಡಗೇರಿ ಶಾಸನ ಸ್ಪಷ್ಟಪಡಿಸುತ್ತದೆ. ಐವತ್ತು ವರ್ಷಗಳವರೆಗೂ ಸುದೀರ್ಘವಾದ ರಾಜ್ಯಭಾರ ಮಾಡಿದ ವಿಕ್ರಮಾದಿತ್ಯ ಕ್ರಿ.ಶ.೧೦೭೬ರಲ್ಲಿ ತಾನು ಪಟ್ಟಾಭಿಷೇಕ ಮಾಡಿಕೊಂಡ ಸವಿ ನೆನಪಿಗಾಗಿ ಚಾಲುಕ್ಯ ವಿಕ್ರಮ ಶಕೆ ಎಂಬ ಕಾಲಗಣನೆ ಪ್ರಾರಂಭಿಸಿದನು. ಇಂತಹ ಮಹತ್ವದ ಶಾಸನ ವಡಗೇರಿಯಲ್ಲಿದೆ.

"ಸ್ವಸ್ತಿ ಸಮಸ್ತ ಭುವನಾಶ್ರಯ
ಶ್ರೀ ಪೃಥ್ವೀವಲ್ಲಭ ಮಹಾರಾಜಾಧಿರಾಜ
ಪರಮೇಶ್ವರ ಪರಮಭಟ್ಟಾರಕಂ ಸತ್ಯಾಶ್ರಯ
ಕುಳತಿಳಕ ಚಾಳುಕ್ಯಭರಣಂ ಶ್ರೀಮತ್ರಿಭುವನ
ಮಲ್ಲದೇವರ ವಿಜಯರಾಜ್ಯ ಮುತ್ತರೋತ್ತರಾಭಿವೃದ್ಧಿ
ಪ್ರವರ್ಧಮಾನಮಾ ಚಂದ್ರಾರ್ಕ್ಕ ತಾರಂ ಸಲುತ್ತಮಿರೆ
ನಡವಿಯುಪ್ಪಯಣ ವೀಡಿನೊಳ್ಸುಖಸಂಕಥಾ ವಿನೋದದಿಂ
ರಾಜ್ಯಂಗೆಯುತ್ತಮಿರೆ ಸ್ವಸ್ತಿ ಶ್ರೀ ಚಾಳುಕ್ಯ ವಿಕ್ರಮ
ವರ್ಷದ ಪ್ರಥಮದ ನಳಸಂವತ್ಸರದ ಫಾಲ್ಗುನ
ಶುದ್ಧ ಪಂಚಮಿ ಬೃಹಸ್ಪತಿವಾರದಂದು ಪಟ್ಟಬನ್ಧೋತ್ಸವ
ನಿಮಿತ್ತದಿಂ ॥"

ಕ್ರಿ.ಶ.೧೦೭೭ರ ವಡಗೇರಿ ಶಾಸನದಿಂದ ತಿಳಿದು ಬರುತ್ತದೆ. ಬಸವೇಶ್ವರ ದೇವಾಲಯದ ಬಲಭಾಗದ ಹೊರ ಗೋಡೆಯ ಮೇಲೆ ಈ ಶಾಸನ ಕೆತ್ತಲಾಗಿದೆ. ಈ ಕಾಲಗಣನೆ ಆರಂಭಿಸಿದ ಬಹುಶಃ ಈತನೇ ಕನ್ನಡದ ಪ್ರಥಮ ಶಕ ಪುರುಷ ಎಂಬ ಹೆಗ್ಗಳಿಕೆಯನ್ನು ಪಡೆದುಕೊಂಡಿದ್ದಾನೆ. ಈ ಕಾಲಗಣನೆ ಸುಮಾರು ೭೦೦ ವರ್ಷಗಳ ಕಾಲದವರೆಗೂ ಕಂಡುಬರುತ್ತದೆ. ಪಟ್ಟಕ್ಕೆ ಬಂದುದರ ಸಲುವಾಗಿ ಹೊಸ ಶಕೆಯನ್ನೆ

ಪ್ರಾರಂಭಿಸಿದ. ಅದು ಹೇಗೆಂದರೆ "ವಿಕ್ರಮಾದಿತ್ಯ ನನ್ಯ ನರೇಂದ್ರರ್ಕ್ಕಳ ತೇಜಮಿಲ್ಲಿರ್ಪುದುವಿನ್ನೇಕೆಂದು ತನ್ನಾಣೆ ಗೋಸಣೆಯಾಗಲ್ಸ ಕನಾಮವಂ ಕಳೆದು ಚಾಳುಕ್ಯಾಂಕಮಮ್ಮಾಡಿದಂ"[೪] ಎಂಬ ಉಲ್ಲೇಖದಿಂದ ತಿಳಿದು ಬರುತ್ತದೆ.

ತ್ರಿಭುವನಮಲ್ಲ ಎಂಬ ಬಿರುದನ್ನು ಪಡೆದ ಆರನೇ ವಿಕ್ರಮಾದಿತ್ಯನು "ಬಂಕಾಪುರ"[೫] "ನಡವಿಯುಪ್ಪವಣ"[೬] "ಕಲ್ಯಾಣಪುರ"[೭] ಸೆಲೆಯ ಹಳ್ಳಿ"[೮], "ಜಯನ್ತೀಪುರ" (ಬನವಾಸಿ)"[೯], ಸಂಕನ ಕೆರೆಯೂರ ಹಾಗೂ ಪೊಟ್ಟಳಕೆರೆ, ಮನೆಯಕೆರೆ ಹೀಗೆ ವಿವಿಧ ನಾಡುಗಳಿಂದ ಆಳ್ವಿಕೆ ಮಾಡುತ್ತಿದ್ದನೆಂಬುದು ಶಾಸನಗಳಿಂದ ತಿಳಿದು ಬರುತ್ತದೆ. ವಿಕ್ರಮಾದಿತ್ಯ ತನ್ನ ಐವತ್ತು ವರ್ಷಗಳ ಸುಧೀರ್ಘ ಆಳ್ವಿಕೆಯಲ್ಲಿ ರಾಜಕೀಯ ಹೋರಾಟಗಳನ್ನು ಕಡೆಗಣಿಸಿ, ಪ್ರಜೆಗಳ ಅಭಿವೃದ್ಧಿಗಾಗಿ, ರಾಜ್ಯದ ಶಾಂತಿ, ಸಂವೃದ್ಧಿಗಾಗಿ ಶ್ರಮಿಸಿದನು. ಇದರಿಂದ ಜನಪ್ರಿಯನಾದ ವಿಕ್ರಮಾದಿತ್ಯನ ಕೀರ್ತಿ ಭಾರತದಾದ್ಯಂತ ವ್ಯಾಪಿಸಿತು. ಈತನ ಆಸ್ಥಾನ ಕವಿ ವಿಜ್ಞಾನೇಶ್ವರ ತನ್ನ ಮಿತಾಕ್ಷರದಲ್ಲಿ "ನಾಸೀದಸ್ತಿ ಭವಿಷ್ಯತಿ ಕ್ಷಿತಿತಲೇ ಕಲ್ಯಾಣಕಲ್ಪಂ ಪುರಂ ನೋ ದೃಷ್ಟ : ಶ್ರುತ ಏವವಾಕ್ಷಿತಿಪತಿ: ಶ್ರೀವಿಕ್ರಮಾರ್ಕೋಪಮ:" ಅಂದರೆ "ಭೂಮಿಯ ಮೇಲೆ ಕಲ್ಯಾಣದಂಥ ಮತ್ತೊಂದು ನಗರ ಈ ಹಿಂದೆ ಇರಲಿಲ್ಲ. ಇಂದೂ ಇಲ್ಲ. ಮುಂದೆಯೂ ಹುಟ್ಟುವುದಿಲ್ಲ. ವಿಕ್ರಮಾದಿತ್ಯನಂಥ ಚಕ್ರವರ್ತಿ ಪ್ರಪಂಚದಲ್ಲಿ ಬೇರೆ ಯಾರೂ ಇಲ್ಲ"[೧೦] ಎಂದು ವರ್ಣಿಸಿದ್ದಾನೆ.

ಕರ್ನಾಟಕದ ಶಾಸನಗಳಲ್ಲಿ ಅತಿ ಹೆಚ್ಚು ಶಾಸನ ಬರೆಯಿಸಿದ ಶ್ರೇಯಸ್ಸು ವಿಕ್ರಮಾದಿತ್ಯನಿಗೆ ಸಲ್ಲುತ್ತದೆ. ಪ್ರತಿನಿತ್ಯ ದಾನ ದತ್ತಿಗಳನ್ನು ಮಾಡಿ ಪ್ರತಿನಿತ್ಯ ಶಾಸನವನ್ನು ಬರೆಯಿಸುತ್ತಿದ್ದನು. ಹಾಗಾಗಿ ಈತನನ್ನು ನಿತ್ಯ ಭೂಮಿದಾನ ಲೋಲನೂ ಹೌದು, ನಿತ್ಯ ಶಾಸನ ಲೋಲನೂ ಹೌದು ಎಂದು ಹೇಳಲಾಗಿದೆ. ಈ ನಾಡಿನಲ್ಲಿ ೧/೩ ಭಾಗದಷ್ಟು ಶಾಸನಗಳು ನೇರವಾಗಿ ಈತನನ್ನೇ ಉಲ್ಲೇಖಿಸಿದರೆ ಉಳಿದ ಶಾಸನಗಳು ಕಲ್ಯಾಣ ಚಾಲುಕ್ಯರ ವಂಶಕ್ಕೆ ಸಂಬಂಧಿಸಿದ್ದಾಗಿವೆ. ವಿಕ್ರಮಾದಿತ್ಯನ ಆಡಳಿತದ ಬಗ್ಗೆ ಈ ಶಾಸನಗಳು ಮಾಹಿತಿಯನ್ನು ಒದಗಿಸಿಕೊಡುತ್ತವೆ.

ತ್ರಿಭುವನಮಲ್ಲ ಆರನೇ ವಿಕ್ರಮಾದಿತ್ಯ ಶೌರ್ಯದಲ್ಲಿ ನಾರಾಯಾಣನಾಗಿದ್ದರೆ, ವಿವಾಹದ ವಿಷಯದಲ್ಲಿ ಶ್ರೀಕೃಷ್ಣ ಪರಮಾತ್ಮನಾಗಿದ್ದಾನೆ. ಭರತೇಶ ಚಕ್ರವರ್ತಿ ೯೬,೦೦೦ ದಷ್ಟು ಅತಿ ಹೆಚ್ಚು ರಾಣಿಯರನ್ನು ಹೊಂದಿದ್ದರೆ, ಶ್ರೀ ಕೃಷ್ಣ ಪರಮಾತ್ಮ ೧೬,೦೦೦ದಷ್ಟು ರಾಣಿಯರನ್ನು ಹೊಂದಿದ್ದ. ಇಂತಹ ಪೌರಾಣಿಕ ವ್ಯಕ್ತಿಗಳನ್ನು ಬಿಟ್ಟರೆ, ಐತಿಹಾಸಿಕವಾಗಿ ಅತಿ ಹೆಚ್ಚು ರಾಣಿಯರನ್ನು ಹೊಂದಿದ ಹೆಗ್ಗಳಿಕೆ ವಿಕ್ರಮಾದಿತ್ಯನಿಗೆ ಸಲ್ಲುತ್ತದೆ. "ಶಾಸನಗಳಲ್ಲಿ

ಕರ್ನಾಟಕದ ಸ್ತ್ರೀ ಸಮಾಜ'' ಎಂಬ ಗ್ರಂಥದಲ್ಲಿ ಡಾ.ಚೆನ್ನಕ್ಕ ಎಲಿಗಾರರು ವಿಕ್ರಮಾದಿತ್ಯನಿಗೆ ಹದಿನಾರು ಜನ ರಾಣಿಯರೆಂದು ಹೇಳಿ, ಹನ್ನೊಂದು ಜನ ರಾಣಿಯರನ್ನು ಹೆಸರಿಸಿದ್ದಾರೆ. ಇನ್ನೂ ಮುಂದುವರೆದು ''ಆರನೇ ವಿಕ್ರಮಾದಿತ್ಯನ ಶಾಸನಗಳು ಒಂದು ಅಧ್ಯಯನ : ಎಂಬ ಗ್ರಂಥದಲ್ಲಿ ಡಾ.ಜೆ.ಎಂ.ನಾಗಯ್ಯ ಅವರು ಹತ್ತೊಂಬತ್ತು ಜನ ರಾಣಿಯರನ್ನು ಹೆಸರಿಸಿದ್ದಾರೆ, ''ಪ್ರಾಚೀನ ಕರ್ನಾಟಕದ ರಾಣಿಯರು'' ಎಂಬ ಗ್ರಂಥದಲ್ಲಿ ಡಾ.ಚೆನ್ನಕ್ಕ ಎಲಿಗಾರರು ಇಪ್ಪತ್ತು ಜನ ರಾಣಿಯರನ್ನು ಹೆಸರಿಸಿದ್ದಾರೆ. ಆ ರಾಣಿಯರೆಂದರೆ ''ಚೋಳರಾಣಿ, ಕದಂಬರಾಣಿ, ಸಾವಳದೇವಿ, ಪದ್ಮಲದೇವಿ, ಕೇತಲದೇವಿ, ಲಕ್ಷ್ಮಿದೇವಿ, ಚಂದಲದೇವಿ, ಪಿರಿಯ ಕೇತಲದೇವಿ, ಇಂಗುಳಿಗೆಯ ಜಾಕಲದೇವಿ, ಮೈಳಲ ಮಹಾದೇವಿ, ಶ್ರೀಯಾದೇವಿ, ಮನ್ನಾದೇವಿ, ಮಲೆಯಮತಿದೇವಿ, ಮಲ್ಲಣಿದೇವಿ, ಸುಗ್ಗಲದೇವಿ, ಅಬ್ಬಲದೇವಿ, ಭಾಗಲದೇವಿ, ಮಾಳಲದೇವಿ, ಯಂಗಲದೇವಿ, ಮತ್ತು ರೆಬ್ಬಲದೇವಿ''[೧೧] ಈ ರೀತಿ ಆರನೇ ವಿಕ್ರಮಾದಿತ್ಯ ಅನೇಕ ಜನ ರಾಣಿಯರನ್ನು ಹೊಂದಿದ್ದು, ವಿವಿಧ ಭಾಗಗಳಿಂದ ಆಡಳಿತ ಮಾಡುತ್ತಿದ್ದನು. ಈತನ ಆಸ್ಥಾನದಲ್ಲಿ ಕಾಶ್ಮೀರದ ಕವಿ ಬಿಲ್ಹಣನು ಬರೆದ ಕೃತಿ ''ವಿಕ್ರಮಾಂಕದೇವ ಚರಿತ'' ಇದು ವಿಕ್ರಮಾದಿತ್ಯನ ಚರಿತ್ರೆಯ ಮೇಲೆ ಬೆಳಕು ಚೆಲ್ಲುವ ಪ್ರಮುಖ ಆಧಾರ ಕೃತಿಯಾಗಿದೆ.

ಆರನೇ ವಿಕ್ರಮಾದಿತ್ಯನ ನಂತರ ಈತನ ಎರಡನೇ ಮಗ ಮುಮ್ಮಡಿ ಸೋಮೇಶ್ವರ ಪಟ್ಟಕ್ಕೆ ಬಂದನು. ತಂದೆಯ ಆಡಳಿತ ಪದ್ಧತಿಯನ್ನೆ ಈತ ಮುಂದುವರೆಸಿದನು. ಆದರೆ ಈತ ಆಡಳಿತಕ್ಕಿಂತ ಸಾಹಿತ್ಯ ಹಾಗೂ ಕಲೆಗಳಿಗೆ ಹೆಚ್ಚಿನ ಪ್ರಾಮುಖ್ಯತೆ ನೀಡಿದನು. ರಾಜ್ಯ ಶಾಂತಿ ಮತ್ತು ಸುಭಿಕ್ಷೆಯಿಂದ ಕೂಡಿತು. ಈತ ''ನೆರೆಯಂಬೊಳೆ-೭೦ ರಿಂದ ಆಳ್ವಿಕೆ ಮಾಡುತ್ತಿದ್ದನು.''[೧೨] ವಿಕ್ರಮಾಂಕಾಭ್ಯುದಯ ಹಾಗೂ ಮಾನಸೋಲ್ಲಾಸ ಎಂಬ ಬಿರುದನ್ನು ಹೊಂದಿದ್ದು ಯಡ್ರಾಮಿ ಶಾಸನದಿಂದ ತಿಳಿದು ಬರುತ್ತದೆ. ಮುಮ್ಮಡಿ ಸೋಮೇಶ್ವರನ ನಂತರ ಈತನ ಮಗ ಇಮ್ಮಡಿ ಜಗದೇಕ ಮಲ್ಲ ಪಟ್ಟಕ್ಕೆ ಬಂದನು. ಈತನ ಕಾಲದ ಒಂದು ಶಾಸನ ಯಡ್ರಾಮಿಯಲ್ಲಿ ದೊರೆತಿದೆ. ನಂತರ ಮುಮ್ಮಡಿ ತೈಲಪ ಪಟ್ಟಕ್ಕೆ ಬಂದನಾದರೂ ಬಹು ಕಾಲ ಆಳ್ವಿಕೆ ಮಾಡಲಿಲ್ಲ. ಈತನ ಅಸಮರ್ಥತೆಯ ಲಾಭವನ್ನು ಕಲಚೂರಿ ಬಿಜ್ಜಳ ಪಡೆದುಕೊಂಡು, ಈತನನ್ನು ಅಧಿಕಾರದಿಂದ ತಳ್ಳಿ ಹಾಕಿ ಆಡಳಿತ ವಹಿಸಿಕೊಂಡನು. ಹೀಗೆ ಕಲ್ಯಾಣ ಚಾಲುಕ್ಯರು ಅತಿ ವೈಭವದ ಆಡಳಿತ ಮಾಡಿದ್ದು ಶಾಸನಗಳಿಂದ ತಿಳಿದು ಬರುತ್ತದೆ.

## ಕಲಚೂರಿಯರು :

ಕಳಚೂರಿ ವಂಶದವರು ಮೂಲತಃ ಮಧ್ಯ ಭಾರತದಿಂದ ಬಂದವರಾಗಿದ್ದಾರೆ. ಯದು ಮತ್ತು ಸಹಸ್ರಜಿತ್ ಅವರ ವಂಶಜರೆಂದು ಕರೆದುಕೊಂಡಿದ್ದಾರೆ. ಇವರಿಗೆ ಕಲಚೂರಿ ಎಂದು ಕರೆದರೂ, 'ಕೇಟಚೂರಿ', 'ಕಲಟ್‌ಚೂರಿ', 'ಕಲಿಚೂರಿ' ಎಂಬ ಪದಗಳು ಶಾಸನಗಳಲ್ಲಿ ಕಂಡು ಬರುತ್ತವೆ. ಇವರು ಹೈಹಯ (ಚೇದಿ) ಕುಟುಂಬಕ್ಕೆ ಸೇರಿದವರಾಗಿದ್ದರು. ಇವರು ''ಮೊದಲು 'ಕಾಲಂಜರಾ' (ಬುಂದೇಲ್ ಖಂಡದ) ಜಿಲ್ಲೆಯಿಂದ ಆಳುತ್ತಿದ್ದು ಮಾಳವ, ಗುಜರಾತ, ಕೊಂಕಣ ಮತ್ತು ಮಹಾರಾಷ್ಟ್ರಗಳಲ್ಲಿ ಇವರ ಶಾಖೆಗಳಿದ್ದವೆಂದು ತಿಳಿದು ಬರುತ್ತದೆ.''[೧೩] ಕಲಚೂರಿಗಳು ಶಿವನಿಂದಲೇ (ಶಿವಾಂಶ ಸಂಭೂತ) ಉದ್ಭವಿಸಿದವರಾಗಿದ್ದರು. ಹೈಹಯ ರಾಜಧಾನಿಯಾದ ನರ್ಮದಾ ನದಿ ತೀರದ ಮಾಹಿಷ್ಮತಿಯನ್ನು ಮಾಹೀಷ್ಮತಿಪುರಮರಾದೀಶ್ವರ ಎಂಬುದರ ಮೂಲಕ ಕರೆದುಕೊಂಡಿದ್ದಾರೆ.

'ಸುವರ್ಣ ವೃಷಭ' ಇವರ ಲಾಂಛನವಾಗಿತ್ತು. ಕಲ್ಯಾಣ ಚಾಲುಕ್ಯರನ್ನು ಮೂಲೆಗೊತ್ತಿ ಕ್ರಿ.ಶ. ೧೧೬೨ ರಲ್ಲಿ ಕುಲಚೂರಿಗಳು ಅಧಿಕಾರಕ್ಕೆ ಬಂದರು. ಉಚ್ಚಿತ, ಬಿಜ್ಜಳ, ಕರ್ಣ, ಜೋಗಮ ಹೀಗೆ ಇವರೆಲ್ಲ ಅನುಕ್ರಮವಾಗಿ ಆಡಳಿತ ಮಾಡಿದರು. ಇವರ ಬಗ್ಗೆ ಯಾವುದೇ ಶಾಸನಗಳು ಈ ನಾಡಿನಲ್ಲಿ ಲಭ್ಯವಾಗಿಲ್ಲ. ಕಲಚೂರಿಗಳ ಆಳ್ವಿಕೆಗೆ ಒಳಪಟ್ಟ ಮೊದಲ ಶಾಸನ ಗುರುಸುಣಗಿ ಶಾಸನವಾಗಿದೆ. ಈ ಅರಸರ ಆಳ್ವಿಕೆ ನಂತರ ಇಮ್ಮಡಿ ಬಿಜ್ಜಳ ಪಟ್ಟಕ್ಕೆ ಬಂದನು. ದಕ್ಷನು ಸಮರ್ಥನು, ರಾಜಕೀಯ ಮುತ್ಸದ್ದಿಯೂ ಆಗಿದ್ದನು. ಕಲ್ಯಾಣ ಚಾಲುಕ್ಯರ ಪ್ರತಿ ರಾಜಕೀಯ ವಿಷಯ ಸೂಕ್ಷ್ಮವಾಗಿ ಅರಿತಿದ್ದನು. ಮುಮ್ಮಡಿ ತೈಲಪನ ಆಡಳಿತ ಅವಧಿಯಲ್ಲಿ ಮಹಾಮಂಡಳೇಶ್ವರನಾದ ಬಿಜ್ಜಳ ಆತನ ಅಸಮರ್ಥ ಆಡಳಿತ ಸಹಿಸಿಕೊಳ್ಳಲಾಗಲಿಲ್ಲ. ಅಲ್ಲದೆ ಬಿಜ್ಜಳನಿಗಿಂತಲೂ ತೈಲಪ ಕಿರಿಯವನಾಗಿದ್ದ. ಹೀಗಾಗಿ ಚಾಲುಕ್ಯರ ರಾಜಕೀಯ ಪರಿಸ್ಥಿತಿಯನ್ನು ಅರಿತ ಬಿಜ್ಜಳ ತೈಲಪನನ್ನು ಅಧಿಕಾರದಿಂದ ತಳ್ಳಿಹಾಕಿ ಅದರ ಸದುಪಯೋಗ ಪಡೆದುಕೊಂಡನು. ''ಶ್ರೀಮತು ಕಳಚರ್ಯ್ಯ ಭುಜಬಳ ಚಕ್ರವರ್ತಿ ತ್ರಿಭುವನಮಲ್ಲದೇವ ವರಿಸದ''[೧೪] ಎಂದು ಶಾಸನ ಹೊರಡಿಸಿ ಬಿಟ್ಟನು. ಬಿಜ್ಜಳ ಎರಡು ಮೂರು ವರ್ಷಗಳವರೆಗೆ ಹೀಗೆ ಆಡಳಿತ ಮುಂದುವರೆಸಿದ ನಂತರ ಅನೇಕ ಬಿರುದುಗಳನ್ನು ಪಡೆದುಕೊಂಡದ್ದು, ಸಗರ ನಾಡಿನ ಶಾಸನಗಳಿಂದ ತಿಳಿದುಬರುತ್ತದೆ. ''ಕಾಳಾಂಜರಪುರಯ್ರ್ಯ ನಿಘೋರ್ಷಣಂ ಕಳಚುರ್ಯ್ಯಕು ಕನಕಾಚಳಂ ಸುಭಟರಾದಿತ್ಯ ಕಲಿಗಳ ತಾಪ ಲಂಕೇಶ್ವರ ಪರನಾರಿ ಸಹೋದರ ಕಠೀರವ ನಿಸ್ಸಂಕಮಲ್ಲ ನಾಮಾದಿ ಸಮಸ್ತ ತ್ರಿಭುವನಮಲ್ಲದೇವರ''[೧೫] ಎಂದು ಹೊಗಳಿಕೊಂಡಿದ್ದಾನೆ.

ಹೀಗೆ ಬಿಜ್ಜಳ ಅನೇಕ ಬಿರುದುಗಳನ್ನು ಹೊಂದಿದ್ದನು. ಆದರೆ ಸಂಪೂರ್ಣವಾಗಿ ಚಾಲುಕ್ಯ ಸಾಮ್ರಾಜ್ಯ ಈತನ ಅಧೀನಕ್ಕೆ ಒಳಪಡಲಿಲ್ಲ. ಈತ ಮಹತ್ವಾಕಾಂಕ್ಷಿ, ರಾಜಕೀಯ ಮುತ್ಸದ್ಧಿಯಾದರೂ ಇದು ಬಹು ಕಾಲ ಉಳಿಯಲಿಲ್ಲ. ರಾಜ್ಯದಲ್ಲಿ ಅಂತರಿಕ ವಿರೋಧಗಳನ್ನು ಈತ ಎದುರಿಸಬೇಕಾಯಿತು. ಹೀಗಾಗಿ ಬಿಜ್ಜಳ ತನ್ನ ಅಧಿಕಾರವನ್ನು ತ್ಯಜಿಸಿ, ತನ್ನ ಮಗನಾದ ರಾಯಮುರಾರಿ ಸೋವಿದೇವನಿಗೆ ಪಟ್ಟ ಕಟ್ಟಿದ. ರಾಯಮುರಾರಿ ಸೋವಿದೇವ ಮುದನೂರು ನೆಲೆವೀಡಿನಿಂದ ಕ್ರಿ.ಶ. ೧೧೩೭ರಲ್ಲಿ ಆಳ್ವಿಕೆ ಮಾಡುತ್ತಿದ್ದನು. ಭೂಲೋಕಮಲ್ಲನ ಆಳ್ವಿಕೆಯಲ್ಲಿ ಮಹಾಮಂಡಳೇಶ್ವರನಾಗಿದ್ದ ಸೋವಿದೇವ. ಸಗರ ಐದನೂರು ಬಾಡದ ಹೆಗ್ಗಡೆ ದಂಡನಾಯಕರೊಂದಿಗೆ ಶ್ರೀ ಕದಂಬೇಶ್ವರ ದೇವರಿಗೆ ದಾನ ಕೊಟ್ಟಿದ್ದು ಶಿರವಾಳ ಶಾಸನದಿಂದ ತಿಳಿದು ಬರುತ್ತದೆ. ಸೋವಿದೇವನು ಅನೇಕ ಬಿರುದುಗಳನ್ನು ಪಡೆದದ್ದು ಈ ನಾಡಿನ ಶಾಸನಗಳಿಂದ ತಿಳಿದು ಬರುತ್ತದೆ.

> "ರಿಪುಮಣ್ಡಳಿಕ ಶರಭಭೇರುಣ್ಡಂ ಜಗದೊರ್ವ್ವಗಣ್ಡ
> ನಾಶ್ರಿತಜನ ಚಿತ್ತಾಮಣಿ ಮಂಡಳಿಕ ಮಕುಟ
> ಚೂಡಾಮಣಿ ಚತುರಂಗ ಬಲಮನೇಕಾಂಗದೊಳೆ
> ಗೆಲ್ದರಿ ಭೂಪಾಳರ ಶಿರವಂ ಮೆರೆವನಾಳಿಂ ಮುನ್ನಿರವ
> ಸರಣಾಗತವಜ್ರಪಂಜರಂ ವೈರಿದಿಕ್ಕುಂಜರಂ ಶ್ರೀ ಮದ್ಭೂ
> ಲೋಕಮಲ್ಲದೇವರ ಸಿಡಿಲ ವಾರಿಗೆದಪ್ಪುವ ಮಣ್ಡಳಿಕರ
> ಗಣ್ಡಂ ನಾಮಾದಿ ಸಮಸ್ತ ಪ್ರಶಸ್ತಿ ॥ "೦೭

ಎಂಬಲ್ಲಿ ಸೋವಿದೇವನ ಉಲ್ಲೇಖ ಏವೂರು, ಮುದನೂರು, ಯಡ್ರಾಮಿ ಶಾಸನಗಳಲ್ಲಿ ಕಂಡು ಬರುತ್ತದೆ. ವೈರಿ ಪಡೆಯನ್ನು ನಾಶಗೊಳಿಸುವ ಶಕ್ತಿ ಸಾಮರ್ಥ್ಯ ಈತನಿಗಿತ್ತು. ಕಳಚೂರಿ ವಂಶಕ್ಕೆ ಕಮಲದಂತಿದ್ದನು. ಮಹಾ ಪ್ರಚಂಡನು. ವೈರಿ ಸಮೂಹಕ್ಕೆ ವಜ್ರ ಮುಷ್ಠಿಯಾಗಿದ್ದನು. ಸೋವಿದೇವನ ನಂತರ ಈತನ ಕಿರಿಯ ಸಹೋದರ ಸಂಕಮದೇವ ಪಟ್ಟಕ್ಕೆ ಬಂದನು. ಸೋವಿದೇವನ ಬಿರುದುಗಳನ್ನೆಲ್ಲಾ ಪಡೆದನು. ಕಲಚೂರಿ ಅರಸ ಸಂಕಮದೇವನ ಉಲ್ಲೇಖ ಗುರುಸುಣಗಿ ಶಾಸನದಿಂದ ತಿಳಿದುಬರುತ್ತದೆ. "ಸ್ವಸ್ತಿ ಶ್ರೀಮತ ಕಳಚೂರ್‍ಯ್ಯ ಚಕ್ರವರ್ತ್ತಿ ರಾಯನಾರಾಯಣ ಸಂಕಮದೇವ" ಎಂಬ ಉಲ್ಲೇಖ ಹಗರಟಗಿ ಶಾಸನದಿಂದ ತಿಳಿದುಬರುತ್ತದೆ. ಬಿಜ್ಜಳನ ಕಾಲದಿಂದ ಆಂತರಿಕ ಕಲಹಗಳು ನಡೆಯುತ್ತಲೇ ಇದ್ದವು. ಇದರಿಂದ ಅವರಲ್ಲೇ ಅಧಿಕಾರಕ್ಕಾಗಿ ಕಾದಾಟ ನಡೆದವು. ಒಬ್ಬರಿಗೆ ಗೊತ್ತಾಗದೆ,

ಇನ್ನೊಬ್ಬರು ಸಂಚು ಮಾಡಿ, ಸ್ವತಂತ್ರರಾಗುತ್ತಿದ್ದರು. ಇದರಿಂದ ಕಲಚೂರಿ ಮನೆತನಕ್ಕೆ ಬಲವಾದ ಪೆಟ್ಟು ಬಿತ್ತು. ಇದರಿಂದ ಬಹಳ ದಿನ ಆಡಳಿತ ಮುಂದುವರೆಸಲಾಗಲಿಲ್ಲ. ಇದರ ಸದುಪಯೋಗವನ್ನು ಪಡೆದುಕೊಂಡು ಮತ್ತೆ ಕಲ್ಯಾಣ ಚಾಲುಕ್ಯ ವೀರಸೋಮೇಶ್ವರ ತನ್ನ ವಿಶ್ವಾಸಿ, ದಂಡನಾಯಕರಿಂದ ಅಧಿಕಾರಕ್ಕೆ ಬಂದನು. ಆದರೆ ಬಿಜ್ಜಳ ಬಿತ್ತಿದ ವಿಷದ ಬೀಜ ಹೆಮ್ಮರವಾಗಿತ್ತು. ಹಾಗಾಗಿ ಚಾಲುಕ್ಯರು ಭದ್ರ ಅಡಿಪಾಯ ಹಾಕಲು ಸಾಧ್ಯವಾಗಲಿಲ್ಲ. ಕಾರಣ ರಾಜ್ಯದ ಸುತ್ತ ವೈರಿಪಡೆ ಆವರಿಸಿತು. ಹೊಯ್ಸಳರು. ಸೇವುಣರು, ಕಾಕತೀಯರು ಹೀಗೆ ಇವರೆಲ್ಲ ಸ್ವತಂತ್ರರಾಗಲು ಹವಣಿಸುತ್ತಿದ್ದರು. ಇದರಿಂದ ವೀರಸೋಮೇಶ್ವರ ವೈರಿಯನ್ನು ಎದುರಿಸಲಾಗದೆ. ಅಲ್ಲಿಂದ ಕಾಲ್ಕಿತ್ತಿ ಬನವಾಸಿಗೆ ಪಲಾಯನ ಮಾಡಿದನು. ಇವರ ನಂತರ ದೇವಗಿರಿಯ ಯಾದವರು ಅಥವಾ ಸೇವುಣರು ಅಧಿಕಾರಕ್ಕೆ ಬಂದರು.

## ದೇವಗಿರಿಯ ಯಾದವರು ಅಥವಾ ಸೇವುಣರು :

ಕಲಚೂರಿಗಳ ಸಾರ್ವಭೌಮತ್ವವನ್ನು ಒಪ್ಪದ ಸೇವುಣರು, ಸ್ವತಂತ್ರರಾಗಲೂ ಬಯಸಿದರು. ಸಾಮ್ರಾಜ್ಯದ ಮೇಲೆ ಹಿಡಿತ ಸಾಧಿಸಲಾಗದ ವೀರಸೋಮೇಶ್ವರ ರಾಜಧಾನಿಯಿಂದ ಪಲಾಯನಗೊಂಡಾಗ ಸೇವುಣರು ಅಧಿಕಾರಕ್ಕೆ ಬರಲು ಸಾಧ್ಯವಾಯಿತು. ಸೇವುಣರ ಕಾಲದ ಹಲವಾರು ಶಾಸನಗಳು ಈ ನಾಡಿನಲ್ಲಿ ಲಭ್ಯವಾಗಿವೆ. ''ಸ್ವಸ್ತಿ ಶ್ರೀಮತ ಭಿಲ್ಲಮದೇವ''[೧೮] ಎಂಬ ಉಲ್ಲೇಖ ಮುದನೂರು ಶಾಸನದಿಂದ ತಿಳಿದು ಬರುತ್ತದೆ. ಭೀಲ್ಲಮನ ಇನ್ನೊಂದು ಶಾಸನ ಶಿರವಾಳದಲ್ಲಿ ಕಂಡು ಬರುತ್ತದೆ.

ಶಿರವಾಳ ಶಾಸನದ ಹನ್ನೊಂದನೆಯ ಸಾಲಿನಲ್ಲಿ ''ಶ್ರೀಮತು ಭಿಲ್ಲಮದೇವರ ಮಹಾಪಸಾಯಿತಂ''[೧೭] ಎಂಬ ಉಲ್ಲೇಖ ಶಾಸನದಲ್ಲಿರುವುದರಿಂದ ಐದನೇ ಬಿಲ್ಲಮನ ಆಳ್ವಿಕೆಯ ಕಾಲದ್ದೆನ್ನಬಹುದು. ಈತ ೧೧೮೭ರಲ್ಲಿ ಸ್ವತಂತ್ರನಾಗಿರಬಹುದೆಂದು ಅನೇಕ ಇತಿಹಾಸಕಾರರು ಅಭಿಪ್ರಾಯ ಪಟ್ಟಿದ್ದಾರೆ. ಈ ಶಾಸನದಲ್ಲಿ ಭಿಲ್ಲಮನ ಯಾವುದೇ ಬಿರುದುಗಳ ಉಲ್ಲೇಖ ಕಂಡುಬರುವುದಿಲ್ಲ. ಹಾಗಾಗಿ ಈ ಭಾಗದ ಚಕ್ರವರ್ತಿ ಈತನೇ ಎನ್ನುವುದಕ್ಕೆ ಶಾಸನಗಳ ಆಧಾರದ ಕೊರತೆ ಉಂಟಾಗಿದೆ. ''ಈ ಶಾಸನದಲ್ಲಿರುವ ಮಹಾಮಂಡಳೇಶ್ವರ ಸಿಂಗಿದೇವರಸನು ಕಳಚೂರ್ಯ ರಾಯಮುರಾರಿ ಸೋವಿದೇವ ಹಾಗೂ ಕಲ್ಯಾಣ ಚಾಲುಕ್ಯ ನಾಲ್ಕನೇಯ ಸೋಮೇಶ್ವರನ ಮಹಾಮಂಡಳೇಶ್ವರನೆಂದು ಇತರ ಶಾಸನಗಳಿಂದ ತಿಳಿದುಬರುತ್ತದೆ''[೧೮] ಹೀಗಾಗಿ ಶಿರವಾಳ ಶಾಸನದಲ್ಲಿ ಸಿಂಗಿದೇವರಸ

ಹಾಗೂ ನಾಲ್ಕನೇ ಸೋಮೇಶ್ವರನ ಮಹಾಮಂಡಳೇಶ್ವರನಾಗಿದ್ದನೆಂಬುದು ತಿಳಿದು ಬರುತ್ತದೆ. ಈ ವೇಳೆಗೆ ೧೧೮೭ರವರೆಗೆ ಭಿಲ್ಲಮ ಈ ಭಾಗ ಬಹುಶಃ ಗೆದ್ದುಕೊಳ್ಳಲಿಲ್ಲ ಎಂಬುದಕ್ಕೆ ಇನ್ನಷ್ಟು ಇಂಬು ಕೊಡುತ್ತದೆ. ಭೀಲ್ಲಮನ ನಂತರ ಆತನ ಮಗ ಜೈತುಗಿದೇವ ಅಧಿಕಾರ ವಹಿಸಿಕೊಂಡನು. ಈತನ ಶಾಸನಗಳು ಈ ನಾಡಿನಲ್ಲಿ ಹೆಚ್ಚು ದೊರೆತಿಲ್ಲ. ಈತನ ನಂತರ ಈತನ ಮಗ ಇಮ್ಮಡಿ ಸಿಂಘಣ ಅಧಿಕಾರ ವಹಿಸಿಕೊಂಡನು. ಕಲ್ಯಾಣ ಚಾಲುಕ್ಯರ ಬಿರುದು, ಬಾವಲಿಗಳನ್ನು ತನ್ನದಾಗಿ ಮಾಡಿಕೊಂಡನು. ಈತ ದೇವಗಿರಿಯ ನೆಲೆವೀಡಿನಿಂದ ಆಳ್ವಿಕೆ ಮಾಡುತ್ತಿದ್ದನು. ಈತನ ಪ್ರಶಸ್ತಿಗಳು ಶಾಸನದಲ್ಲಿ ಈ ರೀತಿ ಕಂಡುಬರುತ್ತದೆ.

"ಸ್ವಸ್ತಿ ಶ್ರೀಮತು ಯಾದವ ನಾರಾಯಣ ಗುಣ ಪ್ರತಾಪ
ಚಕ್ರವರ್ತಿರಾಯ ಕೋಳಾಹಳವರಿರಾಯ ದಿಶಾಪಟ ಸಮಾಳವ
ನಿರ್ಮ್ಮೂಳನ ಪುನಪ್ರತಿಷ್ಟಕಂ ಚೋಳ ಕುಳಾಂತಕಂ
ನಾಮಾದಿ ಪ್ರಸಸ್ತಿ ಸಹಿತಂ ||"[೧೯]

ಗುರುಸುಣಗಿ, ಸಗರ, ಮುದನೂರು, ಹಗರಟಗಿ ಹಾಗೂ ತಡಬಿಡಿ ಶಾಸನಗಳಲ್ಲಿ ಈತನ ಬಿರುದುಗಳ ಉಲ್ಲೇಖ ಕಂಡುಬರುತ್ತದೆ. ಸಿಂಘಣನ ಆಳ್ವಿಕೆಯಲ್ಲಿ ಸೇವುಣ ರಾಜ್ಯದ ಪ್ರತಿಷ್ಠೆ ಹೆಚ್ಚಿತು. ಕಲ್ಯಾಣ ಚಾಲುಕ್ಯರು ಯಾವ ರೀತಿ ಸುದೀರ್ಘ ಆಡಳಿತ ಮಾಡಿದರೋ, ಅದೇ ರೀತಿ ಸಿಂಘಣನು ಸುಮಾರು ಐವತ್ತು ವರ್ಷಗಳ ಸುಧೀರ್ಘ ಆಳ್ವಿಕೆ ಮಾಡಿದನು. ಸಿಂಘಣನ ನಂತರ ಈತನ ಎರಡನೇ ಮಗ ಜೈತುಗಿ ಮೊದಲೇ ಮರಣವನ್ನಪ್ಪಿದರಿಂದ ಜೈತುಗಿಯ ಮಗ ಕನ್ನರ ಸಿಂಘಣ ಉತ್ತರಾಧಿಕಾರಿಯಾದನು. ಕನ್ನರನ ನಂತರ ಆತನ ತಮ್ಮ ಮಹಾದೇವರಾಯ ದೇವಗಿರಿಯ ನೆಲೆವೀಡಿನಿಂದ ರಾಜ್ಯವಾಳುತ್ತಿರುವ ವಿಷಯ ಕುಳಗೇರಿ ಶಾಸನ ಉಲ್ಲೇಖಿಸಿದೆ.

"ಶ್ರೀಮತು ದ್ವಾರಾವತೀಪುರವರಾಧೀಸ್ವರಂ
ವಿಷ್ಣುವಂಸೋದ್ಭವಂ ಯಾದವಕುಳಕಮಳ
ಕವಿತಾಭಾಸ್ಕರಂ ಯರಿರಾಯ ಜಗರ್ಜ್ಜಂಪ
ಲಾಳಮಾಳವರಾಯ ಮದನತ್ರಿನೇತ್ರ ಗುಜ್ಜರಿರಾಯ
ಭಯಂಕರಂ ತೆಲುಂಗರಾಯ ಸ್ಥಾಪನಾಚಾರ್ಯ್ಯ
ಯಿತ್ಯಾದಿ ನಾಮಾದಿ ಪ್ರಸಸ್ತಿ ಸಹಿತಂ ಶ್ರೀಮತು

ಯಾದವನಾರಾಯಣ ಭುಜಬಳ ಪ್ರವುಡ ಪ್ರತಾಪ

ಚಕ್ರವರ್ತ್ತಿ ಶ್ರೀಮಹದೇವರಾಯ ರಾಜ್ಯೋದ(ಯ)

ದಲು ದೇವಗಿರಿಯ ನೆಲೆವೀಡಿನೊಳು ಸುಖಸಂಕಥಾ

ವಿನೋದದಿಂ ರಾಜ್ಯಂಗೆಇತಂ ಮಿರೆ ॥

ಎಂಬ ವಿಷಯ ಕ್ರಿ. ಶ.೧೨೬೫ರ ಯಾಳಗಿ ಶಾಸನದಿಂದ ತಿಳಿದುಬರುತ್ತದೆ. ಇಮ್ಮಡಿ ಸಿಂಘಣ ಕಲ್ಯಾಣ ಚಾಲುಕ್ಯ ಚಕ್ರವರ್ತಿಗಳ ಬಿರುದು ಬಾವಲಿಗಳನ್ನು ತನ್ನದಾಗಿಸಿಕೊಂಡರೆ, ಮಹಾದೇವರಾಯ ಅದಕ್ಕೂ ಮುಂದೆ ಹೋಗಿ ಲಾಳ, ಮಾಳವ, ಗೂರ್ಜರ, ತೆಲುಗ, ಈ ಎಲ್ಲ ಅರಸರನ್ನು ಸೋಲಿಸಿದನೆಂದು ತಾನೇ ಹೇಳಿಕೊಳ್ಳುತ್ತಾನೆ. ಕಾರಣ ಈ ವೇಳೆಗೆ ಸೆವುಣರು ಸಮರ್ಥರು, ಪರಾಕ್ರಮಿಗಳು ಚಕ್ರವರ್ತಿಗಳಾಗಿ ಮೆರೆದರೆಂದು ಸ್ಪಷ್ಟವಾಗುತ್ತದೆ. ಈತನ ನಂತರ ರಾಮಚಂದ್ರದೇವ ಅಧಿಕಾರ ವಹಿಸಿಕೊಂಡನು.

“ಸ್ವಸ್ತಿ ಶ್ರೀಮತು ಯಾದವನಾರಾಯಣ

ಭುಜಬಳ ಸೆವುಣ ಪ್ರತಾಪ ಚಕ್ರವರ್ತಿ

ಶ್ರೀರಾಮಚಂದ್ರದೇವ ॥”

ಎಂಬ ಉಲ್ಲೇಖ ಕ್ರಿ.ಶ.೧೨೭೪ರ ಆಂದೋಲ ಶಾಸನದಿಂದ ತಿಳಿದುಬರುತ್ತದೆ.

“ಸ್ವಸ್ತಿ ಶ್ರೀ ಜಯಾಭ್ಯುದಯಶ್ಚ ಶ್ರೀಮತು

ಯಾದವ ನಾರಾಯಣ ಸೆವುಣ ಚಕ್ರವರ್ತ್ತಿ

ಜಯತುಗಿದೇವ ॥”

ಎಂಬ ಉಲ್ಲೇಖ ೧೩ನೇ ಶತಮಾನದ ಕುಳಗೇರಿ ಶಾಸನದಿಂದ ತಿಳಿದುಬರುತ್ತದೆ. ಈತ ಸಗರ ಐದನೂರರ ಬಳಿಯಿಂದ ಅಳ್ವಿಕೆ ಮಾಡುತ್ತಿದ್ದನು. ನಂತರ ಜಯತುಗಿದೇವನ ಕಾಲದ ಒಂದು ಶಾಸನ ಕುಳಗೇರಿಯಲ್ಲಿ ಉಲ್ಲೇಖಗೊಂಡಿದೆ. ಹೀಗೆ ಸೇವುಣರು ಅನುಕ್ರಮವಾಗಿ ಆಳ್ವಿಕೆ ಮಾಡಿದ್ದು ಈ ನಾಡಿನ ಶಾಸನಗಳ ಅಧ್ಯಯನದಿಂದ ತಿಳಿದುಬರುತ್ತದೆ. ದೇವಗಿರಿಯ ಯಾದವ ಅಥವಾ ಸೇವುಣರ ಸಾಮ್ರಾಜ್ಯವು ನಂತರ ಮುಸ್ಲಿಂ ದಾಳಿಗೆ ನಲುಗಿತು. ನಂತರ ಕರ್ನಾಟಕವು ರಾಜಕೀಯವಾಗಿ ಹರಿದು ಹಂಚಿಹೊಯಿತು.

## ಶಿಲಾಹಾರರು :

ಕರ್ನಾಟಕವನ್ನಾಳಿದ ಅತೀ ಪ್ರಾಚೀನ ರಾಜ ಮನೆತನಗಳಲ್ಲಿ ಶಿಲಾಹಾರರು ಒಬ್ಬರಾಗಿದ್ದಾರೆ. ಫ್ಲೀಟ್ ಹಾಗೂ ಅಲ್ಟೇಕರ ಅವರು ಶಿಲಾಹಾರರ ಮೂರು ಶಾಖೆಗಳಿದ್ದವೆಂದು ಗುರುತಿಸಿದ್ದಾರೆ. ಒಂದು ದಕ್ಷಿಣ ಕೊಂಕಣ, ಇನ್ನೊಂದು ಉತ್ತರ ಕೊಂಕಣ ಹಾಗೂ ಮತ್ತೊಂದು ಕರ್ಹಾಡ ಆಗಿದೆ. ಜೀಮೂತವಾಹನ ಎಂಬುವವನು ಈ ವಂಶದ ಪ್ರಥಮ ಅರಸನಾಗಿದ್ದಾನೆ. ಸುವರ್ಣ ಗರುಡಧ್ವಜ ಇವರ ಲಾಂಛನವಾಗಿತ್ತು. ಶಿಲಾಹಾರರು ಕೊಪಣಪುರವರಾಧೀಶ್ವರ, ಕಾತ್ಯಾಯನೀದೇವಿ ಲಬ್ಧವರಪ್ರಸಾದರೆಂದೂ ಇವರನ್ನು ಕರೆಯಲಾಗುತ್ತಿತ್ತು. ಎಂ.ವಿ.ಸೀತಾರಾಮಯ್ಯ ಅವರ ಅಭಿಪ್ರಾಯದಂತೆ, ಶಿಲಾಹಾರ ಶಬ್ದವು "ಸೆಲಾರ ಎಂಬ ಕನ್ನಡ ಶಬ್ದದ ಸಂಸ್ಕೃತ ರೂಪವಾಗಿದೆ. ಶಾಸನಗಳಲ್ಲಿ ಇವರನ್ನು ಸೆಲಾರ, ಸಿಲಾರ, ಶಿಲಾರ, ಶಿಲಾಹಾರ ಎಂದು ಕರೆಯಲಾಗಿದೆ. ಸೆಲಾರ, ಅರ್ಥ ನೆಯ್ಗೆ ವೃತ್ತಿಯವರು"[೨೦] ಎಂದು ಸೂಚಿಸುತ್ತದೆ. ಬಹುಶಃ ಶಿಲಾಹಾರರು ನೇಕಾರ ವೃತ್ತಿಯವರು ಆಗಿರಬಹುದೆಂದು ಊಹಿಸಬಹುದಾಗಿದೆ. ಈ ವಂಶದ ಪಿಟ್ಟಮನಿಂದ ಕಲ್ಯಾಣ ಚಾಲುಕ್ಯ ಆರನೇ ವಿಕ್ರಮಾದಿತ್ಯ ಮಾಂಡಲಿಕ ನಾಲ್ಕನೆಯ ಗೊವಣರಸನವರೆಗಿನ ಇಪ್ಪತ್ತೊಂದು ಜನರ ವಂಶಾವಳಿಯು ಶಾಸನವೊಂದರಲ್ಲಿ ದೊರೆತಿದೆ. ಮುಂದಿನವರ ಬಗೆಗೆ ಅಲ್ಲಲ್ಲಿ ಕೆಲ ಅಂಶಗಳು ತಿಳಿದುಬಂದಿವೆ. ಇನ್ನು ಮುಂದುವರೆದು ಪಿ.ಬಿ.ದೇಸಾಯಿ ಅವರು ಶಿಲಾಹಾರರ ಏಳು ಶಾಖೆಗಳನ್ನು ಗುರುತಿಸಿದ್ದಾರೆ. ಅದರಲ್ಲಿ ಶಿರಿವಾಳದ ಶಾಸನದಲ್ಲಿ ಉಲ್ಲೇಖಗೊಂಡ ಸಿಂಗಿದೇವರಸ ಇದೇ ತರ್ದವಾಡಿ ಶಿಲಾಹರರ ವಂಶಕ್ಕೆ ಸಂಬಂಧಿಸಿದವನಾಗಿದ್ದಾನೆ. ಶಾಸನದಲ್ಲಿ ಈತನ ಬಿರುದುಗಳು ಈ ರೀತಿಯಾಗಿ ಇದೆ.

> "ಶ್ರೀ ಶಿಳಾರ ವಂಶೋದ್ಭವ ನರೇಂದ್ರ ವಿಭವಾಮರೇಂದ್ರ
> ಭೇರಿನಿರ್ಘೋಷಣಂ ಸಮರವಿಭೀಷಣಂ ವಿದಗ್ಧ
> ಮುಗ್ಧಾಂಗ ನಾಹ್ರಿದಯ ಕುಸುಮ ಕೋದಂಡ
> ಕದನ ಪ್ರಚಂಡ ಚೆಂನಮನ್ನೆಯ ಪನ್ನಗ
> ವೈನತೇಯ ವೀರೋಧಿಮಂನ್ನೆಯ ತಾರಕಾಸುರ
> ಕಾರ್ತಿಕೇಯ ನತಿ ವಿಷಮಹಯಾರೂಢ ಪ್ರೌಢ
> ರೇಖಾರೇವಂತ ವಿಜೇಯಲಕ್ಷ್ಮೀಕಾಂತ ಸುವರ್ಣ ಗರುಡಧ್ವಜ
> ವಿಮಳ ಕೀರ್ತಿಧ್ವಜ ಕಾರ್ತ್ಯೆಯನೀದೇವೀಲಬ್ಧವರ ಪ್ರಸಾದ ॥"[೨೦]

ಎಂಬ ಬಿರುದು ಸಿಂಗಿದೇವರಸನದಾಗಿದೆ. ಶಿಲಾಹಾರ ವಂಶದ ಅರಸನಾದ ಸಿಂಗಿದೇವರಸನ ಒಂದು ಶಾಸನ ಬಿಟ್ಟರೆ, ಇನ್ನಿತರ ಯಾವುದೇ ಶಾಸನಗಳು ಶಿಲಾಹಾರರ ಬಗ್ಗೆ ಉಲ್ಲೇಖ ಕಂಡುಬರುವುದಿಲ್ಲ. ಮುಂದೆ ಶಿಲಾಹಾರರ ಮೇಲೆ ಮುಸ್ಲಿಂರ ದಾಳಿಯಿಂದ ಈ ಮನತೆನಕ್ಕೆ ಬಲವಾದ ಪೆಟ್ಟು ಬಿದ್ದಿದರಿಂದ ಈ ಮನೆತನ ಅಂತ್ಯ ಕಂಡಿತು. ನಂತರ ವಿಜಯ ನಗರದ ಅರಸರು ಅಧಿಕಾರಕ್ಕೆ ಬಂದರೂ, ಸಗರ ನಾಡಿನ ಶಾಸನಗಳಲ್ಲಿ ಇವರ ಉಲ್ಲೇಖ ಕಂಡುಬರುವುದಿಲ್ಲ. ಶಹಾಪುರದ ವಿಶ್ವಕರ್ಮರ ಏಕದಂಡಿ ಮಠದಲ್ಲಿ ಇವರ ಕಾಲದ ತಾಮ್ರ ಶಾಸನವೊಂದನ್ನು ಹೊರತು ಪಡಿಸಿದರೆ, ಯಾವುದೇ ಶಾಸನಗಳು ಲಭ್ಯವಾಗಿಲ್ಲ. ಇವರ ನಂತರ ಬಹುಮನಿ ಸುಲ್ತಾನರು ಅಧಿಕಾರಕ್ಕೆ ಬಂದರೂ, ಇವರ ಕಾಲದ ಯಾವುದೇ ಶಾಸನಗಳು ಲಭ್ಯವಾಗಿಲ್ಲ. ಮುಂದೆ ಬಹುಮನಿ ಸಾಮ್ರಾಜ್ಯ ಐದು ಶಾಹಿ ರಾಜ್ಯಗಳಾಗಿ ಛಿದ್ರಗೊಂಡಿತು. ನಂತರ ಮಹ್ಮದೀಯರ ಪ್ರಭಾವ ಈ ನಾಡಿನಲ್ಲಿ ಸ್ವಲ್ಪ ಮಟ್ಟಿಗೆ ಬೀರಿದೆ. ಶಹಾಪುರ, ಗೋಗಿ, ದೋರನಹಳ್ಳಿ, ಸಗರಗಳಲ್ಲಿ ಪರ್ಶಿಯನ್, ಉರ್ದು ಮತ್ತು ಅರೇಬಿಕ್ ಶಾಸನಗಳು ಈ ಭಾಗದಲ್ಲಿ ಲಭ್ಯವಾಗಿವೆ. ಆದರೆ ಈ ಶಾಸನಗಳು ಕನ್ನಡ ಶಾಸನದಷ್ಟು ಹೆಚ್ಚು ಮಹತ್ವದ ವಿಷಯ ತಿಳಿಸಿಲ್ಲ. ಬಹುತೇಕ ಶಾಸನಗಳು ಬಾವಿ, ಕೋಟೆ ಮಸೀದಿಗಳ ನಿರ್ಮಾಣಕ್ಕೆ ಸಂಬಂಧಿಸಿದ್ದಾಗಿವೆ. ಮುಂದೆ ಈ ನಾಡು ವಿಜಾಪುರದ ಅದಿಲ್ ಶಾಹ ಹಾಗೂ ಔರಂಗಜೇಬನ ಆಳ್ವಿಕೆಗೆ ಒಳಪಟ್ಟತು. ಆದರೆ ಇವರು ಬಹು ಕಾಲ ಆಳ್ವಿಕೆ ಮಾಡಲಿಲ್ಲ, ನಂತರದಲ್ಲಿ ಈ ನಾಡು ಸುರುಪುರದ ನಾಯಕರ ಆಡಳಿತಕ್ಕೆ ಒಳಪಟ್ಟಿತು.

## ಸಗರನಾಡಿನ ಆಡಳಿತ ವ್ಯವಸ್ಥೆ :

ಪ್ರಾಚೀನ ಕಾಲದ ಆಡಳಿತ ವ್ಯವಸ್ಥೆಯಲ್ಲಿ ಸಾಮ್ರಾಜ್ಯದ ಜನತೆ ತೃಪ್ತಿಕರವಾಗಿದ್ದಾರೆ ಎಚಿದರೆ ಅದಕ್ಕೆಲ್ಲ ಅಲ್ಲಿನ ಸಮರ್ಥ ರಾಜನೇ ಕಾರಣ. ರಾಜಪ್ರಭುತ್ವ ಆಡಳಿತ ಪದ್ಧತಿ ಪ್ರಾಚೀನ ಕಾಲದಿಂದಲೂ ಬೆಳೆದುಬಂದದ್ದಾಗಿದೆ. ರಾಜ ತನ್ನ ಸಾಮರ್ಥ್ಯದಿಂದ ಆಡಳಿತ ಮಾಡುತ್ತಿದ್ದನು. ಒಂದು ರಾಜ್ಯ ಸುಗಮವಾಗಿ ಸಾಗಬೇಕಾದರೆ, ಒಂದು ರಥಕ್ಕೆ ಎರಡು ಚಕ್ರಗಳು ಎಷ್ಟು ಅವಶ್ಯವೋ ಹಾಗೆ ರಾಜನಿಗೆ ಮಂತ್ರಿಗಳು ಹಾಗೂ ಇತರ ಅಧಿಕಾರಿಗಳು ಅಷ್ಟೇ ಪ್ರಮುಖರಾಗಿದ್ದರು. ಅಂತೆಯೇ ಈ ನಾಡಿನ ಶಾಸನಗಳಲ್ಲಿ ರಾಜರು, ರಾಣಿಯರು, ಮಹಾಮಂಡಳೇಶ್ವರರು, ದಂಡನಾಯಕರು, ಸಾಮಂತರು, ಇತರ ಅಧಿಕಾರಿಗಳು ಆಡಳಿತ ಮಾಡಿರುವುದು ತಿಳಿದುಬರುತ್ತದೆ.

**ರಾಜ :**

ಕೇಂದ್ರಾಡಳಿತದಲ್ಲಿ ರಾಜನೇ ರಾಜ್ಯದ ಸರ್ವೋಚ್ಛ ನ್ಯಾಯಾಧೀಶನಾಗಿದ್ದನು. ಇಡೀ ರಾಜ್ಯ ಈತನ ಆಡಳಿತದಲ್ಲಿ ಕೇಂದ್ರಿಕೃತಗೊಂಡಿತು. "ರಾಜಾ ಕಾಲಸ್ಯ ಕಾರಣಂ", "ದೊರೆಯಂತೆ ಧರೆ". "ಯಥಾ ರಾಜಾ, ತಥಾ ಪ್ರಜಾ" ಎಂಬ ಮಾತುಗಳನ್ನು ಗಮನಿಸಿದರೆ, ರಾಜನಿಗೆ ಇರುವ ಮಹತ್ವ ಎತ್ತಿತೋರುತ್ತದೆ. ಪ್ರಜೆಗಳು ರಾಜನನ್ನು "ಪ್ರತ್ಯಕ್ಷ ದೇವರೆಂದು" ಕರೆದಿದ್ದಾರೆ. ಪ್ರಜೆಗಳ ಪ್ರತಿ ಕಷ್ಟ ಸುಃಖದಲ್ಲಿ ರಾಜ ಭಾಗಿಯಾಗುದತ್ತಿದ್ದನು. ರಾಜ್ಯದಲ್ಲಿ ಸ್ವತಃ ವೀಕ್ಷಣೆ ಮಾಡಿ ಪ್ರಜೆಗಳ ಕುಂದುಕೊರತೆಗಳ ನಿವಾರಣೆ ಮಾಡುತ್ತಿದ್ದನು. ಹಾಗಾಗಿ ಪ್ರಜೆಗಳ ಪಾಲಿಗೆ ರಾಜನೇ ದೇವರಾಗಿದ್ದ. ರಾಜನ ಘನತೆ ಗೌರವಗಳನ್ನು ಗುರುತಿಸಲು ಆತ ಪಡೆದುಕೊಂಡ ಬಿರುದುಗಳೇ ಕಾರಣ ಎನ್ನಬಹುದು. ಸಗರನಾಡಿನ ರಾಜರು ಪಡೆದುಕೊಂಡ ಬಿರುದುಗಳು ಶಾಸನಗಳಲ್ಲಿ ಈ ರೀತಿಯಲ್ಲಿ ಉಕ್ತಿಗೊಂಡಿವೆ. 'ಅಕಾಲವರಿಷದೇವ', 'ಮದಗಜಮಲ್ಲ' ಎಂಬ ಬಿರುದು ರಾಷ್ಟ್ರಕೂಟ ಮೂರನೇ ಕೃಷ್ಣನ ಬಿರುದುಗಳು. ಆರನೇ ವಿಕ್ರಮಾದಿತ್ಯ, ಪಡೆದುಕೊಂಡ ಬಿರುದು 'ಮಹಾರಾಜಾಧಿರಾಜ ತ್ರಿಭುವನಮಲ್ಲ,' ಮೂರನೇ ಸೋಮೇಶ್ವರನು 'ಸರ್ವಜ್ಞ ಚಕ್ರವರ್ತಿ', ಯಾದವರ ಬಿಲ್ಲಮನು 'ವೀರ ನಾರಾಯಣ', ಮಹಾದೇವರಾಯನ 'ಭುಜಬಳ ಪ್ರೌಡ ಪ್ರತಾಪ ಚಕ್ರವರ್ತಿ' ಹೀಗೆ ಅನೇಕ ಬಿರುದುಗಳಿಂದ ಉಲ್ಲೇಖಿತಗೊಂಡ ರಾಜರು ಈ ನಾಡಿನ ಶಾಸನಗಳಿಂದ ತಿಳಿದುಬರುತ್ತದೆ.

## ರಾಜಧಾನಿ ಮತ್ತು ನೆಲೆವಿಡುಗಳು :

ಶಾಸನಗಳು ರಾಜರನ್ನು ಕುರಿತು ಹೇಳುವಾಗ ಅವರ ಬೇರೆ ಬೇರೆ ರಾಜಧಾನಿಗಳ ಮೇಲೂ ಬೆಳಕು ಚೆಲ್ಲುತ್ತವೆ. ರಾಜ ಯಾವ ಊರಿನಲ್ಲಿ ಇದ್ದುಕೊಂಡು ಆಜ್ಞೆಗಳನ್ನು ಹೊರಡಿಸುತ್ತಿದ್ದನೋ, ಆ ಊರುಗಳೇ ನೆಲೆವಿಡುಗಳಾಗಿದ್ದವು. ರಾಜ "ಕಲ್ಯಾಣದಿಂದ ಸುಖ ಸಂಕತಾ ವಿನೋದದಿಂ ರಾಜ್ಯಂಗೈಯ್ಯುತ್ತಮಿರೆ" ಎಂಬ ಉಲ್ಲೇಖ ಶಾಸನಗಳಲ್ಲಿ ಹೆಚ್ಚಾಗಿ ಕಂಡು ಬರುತ್ತವೆ. ಅದರೆ ರಾಜನಿಗೆ ಇದ್ದದು ಒಂದೇ ರಾಜಧಾನಿ. ಪ್ರವಾಸ ಕೈಗೊಂಡಾಗ, ವಸತಿ ಮಾಡಿದ ಗ್ರಾಮದಿಂದ, ದಾನ ಮಾಡಿದಾಗ ಆ ಗ್ರಾಮದಿಂದ ಆಳುತ್ತಿರಲಾಗಿ ಎಂದು ಬರೆಯುವುದು ರೂಢಿಯಾಗಿದೆ. ಹೀಗೆಂದ ಮಾತ್ರಕ್ಕೆ ಇವೆಲ್ಲ ರಾಜಧಾನಿಗಳೆಂದು ಭಾವಿಸಬಾರದು. ಇದೇ ರೀತಿ ಅಧಿಕಾರಿಗಳನ್ನು ಉಲ್ಲೇಖಿಸುತ್ತ 'ಆಳುತ್ತಮಿರೆ' ಎಂಬ

ಪದವನ್ನು ಶಾಸನಗಳು ಬಳಸಿವೆ. ಅಲ್ಲಿ ಈ ಪದ "Ruling and Administration"[22] ಎಂಬ ಎರಡು ಅರ್ಥದಲ್ಲಿ ಬಳಕೆಯಾಗಿದೆ. ನಗರನಾಡಿನಲ್ಲಿ ಶಾಸನೋಕ್ತ ರಾಜಧಾನಿಗಳು ಮತ್ತು ನೆಲೆವಿಡುಗಳು ಈ ರೀತಿಯಾಗಿ ಕಂಡುಬರುತ್ತವೆ. 'ಪೊಟ್ಟಳಕೆರೆ',[೨೩] 'ಏತಗಿರಿ',[೨೪] 'ಕಂಪಿಲ'[೨೫] 'ಜಯನ್ತಿಪುರ',[೨೬] 'ಬಂಕಾಪುರ',[೨೭] 'ಅಡವಿಯುಪ್ಪಯಣವೀಡು',[೨೮] ರಾಜರು ಆಯಾ ನೆಲೆವೀಡುಗಳಿಂದಲೂ ಆಡಳಿತ ನಿರ್ವಹಣೆ ಮಾಡುತ್ತಿದ್ದರು. ಈ ನೆಲೆವೀಡುಗಳು ಉಪರಾಜಧಾನಿಗಳಾಗಿದ್ದವು.

## ೩.೨ ರಾಣಿಯರ ಆಡಳಿತ :

"ರಾಜಾನೋ ಬಹುವಲ್ಲಭಾ" ಎಂಬ ಮಾತು ನಮ್ಮ ನಾಡು, ನಮ್ಮ ಸಮಾಜ, ಸಂಸ್ಕೃತಿಗಳು ಒಪ್ಪಿಕೊಂಡಿವೆ ರಾಜರು ತಮ್ಮ ಪ್ರತಿಷ್ಠೆಗಾಗಿ ವಿವಾಹವಾಗುತ್ತಿದ್ದರು. ವೈರಿಗಳನ್ನು ಸದೆಬಡಿಯದೆ. ಅವರೊಂದಿಗೆ ವೈವಾಹಿಕ ಸಂಬಂಧ ಬೆಳೆಸುವುದು, ಕೆಲ ವೇಳೆ ಯುದ್ದ ಸಮಯದಲ್ಲಿ ತಾವು ಇನ್ನೇನು ಸೋತು ಹೋಗುತ್ತೇವೆ ಎಂಬ ಅನುಮಾನ ಬಂದಾಗ ವೈವಾಹಿಕ ಸಂಬಂಧ ಬೆಳೆಸುವುದು, ಸಾಮ್ರಾಜ್ಯ ವಿಸ್ತಾರಣಾ ವೇಳೆಯಲ್ಲಿ ಹೀಗೆ ನಾನಾ ಕಾರಣಗಳಿಂದ ತಮ್ಮ ಹೆಣ್ಣು ಮಕ್ಕಳನ್ನು ಹಾಗೂ ಸಹೋದರಿಯರನ್ನು ವಿವಾಹ ಮಾಡಿಕೊಡುತ್ತಿದ್ದರು. ಇದು ರಾಜ್ಯದ ಭದ್ರತೆಯ ಜೊತೆಗೆ ರಾಜಕೀಯ ಪ್ರತಿಷ್ಠೆಯೂ ಅಗಿತ್ತು. ಈ ರೀತಿ ರಾಜರೊಂದಿಗೆ ರಾಣಿಯರು ವಿವಾಹವಾಗಿದ್ದು ಶಾಸನಗಳಿಂದ ತಿಳಿದು ಬರುತ್ತದೆ. ರಾಜನ ಜೊತೆಗೆ ರಾಣಿಗೂ ಗೌರವ ಪ್ರತಿಷ್ಠೆ ಇತ್ತು. ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳಲ್ಲಿ ಅವಳು ಸಹಭಾಗಿಯಾಗಿದ್ದಳು. ಪ್ರಜೆಗಳ ದೃಷ್ಟಿಯಲ್ಲಿ ಮಾತಾ ಸ್ವರೂಪಿಣಿಯಾಗಿದ್ದಳು.

ರಾಜಕೀಯಲ್ಲಿ ರಾಜನೊಂದಿಗೆ ಆಡಳಿತ ಮಾಡಿದ ರಾಣಿಯರ ಉಲ್ಲೇಖವು ಈ ನಾಡಿನ ಶಾಸನದಲ್ಲಿ ಕಂಡುಬರುತ್ತವೆ. ಇವರು ಕೇವಲ ಶಯನೇಷು ರಂಭಾ ಆಗಿರದೆ, ಕಾರ್ಯೇಷು ಮಂತ್ರಿ" ಯೂ ಆಗಿದ್ದರು. ರಾಣಿಯರಿಗೂ ತರಬೇತಿ ನೀಡಲಾಗುತ್ತಿತ್ತು. ಕಲ್ಯಾಣ ಚಾಲುಕ್ಯ ಆರನೇ ವಿಕ್ರಮಾದಿತ್ಯ ಬಹುಪತ್ನಿ ವಲ್ಲಭನಾಗಿರುವುದರಿಂದ, ಇವರ ಉಲ್ಲೇಖ ಈ ರೀತಿಯಾಗಿ ಕಂಡುಬರುತ್ತದೆ. "ಪಿರಿಯರಸಿ' ಎಂದರೆ ಹಿರಿಯರಾಣಿ ಎಂದರ್ಥ. ಪಟ್ಟದ ಮಹಾದೇವಿ ಚಕ್ರವರ್ತಿಗಾಗಲಿ ಅಥವಾ ಆತನ ಕೆಳಗಿನ ಮಹಾಮಂಡಲೇಶ್ವರರಿಗಾಗಲಿ ಒಬ್ಬ ಪಟ್ಟದರಾಣಿ ಇರುತ್ತಿದ್ದಳು. 'ರಾಣಿಯರು' ಇವರು ಸಾಮಾನ್ಯ ರಾಣಿಯರಾಗಿದ್ದರು"[೨೯] ಆರನೇ ವಿಕ್ರಮಾದಿತ್ಯನ ರಾಣಿಯರಲ್ಲಿ ಮೈಳಲದೇವಿ ಮೊದಲನೆ ಪಟ್ಟ ಮಹಾದೇವಿ

ಆಗಿದ್ದಳು. ಮಲಯಮತಿದೇವಿ ಎರಡನೇ ಪಟ್ಟದ ರಾಣಿಯಾಗಿದ್ದಳು. ಇನ್ನುಳಿದವರು ಸಾಮಾನ್ಯ ರಾಣಿಯರಾಗಿ ಆಳ್ವಿಕೆ ಮಾಡುತ್ತಿದ್ದರು. ಮೈಳಲದೇವಿಯು ಬಿರುದುಗಳನ್ನು ಹೊಂದಿದ್ದು ಶಾಸನಗಳಿಂದ ತಿಳಿದು ಬರುತ್ತದೆ. ತ್ರಿಭುವನಮಲ್ಲ ಆರನೇ ವಿಕ್ರಮಾದಿತ್ಯನ ಇನ್ನೊಬ್ಬ ರಾಣಿಯ ಉಲ್ಲೇಖ ಬೊಮ್ಮನಹಳ್ಳಿ ಶಾಸನದಲ್ಲಿ ಇದೆ. ಈ ಶಾಸನದಲ್ಲಿ ಈಕೆಯ ವರ್ಣನೆ ಇದೆ. ಹಾಗೂ ಈಕೆ ಜೈನ ಧರ್ಮಾವಲ್ಲಂಬಿಯಾಗಿದ್ದಳು. ಹಾಗಾಗಿ ವಿಕ್ರಮಾದಿತ್ಯ ಅವಳ ಧರ್ಮಕ್ಕೆ ಅಡ್ಡಿ ಪಡಿಸದೆ ಸ್ವಾತಂತ್ರ್ಯ ನೀಡಿದ. ಹೀಗಾಗಿ ಧಾರಲದೇವಿ ವ್ರತನೋಂಪಿ ನಿಮಿತ್ತವಾಗಿ' ೧೦೦೦ ಜೈನ ವಿಗ್ರಹಗಳನ್ನು ಪ್ರತಿಷ್ಠಾಪಿಸಿದ್ದು ಈ ಶಾಸನದಿಂದ ತಿಳಿದುಬರುತ್ತದೆ. ಈ ನಿಮಿತ್ತವಾಗಿ ಈಕೆಗೆ ದಾನಚಿಂತಾಮಣಿ ಅತ್ತಿಮಬ್ಬೆಗಿರುವ ಪ್ರಶಸ್ತಿಗಳಾದ ಗುಣದಂಕಕಾರ್ತಿ, ಮಹಾಸತಿ ತಿಳಿಕೆ, ಪ್ರಶಸ್ತಿಗಳು ಇವಳಿಗೂ ಇರುವುದು ತಿಳಿದು ಬರುತ್ತದೆ.

ವಿಕ್ರಮಾದಿತ್ಯನ ರಾಣಿಯರಲ್ಲಿ ಮೆಚ್ಚಿ ವಿವಾಹವಾದ ರಾಣಿ ಎಂದರೆ ಚಂದಲದೇವಿ. ಈಕೆ ಪ್ರೀತಿಯ ರಾಣಿಯಾಗಿದ್ದಳು. ಇವಳ ಬಗ್ಗೆ ಬಿಲ್ಹಣನ ವಿಕ್ರಮಾಂಕದೇವಚರಿತಂ ಎಂಬ ಕಾವ್ಯದಲ್ಲಿ ಉಲ್ಲೇಖವಿದೆ. ಇವಳ ವಿವಾಹ ಪ್ರಸಂಗದ ಬಗ್ಗೆ ಶಾಸನಗಳು ಮೌನ ತಾಳಿದರೂ ಕವಿ ಬಿಲ್ಹಣನು ಈ ರೀತಿ ವರ್ಣಿಸಿದ್ದಾನೆ.

"ಶ್ರೀ ಸ್ವಸ್ತ್ಯೆನವರತ ಪರಮಕಲ್ಯಾಣಾಭ್ಯುದಯ ಸಹಶ್ರಫಳಭೋಗ
ಭಾಗಿನಿಯಗಣ್ಯ ಪುಣ್ಯ ಲಾವಣ್ಯ ಭೋಗಿನಿ ಚಾಳುಕ್ಯ
ಚಕ್ರೇಶ್ವರ ಲೋಚನಚ ಕೋರಚಾರುಚಂದ್ರಿಕೆ ಕುಸುಮಕೋದಣ್ಡ
ಭಣ್ಡಾಕಾರಮುದ್ರಿಕೆ ರಾಯಮನ್ಮಥ ಮನೋಮಯೂರವಾಸಯಷ್ಟಿ
ಪರಿಜನಸುವರ್ಣ್ನವೃಷ್ಟಿ ಸ್ತ್ರೀರೂಪಧಾತ್ರಿಶೀಳಶೈಳಪುತ್ರಿ ಕಾಮರಾಮಾಕಾರೆ
ಪುತ್ಯಕ್ಷಪದ್ಮಾವತಾರೆ ಜೀಮೂತವಾಹನಾನ್ವಯ ಕ್ಷೀರೋದನ್ವದುದ್ಗತ ಕಲ್ಪಲತೆ
ಚಾಳುಕ್ಯಕಂಣ್ಠೀರವಕರ್ಣ್ನಾವತಂಶೆ ಮುಕ್ತಾಲತೆ ರೂಪಸರ್ವ್ವೋದಪಹಸಿತ
ತಿಳೋತ್ತಮೆ ದಾನಗುಣೋತ್ತಮೆ ರಾಯನಾರಾಯಣಹೃದಯಾಹ್ಲಾದಿನಿ
ಮೃಗಮದಾಮೋದಿನಿ ಸೌಭಾಗ್ಯ ಸಮುದ್ಭಾಸಿನಿ ಶ್ರೀಮತ್ತ್ರಿಭುವನಮಲ್ಲದೇವ
ವಿಷಾಳವಕ್ಷಸ್ಥಳ ನೀವಾಸಿನಿಯರಪ್ಪ ಶ್ರೀಮಚ್ಚಂದಲ ಮಹಾದೇವಿಯರ್ ॥"[೩೦]

ಎಂದಿದೆ. ಇನ್ನುಳಿದ ಶಾಸನಗಳಲ್ಲಿ ಪ್ರೀತಿಯ ರಾಣಿ ಎಂಬ ಉಲ್ಲೇಖ ಮಾತ್ರ ಕಂಡುಬರುತ್ತದೆ. ಇವಳು ಕರಹಾಡದ ಶೀಲಾಹಾರ ವಂಶದವಳಾಗಿದ್ದಳು. ಮಲಯಮತಿಗಿಂತ ಮುಂಚೆ ಇವಳು ಮರಣ ಹೊಂದಿದ್ದಳು. ಹಾಗಾಗಿ ಇವಳು ಪಟ್ಟಮಹಾದೇವಿ ಆಗಲಿಲ್ಲ. ನಂತರ ಈಕೆಯ ಮಗ ಮೂರನೇ ಸೋಮೇಶ್ವರ ಅಧಿಕಾರ ವಹಿಸಿಕೊಂಡನು. ವಿಕ್ರಮಾದಿತ್ಯನ ಇನ್ನೋರ್ವ ರಾಣಿ ಮೈಳಲದೇವಿ ಈಕೆ ''ಭತ್ತಗ್ರಾಮ ಕುಣಿಲಂಗೆರೆಯನ್ನು ತ್ರಿಭೋಗಾಭ್ಯಂತರ ಸಿದ್ಧಿಯಿಂದ ಆಳುತ್ತಿದ್ದಳು''[೩೧] ಎಂಬ ಅಂಶ ಶಾಸನದಲ್ಲಿ ಉಲ್ಲೇಖಗೊಂಡಿದೆ. ವಿಕ್ರಮಾದಿತ್ಯನ ಇನ್ನೊಬ್ಬ ರಾಣಿ ಬೋಂಥಾದೇವಿ. ಇವಳು ತೈಲಪನ ತಾಯಿಯು ಆಗಿದ್ದಳು. ''ಸಂಭಾವಿತೆ ವಿನೂತೆ ಬೋಂಥಾದೇವಿ'' ಎಂಬ ಉಲ್ಲೇಖ ಹೆಮ್ಮಡಗಿ ಶಾಸನದಲ್ಲಿದೆ. ಜಾಕಬ್ಬೆ, ಭಾಗ್ಯವತಿ, ಶಾಂತಲದೇವಿ ಹೀಗೆ ಅನೇಕ ರಾಣಿಯರ, ಉಲ್ಲೇಖ ಏವೂರು, ಬಿರಾಳ ಶಾಸನದಿಂದ ತಿಳಿದು ಬರುತ್ತದೆ. ಹೆಗ್ಗಡತಿ, ಕೇತಿಯಕ್ಕ ''ಹೆಗ್ಗಡತಿ ಅಧಿಕಾರಿಣಿ ಪಟ್ಟ''[೩೨] ಎಂಬ ಪದ ಗಮನಿಸಬೇಕಾದ ಅಂಶ. ಇದರಿಂದ ರಾಣಿಯರು ಅಧಿಕಾರ ವರ್ಗದಲ್ಲಿ ವಿಜ್ರಂಭಿಸುತ್ತಿದ್ದರೆಂಬುದಕ್ಕೆ ಇಲ್ಲಿನ ಶಾಸನ ಅಧ್ಯಯನದಿಂದ ತಿಳಿದುಬರುತ್ತದೆ.

ಹೀಗೆ ಬಹುಸಂಖ್ಯಾತ ರಾಣಿಯರನ್ನು ಹೊಂದಿದ ವಿಕ್ರಮಾದಿತ್ಯ ಇವರನ್ನು ಒಂದೇ ರಾಜ್ಯದಲ್ಲಿ ಇಡದೇ, ಸಾಧ್ಯವಾದಷ್ಟು ದೂರದಲ್ಲಿಟ್ಟು ಸವತಿ ಮತ್ಸರ ತಪ್ಪಿಸಿ, ಅವರನ್ನು ರಾಜಕೀಯದಲ್ಲಿ ತೊಡಗುವಂತೆ ಮಾಡಿದ್ದಾನೆ. ಇದರ ಉದ್ದೇಶ ಸಂಸಾರಿಕ ನೆಮ್ಮದಿ ಹಾಗೂ ರಾಜಕೀಯ ಭದ್ರತೆಯು ಆಗಿತ್ತು. ಕಾರಣ ವಿಕ್ರಮಾದಿತ್ಯ ತನ್ನ ರಾಣಿಯರನ್ನು ಅಗ್ರಹಾರದಲ್ಲಿಟ್ಟಿದ್ದನು. ಸುರಕ್ಷಿತೆಯ ದೃಷ್ಟಿಯಿಂದಲೂ ಹಾಗೂ ಧಾರ್ಮಿಕ ವಾತಾವರಣದ ದೃಷ್ಟಿಯಿಂದಲೂ ರಾಣಿಯರನ್ನು ಅಗ್ರಹಾರದಲಿಡುವುದು ಅವಶ್ಯವಾಗಿದ್ದಿತು. ಇದರಿಂದ ರಾಣಿಯರ ಮನಸ್ಸು ಕೂಡ ನಿಯಂತ್ರಣದಲ್ಲಿರುತ್ತಿತ್ತು.

## ೩.೩. ಮಹಾಮಂಡಳೇಶ್ವರರು :

ಪ್ರಾಚೀನ ಕಾಲದಿಂದಲೂ ಆಡಳಿತವನ್ನು ನೋಡಿಕೊಳ್ಳಲು ಅನೇಕ ಮಾಹಾ ಮಂಡಳೇಶ್ವರರು ಅಧಿಕಾರಿಗಳನ್ನು ನೇಮಿಸುತ್ತಿದ್ದರು. ರಾಜನ ಸಾಮ್ರಾಜ್ಯ ವಿಸ್ತಾರವಾಗಿರುವದರಿಂದ ಆಡಳಿತವನ್ನು ನೋಡಿಕೊಳ್ಳಲು ಅಧಿಕಾರಿಗಳ ನೇಮಕ ಅತಿ ಅವಶ್ಯವಾಗಿತ್ತು. ಋಗ್ವೇದ ಗ್ರಂಥದ ಪ್ರಕಾರ ಆಡಳಿತವನ್ನು ಮಂಡಲಗಳಾಗಿ ವಿಭಾಗಿಸಲಾಗುತ್ತಿತ್ತು. ಮಂಡಲದ ಅಧಿಕಾರಿಗಳನ್ನು ಮಹಾಮಂಡಲೇಶ್ವರರೆಂದು

ಕರೆಯಲಾಗುತ್ತಿತ್ತು. "ಮಹಾಮಂಡಳೇಶ್ವರ ಪದದ ಶಬ್ದಶಃ ಅರ್ಥ ವಿಸ್ತಾರವಾದ ಭೂಮಿಗೆ ಅಥವಾ ವಿಭಾಗಕ್ಕೆ ಒಡೆಯ ಎಂದಾಗುತ್ತದೆ"[೩೩] ವಿಶಾಲವಾದ ಸಾಮ್ರಾಜ್ಯವನ್ನು ರಾಜ ಒಬ್ಬನೇ ನೋಡಿಕೊಳ್ಳುವುದು ಅಸಾಧ್ಯವಾಗಿತ್ತು. ಅದಕ್ಕಾಗಿ ಮಹಾಮಂಡಳೇಶ್ವರರನ್ನು ನೇಮಿಸುತ್ತಿದ್ದರು. ಪ್ರತಿಯೊಬ್ಬ ಮಹಾಮಂಡಳೇಶ್ವರರು ತಮ್ಮ ತಮ್ಮ ರಾಜ್ಯದಲ್ಲಿ ಸ್ವಾತಂತ್ರ್ಯ ಪಡೆದುಕೊಂಡಿದ್ದರು. ಮಂತ್ರಿ ಮಂಡಲ, ಸೈನ್ಯ, ಅಧಿಕಾರಿ ವರ್ಗ, ಹೀಗೆ ವಿವಿಧ ರೀತಿಯ ವಿಭಾಗಗಳನ್ನು ಹೊಂದಿದ್ದರು. "ಸಗರನಾಡಿನಲ್ಲಿ ಹೈಹಯ ವಂಶದಲ್ಲಿ ಅನೇಕ ಶಾಖೆಗಳಿದ್ದವು ಯಡ್ರಾಮಿ ಶಾಸನದಿಂದ ಇವರ ಶಾಖೆಗಳು ಈ ರೀತಿಯಾಗಿ ಕಂಡುಬರುತ್ತದೆ.

## ಹೈಹಯ ವಂಶ




ಮಹಾಮಂಡಳೇಶ್ವರರು ಸಂಪೂರ್ಣವಾಗಿ ಸ್ವಾತಂತ್ರ್ಯ ಹೊಂದಿದ್ದರು. ರಾಜನಿಗೆ ವಿಧೇಯರಾಗಿ, ಪ್ರತಿವರ್ಷ ಕಪ್ಪಕಾಣಿಕೆಯನ್ನು ನೀಡುತ್ತಿದ್ದರು. ಇಂತಹ ಮಹಾಮಂಡಳೇಶ್ವರರ ಉಲ್ಲೇಖ ಈ ನಾಡಿನ ಶಾಸನದಿಂದ ತಿಳಿದು ಬರುತ್ತದೆ. ಸುರಪುರ ತಾಲೂಕಿನ ಶಾಸನಗಳಲ್ಲಿ ಉಲ್ಲೇಖಗೊಂಡ ಮಹಾಮಂಡಳೇಶ್ವರರಲ್ಲಿ ಪ್ರಮುಖರಾದವರು ಹೈಹಯ ವಂಶದವರು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಮಹಾಮಂಡಳೇಶ್ವರ ಉಲ್ಲೇಖ ಕಂಡುಬರುತ್ತದೆ.

ಆರನೇ ವಿಕ್ರಮಾದಿತ್ಯನ ಕಾಲದಲ್ಲಿಯೂ ಮಹಾಮಂಡಳೇಶ್ವರ ಚಂದರಸನು ಸಗರ ಐದನೂರು, ಬೆಳವಲು ಮುನ್ನೂರು, ಬನವಾಸೆಯಲ್ಲಿ ಆಳ್ವಿಕೆ ಮಾಡುತ್ತಿದ್ದನು. "ಸ್ವಸ್ತಿ ಸಮಧಿಗತ ಪಂಚ ಮಹಾಶಬ್ದ ಮಹಾಮಂಡಳೇಶ್ವರಂ ಮಾಹಿಷ್ಮತೀ ಪುರವರೇಶ್ವರಂ ಮನ್ನೆಯ ಹಿರಂ ನನ್ನಿವೆಡಂಗ ರಣರಂಗಸೂದ್ರಕಂ ಸುಮ ಮಾಳಿಕಾ ಪ್ರಶಸ್ತಿ ಸಹಿತಂ ಶ್ರೀಮಚನ್ದರಸರು"[೩೪] ಎಂಬ ಬಿರುದುಗಳ ಉಲ್ಲೇಖ ಶಾಸನದಿಂದ ತಿಳಿದುಬರುತ್ತದೆ. ಐವ್ರೂರು ಶಾಸನದಲ್ಲಿ "ಸಮಧಿಗತ ಪಂಚಮಹಾಶಬ್ದ ಮಹಾಮಂಡಳೇಶ್ವರಂ ಮಾಹಿಶ್ಮತೀಪುರವರೇಶ್ವರ ಅಹಿಹಯ ವಂಶೋಧ್ಭವ ಮೂವಡಿಗಣ್ಡಂ ಮನ್ನೆಯ ಭೇರುಣ್ಡ ನಾಮಾದಿ ಸಮಸ್ತ ಪ್ರಶಸ್ತಿ ಸಹಿತಂ ಶ್ರೀಮತ್ ಚನ್ದಭೂಪಾಳಸುತಂ ರೇವರಸರ್"[೩೫] ಎಂಬ ಉಲ್ಲೇಖವಿದೆ. ಈತ ಜಗದೇಕಮಲ್ಲ ಇಮ್ಮಡಿ ಜಯಸಿಂಹ ಹಾಗೂ ತ್ರೈಲೋಕಮಲ್ಲ ಒಂದನೇ ಸೋಮೇಶ್ವರನಿಗೆ ಮಹಾಮಂಡಳೇಶ್ವರನಾಗಿ ಕೆಂಬಾವಿಯಲ್ಲಿ ಆಳ್ವಿಕೆ ಮಾಡುತ್ತಿದ್ದನು. ರೇವರಸ ಕ್ರಿ.ಶ. ೧೦೪೦ ರಿಂದ ೧೦೫೭ರವರೆಗಿನ ಶಾಸನದಲ್ಲಿ ಉಲ್ಲೇಖಿತನಾಗಿದ್ದಾನೆ. ಆದರೆ ಕ್ರಿ.ಶ.೧೧೨೮ರ ಕಕ್ಕೇರಿ ಶಾಸನ ಹಾಗೂ ೧೧೨೯ರ ಮುದನೂರು ಶಾಸನದಲ್ಲಿ ಮಲ್ಲಿರೇವರಸ ಎಂಬ ಉಲ್ಲೇಖ ಕಂಡುಬರುವುದರಿಂದ, ಈ ನಾಡಿನ ಶಾಸನದಲ್ಲಿ ಒಟ್ಟು ಮೂರು ಜನ ರೇವರಸರು ಕಂಡುಬರುತ್ತಾರೆ. "ಕಲ್ಯಾಣ ಚಾಲುಕ್ಯ ಜಗದೇಕಮಲ್ಲ ಜಯಸಿಂಹ ಮತ್ತು ಒಂದನೇ ಸೋಮೇಶ್ವರರ ಮಹಾಮಂಡಳೇಶ್ವರ ರೇವರಸ ತ್ರಿಭುವನಮಲ್ಲ ವಿಕ್ರಮಾದಿತ್ಯ ಮತ್ತು ಭೂಲೋಕಮಲ್ಲ ಮೂರನೇ ಸೋಮೇಶ್ವರರ ಮಹಾಮಂಡಳೇಶ್ವರ ಮಲ್ಲಿರೇವರಸರ, ಯಾದವ ಚಕ್ರವರ್ತಿ ಎರಡನೇ ಸಿಂಘಣನ ಮಹಾಮಂಡಳೇಶ್ವರನಾದ ರೇವರಸ"[೩೬] ಈ ತೊಡಕುಗಳನ್ನು ಬಿಡಿಸಲು ಇನ್ನೂ ಶಾಸನಾಧಾರಗಳ ಕೊರತೆ ಉಂಟಾಗಿದೆ. ಚಂದಿಮರಸನ ಮಗ ರೇವರಸ ಎಂಬುದು ಶಾಸನದಿಂದ ಸ್ಪಷ್ಟವಾಗಿ ತಿಳಿದು ಬರುತ್ತದೆ. ರೇವರಸನ ತ್ಯಾಗ, ಕರ್ಣನಿಗೂ ಮೀರಿಸುವಂತಹದ್ದಾಗಿದೆ. ದಾನ ಧರ್ಮಗಳಲ್ಲಿ ಎತ್ತಿದ ಕೈ. ಸಮರ್ಥವಾಗಿ ಆಡಳಿತ ಮಾಡುತ್ತಿದ್ದ. ಕಲ್ಯಾಣ ಚಾಲುಕ್ಯ ಮೂರನೇ ಸೋಮೇಶ್ವರ ಹಾಗೂ ಕಳಚೂರಿ ಸೋವಿದೇವರಲ್ಲಿ ಮಹಾಮಂಡಳೇಶ್ವರ ಅಲ್ಲಹುಲಿದೇವರಸ. ಈತ ಯಡ್ರಾಮಿಯಲ್ಲಿ ಆಳ್ವಿಕೆ ಮಾಡುತ್ತಿದ್ದನು. ಕೆಲ್ಲೂರು ಶಾಸನದಲ್ಲಿ "ಸಗರನಾಥೀಶ್ವರಂ ನಿಂಬರಸ, ನಿಂಬರಸನ ಮಗ ನಲ್ಲಪುಲಿ, ಅಲ್ಲಪುಲಿಯ ಮಗ ಚಂದಿಮರಸ, ಚಂದಿಮರಸನ ಮಗ ನಿಂಬರಸ, ನಿಂಬರಸನ ತಮ್ಮ ರೇವರಸ, ರೇವರಸನ ತಮ್ಮ ಮಂಜರಸ, ಮಂಜರಸನ ಮಗ ಅಲ್ಲಪುರಿಯರಸ"[೩೭] ಎಂಬ ವಂಶಾವಳಿ ತಿಳಿಸುವ ಶಾಸನ ಇದಾಗಿದೆ. ಅಲ್ಲಹುಲಿದೇವರಸನು ಮೂರನೇ ಸೋಮೇಶ್ವರನಿಗೆ ವಿಧೇಯನಾಗಿ ಆಳ್ವಿಕೆ ಮಾಡುತ್ತಿದ್ದನು.

ಮುಂದೆ ನಾಲ್ಕನೇ ಸೋಮೇಶ್ವರನ ವಿರುದ್ಧ ದಂಗೆ ಎದ್ದನು. ಆಗ ನಾಲ್ಕನೇ ಸೋಮೇಶ್ವರ ತನ್ನ ದಂಡನಾಯಕ ಬಮ್ಮಿದೇವನನ್ನು ಅಲ್ಲಹುಲಿದೇವರಸನ ವಿರುದ್ಧ ಯುದ್ಧಕ್ಕೆ ಕಳುಹಿಸಿದನು. ಈ ಯುದ್ಧದಲ್ಲಿ ಬಮ್ಮಿದೇವ ಜಯ ಸಾಧಿಸಿ, ಅಲ್ಲಹುಲಿದೇವರಸನನ್ನು ಹಿಮ್ಮೆಟ್ಟಿಸಿದನು ಎಂಬ ಅಂಶ ಎಮ್ಮಡಗಿಯ ಶಾಸನದಿಂದ ತಿಳಿದು ಬಂದರೆ, ಇನ್ನು ಮುಂದುವರೆದ ಹೊಡಲ ಶಾಸನದ ಪ್ರಕಾರ "ಬರ್ಮದೇವ (ಬಮ್ಮಿದೇವ) ದಂಡನಾಥ ಮತ್ತು ಅಲ್ಲಹುಲಿದೇವರಸರು ಜೊತೆಗೂಡಿ ಬಂದು ದೇವಪುರದಲ್ಲಿ ಬೀಡು ಬಿಟ್ಟಿರುವ ಸಮಯದಲ್ಲಿ ಎಮ್ಮಡಿಗೆಯ ಹೊಂಡೇಶ್ವರ ದೇವರಿಗೆ"[೩೮] ದಾನ ಕೊಟ್ಟಿದ್ದು ತಿಳಿದುಬರುತ್ತದೆ. ಈ ರೀತಿ ಇವರಿಬ್ಬರು ಯುದ್ಧ ಮಾಡಿದರು. ಮತ್ತೆ ಜೊತೆಗೂಡಿ ದಾನ ಕೊಟ್ಟಿದ್ದು ಶಾಸನದಿಂದ ತಿಳಿದುಬರುತ್ತದೆ. ಈತ ಅನೇಕ ಬಿರುದುಗಳನ್ನು ಪಡೆದಿದ್ದನು.

"ಸ್ವಸ್ತಿ ಸಮಸ್ತ ಭುವನಾಶ್ರಯಂ
ಶ್ರೀ ಪೃಥುವೀವಲ್ಲಭಂ ಮಹಾರಾಜಾಧಿರಾಜ
ಪರಮೇಶ್ವರಂ ಪರಮಭಟ್ಟಾರಕಂ ಸತ್ಯಾಶ್ರಯ
ಕುಲತಿಲಕಂ ಚಾಳುಕ್ಯಾಭರಣಂ ಶ್ರೀಮತ್ರಿಭುವನ
ಮಲ್ಲದೇವರ ವಿಜಯರಾಜ್ಯ ಮುತ್ತರೋತ್ತರಾಭಿವೃದ್ಧಿ
ಪ್ರವರ್ಧ ಮಾನಮಾಚಂದ್ರಾರ್ಕ್ಕ ತಾರಂಬರಂ ಸಲ್ಲುತ್ತಮಿರೆ ‖
ಸಮಧಿಗತ ಪಂಚಮಹಾಶಬ್ದ ಮಹಾಸಾಮಂತಾಧಿಪತಿ
ಪ್ರಚಂಡ ದಂಡನಾಯಕಂ ಸ್ವಜನ ಸುಜನ ಹರ್ಷಾಯಮಾನ
ಮನೋರಂಜನಂ ಸರ್ವೇಜನ . . . . ಶ್ರೀ ರುದ್ರಭಾಸ್ಕರ
ಪಂಡಿತದೇವ ಗುಣಾಂಬುಧಿಚರಣಂ . . . ಸಮಸ್ತ ಪ್ರಶಸ್ತಿ
ಸಹಿತಂ ಶ್ರೀಮತ್ರಿಭುವನಮಲ್ಲರಸರ ಪರಮಾರಾಧ್ಯರಪ್ಪ
ವರ ಚರಣಾರಾಧಕರುಮಪ್ಪ ಶ್ರೀಮನ್ಮಹಾಪ್ರಧಾನ
ದಂಡನಾಯಕಂ ಅಹವಮಲ್ಲರಸರು ‖"

ಎಂಬ ಉಲ್ಲೇಖ ಕ್ರಿ.ಶ. ೧೧೯೨ರ ಹಗರಟಗಿ ಶಾಸನದಿಂದ ತಿಳಿದುಬರುತ್ತದೆ. ಅಲ್ಲಹುಲಿ ದೇವರಸ ಸಗರ ಹಾಗೂ ನರಿಯಂಬೋಳೆ-ಎಪ್ಪತ್ತರಲ್ಲಿ ಮಹಾಮಂಡಳೇಶ್ವರನಾಗಿ 'ದುಷ್ಟರಿಗೆ ಶಿಕ್ಷೆ, ಶಿಷ್ಟರಿಗೆ ರಕ್ಷಣೆ' ಮಾಡುತ್ತಾ ಆಳ್ವಿಕೆ ಮಾಡುತ್ತಿದ್ದನು.

ಕಲ್ಯಾಣ ಚಾಲುಕ್ಯ ಮುಮ್ಮಡಿ ತೈಲಪನ ಮಹಾಮಂಡಳೇಶ್ವರ ಏಚರಸ ಯಡ್ರಾಮಿಯಲ್ಲಿ ಆಳ್ವಿಕೆ ಮಾಡುತ್ತಿದ್ದನು. ಹನ್ನೆರಡನೇ ಶತಮಾನದ ಶಾಸನದಲ್ಲಿ ಈತನ ಬಿರುದುಗಳ ಉಲ್ಲೇಖವಿದೆ. "ಕರ್ಪೂರ ಪ್ರಿಯ ಭೂಪ ಮಾಸ್ವಾದಂ ಅಚಳಿತ ಧೈರ್ಯ್ಯ ಮ್ಮಾಹಿಷ್ಮತೀಪು. .ತಂ ಶ್ರೀಮನ್ಮಹಾಸಾಮನ್ತನೇಚರಸ"[೩೯] ಎಂಬ ಭಾಗ ಮಾತ್ರ ಉಳಿದಿದೆ. ಕಲ್ಯಾಣ ಚಾಲುಕ್ಯ ಇಮ್ಮಡಿ ಜಗದೇಕಮಲ್ಲನ ಮಹಾಮಂಡಳೇಶ್ವರ ಕಪ್ಪದೇವರಸನಾಗಿದ್ದನು. ಈತ ಲಕ್ಷ್ಮರಸನ ಮಗ ಕಪ್ಪದೇವರಸ ಎಂದು ಮುದನೂರ ಶಾಸನದಿಂದ ತಿಳಿದುಬರುತ್ತದೆ "ವಿದಗ್ಧ ವಿದ್ವಜ್ಜನ ಹೃದಯ ಸೊರೆಕಾರ ಅಯ್ಯನಂಕಕಾರ ಬಗೆಕಾರ ಚಕ್ರವರ್ತ್ತಿ ಕಟಕಾಭರಣಂ ಶ್ರೀಮನ್ಮಹಾಮಂಡಳೇಶ್ವರ ಲಕ್ಷ್ಮರಸನ ಕುಮಾರ ಕಪ್ಪದೇವರಸರು"[೪೦] ಎಂಬ ಉಲ್ಲೇಖ ತಿಳಿದು ಬರುತ್ತದೆ. ಇನ್ನೊಂದು ಮುದನೂರು ಶಾಸನದಲ್ಲಿ ಈತ 'ಪಟ್ಟಮಹಾದೇವಿಯರಣುಗಂ' ಎಂಬ ಉಲ್ಲೇಖವಿರುವುದರಿಂದ ಈತ ಯಾರು ಎಂಬುದು ಶಾಸನದಲ್ಲಿ ಸ್ಪಷ್ಟವಾದ ಉಲ್ಲೇಖವಿಲ್ಲ. ಲಕ್ಷ್ಮರಸನ ಮಗ ಕಪ್ಪರಸ ಹಾಗೂ ಪಟ್ಟ ಮಹಾದೇವಿಯರಣುಗ ಕಪ್ಪರಸ ಎಂಬ ಉಲ್ಲೇಖಗಳು ಎರಡು ಶಾಸನದಲ್ಲಿ ಉಲ್ಲೇಖಗೊಂಡಿದ್ದರಿಂದ ಕಪ್ಪದೇವರಸ ಒಬ್ಬನೇ ಎಂದು ಹೇಳಬಹುದು. ಎರಡು ಶಾಸನದಲ್ಲಿ ಉಲ್ಲೇಖಗೊಂಡ ಕಪ್ಪದೇವರಸನ ಹೆಸರು ಇಬ್ಬರು ಒಂದೇ ಕಾಲದವರು ಹಾಗೂ ಒಂದೇ ಊರಿನಲ್ಲಿ ಮಹಾಜನರ ಸಮ್ಮುಖದಲ್ಲಿ ದಾನ ಕೊಟ್ಟಿದ್ದರು. ಹೀಗಾಗಿ ಲಕ್ಷ್ಮರಸನ ಮಗ ಕಪ್ಪರಸನೇ ಪಟ್ಟ ಮಹಾದೇವಿ ಚಂದಲದೇವಿಯ ಸಾಕುಮಗನಾಗಿರಬಹುದು.

"ಸಮಧಿಗತ ಪಂಚಮಹಾಶಬ್ದ ಮಹಾಮಂಡಲೇಶ್ವರಂ
ಸಕಳ ವಿದ್ಯಾಧೀಶ್ವರಂ ಸ್ಥಾನಚತಮ್ಮುಖಂ ಸಕಳ
ಗುಣರತ್ನಾವಳಿ ಶಿಖಾ ಮಯೂಖ ರಾಯಾಸ್ಥಾನ
ಜನಮುಖ ಪದ್ಮಿನೀ ಸರೋವರ ರಾಜಹಂಸ ಸರಸ್ವತೀ
ಕರ್ಣ್ನಾವತಂಸಂ ಬಗೆಕಾರ ಸ್ವರಿಶಲಿಂಗಂ ಚಂದಲದೇವಿ
ಯರಣುಗಂ ಶಸ್ತ್ರ (ಶೀಘ್ರ) ಬಗೆಕಾರ ಕೋಪ ಕೋಪಾನಳ
ವೈರಿ ವಾದಿ ವಾರ್ಥಿ ಬಡಬಾನಳ ಸಿದ್ಧಿ ಬುದ್ಧಿ ವಿದ್ವಿಷ್ಟ
ಗಾಯಕ ಪ್ರಸಂಗ ಮೃಗಮದಾಮೋದ ದುಷ್ಟಬಗೆಕಾರ
ಹ್ರಿದಯಾಕಂಪ ಬಗೆಕಾರ ಜಗಝುಂಪ ವಿದಗ್ಧ ವಿದ್ವಜ್ವನ

ಹೃದಯ ಸೂರೆಕಾರ ಅಯ್ಯನಂಕಕಾರ ಬಗೆಕಾರ ಚಕ್ರವರ್ತ್ತಿ
ಕಟಕಾಭರಣಂ ಶ್ರೀಮನ್ಮಹಾಮಂಡಳೇಶ್ವರಂ ಲಕ್ಷ್ಮರಸನ
ಕುಮಾರ ಕಪ್ಪದೇವರಸರು ॥''

ಎಂಬ ಉಲ್ಲೇಖ ೧೨ನೇ ಶತಮಾನದ ಮುದನೂರು ಶಾಸನದಿಂದ ಈತ ಲಕ್ಷ್ಮರಸನ ಮಗ ಎಂಬುದು ಸ್ಪಷ್ಟವಾಗಿ ತಿಳಿದುಬರುತ್ತದೆ. ಕಲ್ಯಾಣ ಚಾಲುಕ್ಯ ನಾಲ್ಕನೇ ವಿಕ್ರಮಾದಿತ್ಯನ ಮಹಾಮಂಡಳೇಶ್ವರ ಗೋಮದೇವರಸ ಮುದನೂರನಲ್ಲಿ ಆಳ್ವಿಕೆ ಮಾಡುತ್ತಿದ್ದನು. ನಂತರ ಆರನೇ ವಿಕ್ರಮಾದಿತ್ಯನ ಮಹಾಮಂಡಳೇಶ್ವರ ಜೋಗಮರಸನಾಗಿದ್ದನು.

''ಸಮಧಿಗತ ಪಂಚಮಹಾಶಬ್ದ ಮಹಾಮಂಡಳೇಶ್ವರಂ
ಸಕಳ ವಿದ್ಯಾಧೀಶ್ವರಂ ಗೋಧರ್ಮ್ಮ ಚತುರ್ಮ್ಮುಖಂ
ವಿವೇಕಗುಣ ರತ್ನಾವಳಿ ಶಿಖಾಮಯೂಖಂ ರಾಯಾಸ್ಥಾನ
ಜನಮುಖ ಪದ್ಮಿನೀ ಸರೋವರ ರಾಜಹಂಸ ಸರಸ್ವತೀ
ಕರ್ಣ್ನಾವತಂಸಂ ಬಗೆಕಾರ ಸ್ಪರಿಶಲಿಂಗಂ ಚಂದಲದೇವಿ
ಯರಣುಗಂ ಶೀಘ್ರ ಬಗೆಕಾರ ಕೋಪಾನಳಂ ಪ್ರತಿವಾದಿ
ಜಳಧಿ ಬಡವಾನಳಂ ಸಿದ್ಧಿಬುದ್ಧಿ ದಿಶಾಪಟ್ಟಂ ಗಾಯಕಮುಖ
ಲಲಾಟಪಟ್ಟಂ ಬಗೆಕಾರ ವಾದಿಗಜ ಶಿ(ಸಿಂ)ಗಂ ಸಾರಂಗ
ಸಂಗೀತ ಗಾಯಕ ಪ್ರಸಂಗ ಮಹಾಕಾಳೀ ಮಹಾಲಕ್ಷ್ಮೀ
ಲಬ್ಧವರ ಪ್ರಸಾದಂ ಮ್ರಿಗಮದಾಮೋದಂ ದುಷ್ಟ
ಬಗೆಕಾರಂ ಹ್ರಿದಯಾಕಂಪಂ ಬಗೆಕಾರ ಜಗಝಂಪಂ
ವಿದಗ್ಧ ವಿದ್ವಾಂಸ ಹ್ರಿದಯ ಸೂರೆಕಾರಣಯ್ಯನಂಕಕಾರಂ
ಶ್ರೀಮನ್ಮಹಾಮಣ್ಡಳೇಶ್ವರಂ ಬಗೆಕಾರ ಚಕ್ರವರ್ತ್ತಿ ಕಟಕಾಭರಣಂ
ಜೋಗಮರಸರು ॥''

ಎಂಬ ಈತನ ಬಿರುದುಗಳ ಉಲ್ಲೇಖ ಮುದನೂರ ಶಾಸನದಿಂದ ತಿಳಿದು ಬರುತ್ತದೆ. ಹನ್ನೆರಡನೇ ಶತಮಾನದ ಮುದನೂರು ಶಾಸನದಲ್ಲಿ ಆರನೇ ವಿಕ್ರಮಾದಿತ್ಯನ ಕಾಲದಲ್ಲಿ ಮಹಾಮಂಡಳೇಶ್ವರ ಲಕ್ಷ್ಮರಸನಾಗಿದ್ದನು. ಜೋಗಮರಸ ಹಾಗೂ ಲಕ್ಷ್ಮರಸನ ಬಿರುದುಗಳು ಹೋಲಿಕೆಯಲ್ಲಿ ಒಂದೇ ಆಗಿವೆ. ಇವರಿಬ್ಬರು ಚಂದಲದೇವಿಯರಣುಗ ಎಂದು

ಹೇಳಿಕೊಂಡಿದ್ದಾರೆ. ಹೀಗಾಗಿ ಇವರಿಬ್ಬರು ಸಹೋದರರಾಗಿದ್ದರು. ಆದರೆ ಕಪ್ಪರಸನ ತಾಯಿ ಯಾರೆಂಬುದು ಶಾಸನದಲ್ಲಿ ಇನ್ನು ಸ್ಪಷ್ಟವಾಗಿ ತಿಳಿದು ಬಂದಿಲ್ಲ.

ಕಲ್ಯಾಣ ಚಾಲುಕ್ಯ ಮೂರನೇ ಸೋಮೇಶ್ವರನ ಮಹಾಮಂಡಳೇಶ್ವರ ಗಂಡರಾದಿತ್ಯದೇವನ ಉಲ್ಲೇಖ ಹುಣಸಗಿ ಶಾಸನದಲ್ಲಿದೆ. ಆರನೇ ವಿಕ್ರಮಾದಿತ್ಯನ ಮಹಾಂಡಳೇಶ್ವರ ಸುಭಟಮಹೇಶ್ವರ "ಸ್ವಸ್ತಿ ಸಮಧಿಗತ ಪಂಚಮಹಾಶಬ್ದ ಮಹಾಮಂಡಳೇಶ್ವರ ಸುಭಟ ಮಹೇಶ್ವರಂ" ಎಂಬ ಬಿರುದು ತುಮಕೂರು ಶಾಸನದಲ್ಲಿದೆ. ಯಾದವ ಚಕ್ರವರ್ತಿ ಇಮ್ಮಡಿ ಸಿಂಘಣದೇವನ ಕಾಲದಲ್ಲಿ ಮಹಾಮಂಡಳೇಶ್ವರ ಚಂಮಡಿಗ ದೇವರಸನ ಉಲ್ಲೇಖ ಹಗರಟಗಿ ಶಾಸನದಲ್ಲಿದೆ. ನಾಲ್ಕನೇ ಸೋಮೇಶ್ವರ ಹಾಗೂ ಕಳಚೂರಿ ರಾಯಮುರಾರಿ ಸೋವಿದೇವನ ಮಹಾಮಂಡಳೇಶ್ವರ ಸಿಂಗಿದೇವರಸನ ಉಲ್ಲೇಖ ಶಿರವಾಳ ಶಾಸನದಲ್ಲಿದೆ.

**ಮಂಡಳೀಕರು :**

ಮಹಾಮಂಡಳೇಶ್ವರರಿಗೆ ಅಧೀನರಾಗಿ ಮಂಡಳಿಕರಿರುವ ಬಗ್ಗೆ ಈ ನಾಡಿನ ಶಾಸನಗಳಲ್ಲಿ ಕಂಡುಬರುತ್ತದೆ. ಮಂಡಳಿಕ ಧಾಯಿಮಯ್ಯ ಸೋವರಸರು ಆರುವ ಹುಲ್ಲೆಯ ಸಾಹಣಿ ಎಂಬ ಬಿರುದಿನೊಂದಿಗೆ ನರಿಯಂಬೊಳೆ-೭೦ರ ಬಳಿಯ ಬಾಡ ಉಭಯ ಸಾಂಮ್ಯದಿಂದ ಆಳುತ್ತಿದ್ದನೆಂಬುದು ಕ್ರಿ.ಶ.೧೧೦೧ರ ಕೆಲ್ಲೂರು ಶಾಸನದಿಂದ ತಿಳಿದುಬರುತ್ತದೆ. ಈ ಹುದ್ದೆ ಮಹಾಮಂಡಳೇಶ್ವರರಿಗೆ ಅನಿವಾರ್ಯ ವಿರಲಿಕ್ಕಿಲ್ಲ. ಅಂತೆಯೇ ಬಹಳ ಕಡಿಮೆ ಜನ ಮಂಡಳೀಕರು ಶಾಸನದಲ್ಲಿ ಉಲ್ಲೇಖಗೊಂಡಿದ್ದಾರೆ.

## ೩.೪. ಮಹಾಸಾಮಂತರು :

ಸಗರನಾಡಿನ ಶಾಸನಗಳಲ್ಲಿ ಮಹಾಸಾಮಂತರ ಉಲ್ಲೇಖ ಬರುತ್ತದೆ. 'ಸಾಮಂತ' ಎಂಬ ಶಬ್ದಕ್ಕೆ "ಒಬ್ಬ ರಾಜನಿಗೆ ಅಧೀನರಾಗಿರುವ ರಾಜ, ಮಾಂಡಲಿಕ ಎಂಬ ಅರ್ಥವಿದೆ" ಈ ಸಾಮಂತರು ರಾಜನಿಗೆ ವಿಧೇಯರಾಗಿ ಆಳ್ವಿಕೆ ಮಾಡುತ್ತಿದ್ದರು.

"ತತ್ಪಾದ ಪದ್ಮೋಪಜೀವಿ ಸಮಧಿಗತ ಪಂಚ
ಮಹಾಶಬ್ದ ಮಹಾಸಾಮಸ್ತ ವಿಶಿಷ್ಟ ಜನವತ್ಸಳ
ಧೀರ ಭೂರಿ XXX ಶ್ರೀ ಮನೋಹಿತಭದ್ರರು ಸಾಳೋಢ(ಹ)
ಕಾಡನಲಂ ಸಂವರಧನ್ ಕಾಳಿಯಪತಿನೊಳೆಗಣ್ಡಿತ
ನ್ನಿಮಿತ್ತ ಪರೋಪಕಾರಿ ಶ್ರೀಮತ್ಫಟ್ಟ XX ಡದೊರೆ
ಇನ್ತಿನಿರಮೂಮವ ನೀತ ವಿರುದ್ಧ ಅತಿಚನೆ ವಿನೋದ
ತ್ರೈವಿ ಫಿ ಸಖಭೂಪಾಳಿ ದಿಶಾಕ್ರಾನ್ತ ಸಂವತ್ಸರಗಳೆಂಟು
ಆರುತ್ತೊನೆಯ ವಿಲಂಬಿ ಸಂವತ್ಸರ ಪ್ರವರ್ತ್ತಿಸೆತ್ನ (ದ)
ವರ್ಷಾನ್ತರ ಪಾಲ್ಗುಣ ಸುದ್ಧ ಪಂಚಮಿ ಆದಿತ್ಯವಾರ
ಸಗರನಾಡನಾಳ್ಗಾವುಣ್ಡ ಚನ್ದಯ್ಯ ॥"

ಎಂಬ ಉಲ್ಲೇಖ ಕಲ್ಯಾಣ ಚಾಲುಕ್ಯ ಆರನೇ ವಿಕ್ರಮಾದಿತ್ಯನ ಮಹಾಸಾಮಂತ ಚಂದಯ್ಯನ ಉಲ್ಲೇಖ ಕ್ರಿ.ಶ.೯೩೯ರ ಶಿರವಾಳ ಶಾಸನದಲ್ಲಿ ಕಂಡುಬರುತ್ತದೆ.

"ಮಹಾಸಾಮಂತ ಎಂಬುದರಲ್ಲಿ ಎರಡು ಪದಗಳಿವೆ 'ಮಹಾ' ಮತ್ತು 'ಸಾಮಂತ'. ಸಾಮಂತ ಎಂಬುದು ಸ್ವಾಮ್ಯವಂತ, ಸಾಮಂತ, ಸಾವಂತ ಎಂಬ ರೂಪಾಂತರ ಹೊಂದುತ್ತಾ ಬಂದಿದೆ"[೪೧] ಮುಂದೆ ಇದು ಗೌರವಾರ್ಥವಾಗಿ ಮಹಾ ಎಂಬ ವಿಶೇಷ ಪದ ಬಂದಿದೆ. ಅಂದರೆ ಸಾಮಂತ ಹಾಗೂ ಮಹಾಸಾಮಂತ ಎಂಬ ಎರಡು ಒಂದೇ ಅರ್ಥ ಕೊಡುತ್ತದೆ. ಇವರೆಲ್ಲ ಕೇಂದ್ರಾಡಳಿತದಲ್ಲಿ ರಾಜನೊಂದಿಗೆ ಸಹಕರಿಸುವುದರೊಂದಿಗೆ, ಇತರ ವಿಭಾಗಗಳ ಅಧಿಕಾರಿಗಳು ಅಗಿದ್ದರು. ಇವರು 'ಮಹಾಸಾಮಂತಾಧಿಪತಿಗಳು' ಎಂಬ ಬಿರುದನ್ನು ಕೂಡ ಹೊಂದಿದ್ದರು. ಈ ಸಾಮಂತರ ಉಲ್ಲೇಖ ಈ ನಾಡಿನ ಶಾಸನಗಳಲ್ಲಿ ಕಂಡು ಬರುತ್ತದೆ. "ಮಹಾಸಾಮಂತ ಕಾಳಿಯಪತಿ ರಾಷ್ಟ್ರಕೂಟ ಅಕಾಲವರಿಷದೇವನ ಪಾದಪದ್ಮೋಪಜೀವಿಯಾಗಿದ್ದನು."[೪೨] "ಸಾಮನ್ತಾಧಿಪತಿ ಮೆನೆವೆರ್ಗ್ಗಡೆ ಕೇಸರಿ ನರಿಯಂಬೊಳೆ–ಎಪ್ಪತ್ತನ್ನು"[೪೩] ಆಳುತ್ತಿದನು. "ಮಹಾಸಾಮಂತ ವೀರನಾದ ಚಂದರಸನು ಪಂಚಮಹಾಶಬ್ದ ಎಂಬ ಗೌರವ ಪಡೆದಿದ್ದನಲ್ಲದೆ ನನ್ನಿವೆಂಡಗಾದಿ"[೪೪] ಎಂಬ ಪ್ರಶಸ್ತಿಯು ಹೊಂದಿದ್ದನು. "ನಾಗರುದ್ರ ಭಟ್ಟೋಪಾಧ್ಯಾಯರು ಮಹಾಸಾಮಂತಾಧಿಪತಿ ಹಾಗೂ ಮಹಾಸೇನಾಧಿಪತಿ ಪ್ರಧಾನ ದಂಡನಾಯಕರೂ

ಆಗಿದ್ದರು''[೪೫] ರೆಬ್ಬಣಯ್ಯರು ಕೇವಲ ದಂಡನಾಯಕರಾಗಿದ್ದರೆ, ಅವನ ಮಗ ''ಸಿಂಗರಸ ಮಹಾಪ್ರಚಂಡ ದಂಡನಾಯಕ ಹಾಗೂ ಮಹಾಸಾಮಂತಾಧಿಪತಿಯು ಆಗಿದ್ದನು''[೪೬] ಶಂಕರ ಭಟ್ಟೋಪಾಧ್ಯಾಯ ಮಹಾಸಾಮಂತ''[೪೭] ಈತ ಸಾಮಾನ್ಯ ತ್ರಿವಿಕ್ರಮ ಫಲಂಗಿಯರ ಮಗನಾಗಿದ್ದ. ಮನೆತನದ ಗೌರವ ಪ್ರತಿಷ್ಠೆ ಯಿಂದ, ಹಾಗೂ ಮಾದಯ್ಯ ದಂಡನಾಯಕರ ಸಹಾಯದಿಂದ ಒಮ್ಮೆಲೇ ಮಹಾಸಾಮಂತ ಪದವಿಗೇರಿದನು. ಮಹಾಸಾಮಂತಾಧಿಪತಿ, ಮಹಾಪ್ರಧಾನ ದಂಡನಾಯಕ ಮುದಿಗಲ್ಲ ಭಟ್ಟೋಪಾಧ್ಯಾಯರು ''ಉಭಯ ಮೀಮಾಂಸಾ ರತ್ನಾಕರ ಷಟ್ತರ್ಕ್ಕ ಕಮಳಿನೀದಿವಾಕರ ಕಾವ್ಯಕೇರ''[೪೮] ಎಂಬ ವಿಶೇಷಣಗಳನ್ನು ಪಡೆದಿದ್ದರು. ಅಹವಮಲ್ಲ, ಬೈಸರಸ, ಹಂಡೆಯ ನಾಯಕ, ವೀರಗೊಂಕರಸ ಹಾಗೂ ಬಿಬ್ಬರಸ ಮುಂತಾದವರು ಶಾಸನೋಕ್ತ ಮಹಾಸಾಮಂತಾರಾಗಿದ್ದಾರೆ. ಮಹಾಸಾಮಂತರು, ಪ್ರಾಂತ್ಯದಲ್ಲಿರುವ ಮಹಾಮಂಡಳೇಶ್ವರರಿಗೆ ಹಾಗೂ ಮಹಾಪ್ರಚಂಡದಂಡನಾಯಕರುಗಳಿಗೆ ಅಧೀನರಾಗಿ ಕಾರ್ಯ ನಿರ್ವಹಿಸುತ್ತಿದ್ದರು. ಇವರು ತಮ್ಮದೇ ಅದ ಆಡಳಿತ ವರ್ಗವನ್ನು ಹೊಂದಿದ್ದರು. ಕೆಲ ಅಧಿಕಾರಿಗಳನ್ನು ಮಹಾಸಾಮಂತರು ನೇಮಕ ಮಾಡಿಕೊಳ್ಳತ್ತಿದ್ದರು. ಇದರಿಂದ ಆಡಳಿತ ಸುಗಮವಾಗಿ ನಡೆಯುತ್ತಿತ್ತೆಂಬುದು ತಿಳಿದು ಬರುತ್ತದೆ.

**ಮನ್ನೆಯರು :**

ಮಹಾಸಾಮಂತರನ್ನು ಶಾಸನಗಳಲ್ಲಿ ಮನ್ನೆಯರೆಂದು ಕರೆಯಲಾಗಿದೆ. ''ಮನ್ನೆಯ ಎಂಬ ಪದ ಗೌರವಕ್ಕೆ ಪಾತ್ರನಾದವನು''[೪೯] ಎಂದು ಅರ್ಥ. ಇವರು ರಾಜರಿಂದ ಹಾಗೂ ಮಹಾಮಂಡಳೇಶ್ವರರಿಂದ ಘನತೆ, ಗೌರವ ಪಡೆದುಕೊಂಡು ಆಡಳಿತ ಮಾಡುತ್ತಿದ್ದರು. ಹಾಗಾಗಿ ಇವರನ್ನು ಮನ್ನೆಯರೆಂದು ಕರೆದಿದ್ದಾರೆ. ಮಹಾಸಾಮಂತರ ಹೆಸರಿನೊಂದಿಗೆ, ಮನ್ನೆಯರ ಉಲ್ಲೇಖವು ಈ ನಾಡಿನ ಶಾಸನಗಳಲ್ಲಿ ಕಂಡು ಬರುತ್ತದೆ. ''ಶ್ರೀ ಮನ್ನಿಲಸಿವ ಭಟ್ಟಾರರ್ಕ್ಗೆ''[೫೦] ಸಗರನಾಡ ಬಳಿಯ ದೋರನಳ್ಳಿಯ ಮನ್ನೆಯ ಸಾಮ್ಯವನ್ನು ಧಾರಾಪೂರ್ವಕವಾಗಿ ಕೊಟ್ಟಿದ್ದರು. ಮಹಾಮಂಡಳೇಶ್ವರ ರೇಚರಸರು ಮನ್ನೆಯಬೇರುಂಡರೆನಿಸಿದ್ದರು. ಮಹಾಸಾಮಂತ ಮನ್ನೆಯ ವೀರ ಚಂದರಸ ಹೀಗೆ ಅನೇಕ ಮಹಾಸಾಮಂತರನ್ನು ಮನ್ನೆಯರೆಂದು ಕರೆದಿದ್ದಾರೆ.

**ದಂಡನಾಯಕರು – ಮಹಾದಂಡನಾಯಕರು (ಸೇನಾಧಿಪತಿಗಳು) :**

ರಾಜನ ಸಪ್ತಾಂಗಗಳಲ್ಲಿ ಸೈನ್ಯವೂ ಒಂದು. ರಾಜ್ಯದ ಸುರಕ್ಷತೆ ಮತ್ತು ವಿಸ್ತಾರಕ್ಕಾಗಿ ಸೈನ್ಯದ ಅವಶ್ಯಕತ ಇತ್ತು. ಶಾಸನಗಳಲ್ಲಿ ಸೈನ್ಯಾಡಳಿತದ ಬಗ್ಗೆ ನಿಖಿರವಾದ ಮಾಹಿತಿ ಲಭ್ಯವಾಗದಿದ್ದರೂ ಸಹ, ಅಂದು ಸೈನ್ಯದ ನಿರ್ವಹಣೆಗೆ ಹೆಚ್ಚಿನ ಮಹತ್ವ ಇತ್ತು. ದಂಡನಾಯಕರನ್ನು ಸೇನಾಧಿಪತಿ ಎಂದು ಕರೆಯಲಾಗುತ್ತದೆ. ದಂಡನಾಯಕ ಎಂಬ ಪದ ಎಲ್ಲ ಮಂತ್ರಿಗಳಿಗೂ ಸಮಾನವಾದುದು. ಕೇವಲ ಇವರು ದಂಡಾಧಿಕಾರಿಗಳು ಅಷ್ಟೇ ಅಲ್ಲ ವಿದೇಶಾಂಗ ಸಚಿವರು ಆಗಿದ್ದರು. ನಾಣ್ಯ ಟಂಕಿಸುವ ಭಂಡಾರದ ಅರ್ಥ ಸಚಿವರು, ಸುಂಕ ಸಚಿವರು ಆಗಿದ್ದರು. ಇವರ ಉಲ್ಲೇಖಗಳು ಈ ನಾಡಿನ ಹಲವಾರು ಶಾಸನದಿಂದ ತಿಳಿದು ಬರುತ್ತದೆ. ಕಲ್ಯಾಣ ಚಾಲುಕ್ಯ ಆರನೇ ವಿಕ್ರಮಾದಿತ್ಯನ "ಮಹಾಸಾಮಂತಾಧಿಪತಿ ಮಹಾಪ್ರಚಂಡ ದಂಡನಾಯಕ ಸಿಂಗರಸ"[೫೧] ನಾಗಿದ್ದನು. ಸಿಂಗರಸನ ಪ್ರಶಸ್ತಿಗಳು ಶಾಸನದಲ್ಲಿ ಈ ರೀತಿಯಾಗಿ ಕಂಡುಬರುತ್ತವೆ.

"ಸಮಧಿಗತ ಪಂಚ ಮಹಾಶಬ್ದ ಮಹಾಸಾಮಸ್ತಾಧಿಪತಿ
ಮಹಾಪ್ರಚಂಡದಂಡನಾಯಕಂ ವಿಶಿಷ್ಟ ಜನಾಭಿಷ್ಟ
ಫಳದಾಯಕಂ ಅರಸಾಸ್ಯಾರಿ ಮಕುಟ ಚೂಡಾಮಣಿ
ಶಿವಪಾದಾಂಬುಜಭ್ರಿಂಗನಪ್ಪನಂಗ ಶ್ರೀಮದ್ದಂಡನಾಯಕಂ ಸಿಂಗರಸರು ॥"

ಎಂಬ ಉಲ್ಲೇಖ ಕ್ರಿ.ಶ.೧೧೭೪ ರ ಬೈಚಬಾಳ ಶಾಸನದಲ್ಲಿ ಕಂಡುಬರುತ್ತದೆ. ಈತನ ಇನ್ನೊಬ್ಬ "ದಂಡನಾಯಕ ಮದುಸೂದನಯ್ಯ ತತ್ಪಾದಪದ್ಮೋಪಜೀವಿ"[೫೨] ಯಾಗಿ ಆಳ್ವಿಕೆ ಮಾಡುತ್ತಿದ್ದನು. ಈತನ ಪ್ರಶಸ್ತಿಗಳು ಶಾಸನದಲ್ಲಿ ಈ ರೀತಿ ಉಲ್ಲೇಖಗೊಂಡಿದೆ.



"ತತ್ಪಾದ ಪದ್ಮೋಪ ಜೀವಿ ಸ್ವಸ್ತಿ ಸಮಸ್ತಗುಣಗಣಾಳಂಕ್ರಿತಂ
ಸತ್ಯ ಸಂಪ್ರರ್ಣ್ಣಂ ಕಲಿಕಾಲಕರ್ಣ್ಣಂ ವಿದ್ವಿಷ್ಟ ಮುಕುಟ
ಸಂಘಟ್ಟಿತ ಪದ ಯುಗಾಂಭೋಜ ಜಯದುತ್ತರಂಗ
ಕೇಸಿಯಸಿಂಗ ನಾಮಾದಿ ಸಮಸ್ತ ಪ್ರಶಸ್ತಿ ಸಹಿತಂ
ಶ್ರೀಮನ್ಮಹಾವಡಿಯರಂ ಮಧುಸೂದನಯ್ಯ ॥"

ಎಂಬ ಉಲ್ಲೇಖ ಕ್ರಿ.ಶ.೧೦೩೪ರ ಅಣಬಿ ಶಾಸನದಿಂದ ತಿಳಿದು ಬರುತ್ತದೆ. ಆರನೇ ವಿಕ್ರಮಾದಿತ್ಯನ ಕಾಲದಲ್ಲಿ ಬಮ್ಮಿದೇವರಸ ದಂಡನಾಯಕನಾಗಿದ್ದನು. ಮುಂದೆ ನಾಲ್ಕನೇ ಸೋಮೇಶ್ವರನ ಕಾಲದಲ್ಲಿ ಕಲ್ಯಾಣ ಚಾಳುಕ್ಯ ರಾಜ್ಯವನ್ನು ಮರಳಿ ಪಡೆಯುವುದರಲ್ಲಿ ಸಹಾಯ ಮಾಡಿದ ಸೇನಾಪತಿ ಬಮ್ಮಿದೇವರಸ ಈತ ಕಳಚೂರಿ ರಾಯಮುರಾರಿ ಸೋವಿದೇವನಿಗೆ ತತ್ಪಾದಪದ್ಮೋಪಜೀವಿಯಾಗಿ ಮುದನೂರನ್ನು ತನ್ನ ನೆಲೆವೀಡನ್ನಾಗಿ ಮಾಡಿಕೊಂಡು ಆಳ್ವಿಕೆ ಮಾಡುತ್ತಿದ್ದನು. ಈತ ಪರಾಕ್ರಮಿಯಾಗಿದ್ದನು. 'ರಾಯದಂಡನಾಥಗಂಡ ಪೆಂಡಾರ' ಮತ್ತು 'ಚಾಲುಕ್ಯ ರಾಜ್ಯ ಸಮುದ್ಧರಣ' ಎಂಬ ಬಿರುದುಗಳಿಂದಲೂ ಭೂಷಿತನಾಗಿದ್ದಾನೆ'' ಈತನ ಪರಾಕ್ರಮದ ವರ್ಣನೆ ಶಾಸನದಲ್ಲಿ ಈ ರೀತಿಯಾಗಿ ಕಂಡುಬರುತ್ತದೆ.

''ತತ್ಪಾದಪದ್ಮೋಪ ಜೀವಿಯಪ್ಪ ರಾಯದಂಡಾಧೀನಾಥ
ಗಂಡಪೆಂಡಾರ ಚಾಳುಕ್ಯರಾಜ್ಯ ಸಮು(ದ್ಧರಣಂ)
ಕುಮಾರಂ ಬಮ್ಮಿದೇವರಸರ ಪ್ರತಾಪಮುಂ ಗುಣೋಂ
ನತಿಕೆಯುಮೆಂತೆಂದಡೆ ‖ ಭೂವಳೆಯಾದಿ ನಾಯಕರ
ನೋರ್ಪ್ಪನೆ ಗೆಲುದ ಪ್ರತಾಪದಿಂದಾವನ ಮಾಂಪರಿಲ್ಲ
ಭುಜಗರ್ವ್ವದ ದೋರ್ವ್ವಳದಿಂದೆ ನಿಂದನಿಂ
ಕಾವವರಾರು ವಿಲ್ಲೆನುತ ಓಡಿದರೊಲ್ಲದ ವೈರಿವರ್ಗ್ಗವೀ
ಕಾವಣದಂ (ಡನಾ)ಥ ಸುತ ಬಮ್ಮರಸಂ ಜಗದೇಕವೀರನೋ ‖
ಬಮ್ಮನಸಾಜ ಭಾನುವಿನ ತೇಜ ಯಿರಿದ್ವೀರ ನೋಜೆ
ಲೋಕದೋಳು ಸೋಮನ ತಂಪು ಮೇರುವಿನ ಬಿ (ಣ್ಪು)
ಸುರೇಶನ ಪೆಂಪು ನಾಡೆಯುಂ ರಾಮನ ಸತ್ವ ಭೀಸ್ಮನ
ಸುಚಿತ್ವ ಮಹೇಸ ಮಹತ್ವ ಮೆಂದೊಡಿನ್ನೀ ಮಹಿಯೊಳು
ನೆಗಳ್ತೆವಡೆದಿಪ್ಪವರಾರ್ದ್ದೊರೆ ಬಂಮಿದೇವ ‖''

ಎಂಬ ಉಲ್ಲೇಖ ಕ್ರಿ.ಶ. ೧೧೮೨ ರ ಹೆಮ್ಮಡಗಿ ಶಾಸನದಿಂದ ತಿಳಿದುಬರುತ್ತದೆ. ಅಳಂದ ತಾಲೂಕಿನ ಹೊಡಲ ಕ್ರಿ.ಶ.೧೧೮೪ರ ಶಾಸನ ಹಾಗೂ ಚಿತ್ತಾಪುರ ತಾಲೂಕಿನ ಕೊಲ್ಲೂರು ಕ್ರಿ.ಶ.೧೧೮೯ರ ಶಾಸನದಲ್ಲಿ ಈತನ ಉಲ್ಲೇಖ ಕಂಡು ಬರುತ್ತದೆ. ಕಲ್ಯಾಣ ಚಾಲುಕ್ಯರು ಪತನ

ಹೊಂದಿದ ನಂತರ ಮಹಾಮಂಡಳೇಶ್ವರರಾದ ಕಳಚೂರ್ಯರು ರಾಜ್ಯವನ್ನು ಸ್ಥಾಪಿಸಿ ಸ್ವತಂತ್ರ್ಯರಾದರು. ಆದರೆ ಇವರು ಅಷ್ಟೊಂದು ಸಮರ್ಥರಾಗಿರಲಿಲ್ಲ. ಇದರ ಲಾಭವನ್ನು ಬಲಿಷ್ಠರಾದ ಮಹಾಮಂಡಳೇಶ್ವರರು, ಸಾಮಂತರು ದಂಗೆ ಎದ್ದು, ಸ್ವತಂತ್ರರಾಗಲು ಹವಣಿಸಿದರು. ಇವರಲ್ಲಿ ಸಗರನಾಡಿನ ಮಹಾಮಂಡಳೇಶ್ವರ ಅಲ್ಲಹುಲಿದೇವರಸ ಸ್ವತಂತ್ರನಾಗಲು ಪ್ರಯತ್ನಿಸುತ್ತಿರುವಾಗ, ದಂಡನಾಯಕ ಕುಮಾರ ಬಮ್ಮಿದೇವರಸ ಈತನ ಮೇಲೆ ದಂಡೆತ್ತಿ ಹೋದನು ಎಂಬುದು ಎಮ್ಮೆವಾಡಿಗೆಯ ಶಾಸನದಿಂದ ತಿಳಿದು ಬರುತ್ತದೆ. "ಅಚ್ಚು ಪನ್ನಾಯದಧಿಷ್ಠಾಯಕ ದಂಡನಾಯಕ ಮುದ್ದರಸ ಹಾಗೂ ಮಹಾಪ್ರಧಾನ ದಂಡನಾಯಕ ಲಕ್ಷ್ಮಣಯ್ಯರ"[೫೩] ಉಲ್ಲೇಖವಿದೆ. ದಂಡನಾಯಕ ನಾಗವರ್ಮ್ಮಯ್ಯ (ಕಡಕಲ್ಲ ಕ್ರಿ.ಶ.೧೦೯೬) ದಂಡನಾಯಕ ದಾಸಿಯರಸ (ಚೆನ್ನೂರು, ಕ್ರಿ.ಶ.ಸು.೧೨ನೇ ಶತ) ರೆಬ್ಬಣಯ್ಯ (ಬೈಚಬಾಳ ಕ್ರಿ.ಶ.೧೦೭೪) ಕೊಮಾರಸ್ವಾಮಿ ದಂಡನಾಯಕ (ಮುದನೂರು, ಕ್ರಿ.ಶ. ೧೦೯೯) ಕಾಳಿಮರಸ, ಈತನ ಬಿರುದುಗಳು ಶಾಸನದಲ್ಲಿ ಈ
ರೀತಿಯಾಗಿ ಕಂಡುಬರುತ್ತದೆ.

"ತತ್ಪಾದಪದ್ಮೋಪಜೀವಿ ಸಮಧಿಗತ ಪಂಚಮಹಾ
ಶಬ್ದ ಮಹಾಸಾಮನ್ತಾಧಿಪತಿ ಮಹಾಪ್ರಧಾನಂ
ಸೇನಾಧಿಪತಿ ಕಡಿತವೆರ್ಗ್ಗಡೆ ಕಂನಡಸನ್ಧಿವಿಗ್ರಹಿ
ಹಿರಿಯದಣ್ಡನಾಯಕಂ ಕಾಳಿಮರಸರ ॥"

ಎಂಬ ಉಲ್ಲೇಖ ಕ್ರಿ.ಶ. ೧೧೩೭ರ ಶಿರವಾಳ ಶಾಸನದಿಂದ ತಿಳಿದುಬರುತ್ತದೆ. ರವಿಯಣಭಟ್ಟ ಅವರ ಉಲ್ಲೇಖ ಶಾಸನದಿಂದ ತಿಳಿದು ಬರುತ್ತದೆ. ಚಾಲುಕ್ಯ ರಾಜರ ಮಹಾ ಪ್ರಧಾನ ಸೇನಾಧಿಪತಿ ಹಿರಿಯ ದಂಡನಾಯಕ ಚಿದ್ದರಸ ತರ್ದವಾಡಿ –೧೦೦೦, ಎಡೆದೊರೆ –೨೦೦೦, ಬೆಳ್ವೊಲ –೩೦೦"[೫೪] ಹೀಗೆ ಬೇರೆ ಬೇರೆ ನಾಡುಗಳನ್ನು ಆಳುತ್ತಿದ್ದರು ಎಂಬುದು ಶಾಸನದಿಂದ ತಿಳಿದು ಬರುತ್ತದೆ. ಕಲಚೂರಿ ಅಹವಮಲ್ಲ ದೇವನ ಮಹಾಪ್ರಚಂಡ ದಂಡನಾಯಕ ಚಂಡಗಿ ದೇವರಸ ಎಡದೊರೆ, ಕನ್ನೆ, ಕೋಸಗಿ, ಗೊಂಕನಾಡು ಹೀಗೆ ಮುಂತಾದ ನಾಡುಗಳನ್ನು ಅಳುತ್ತಿದ್ದನು. ಯಾದವ ಇಮ್ಮಡಿ ಸಿಂಗಣ ದೇವಗಿರಿಯಿಂದ ಅಳುತ್ತಿರುವಾಗ, ಈತನ ಪಾದಪದ್ಮೋಪ ಜೀವಿಯಾಗಿ ದಂಡನಾಯಕ ಲಕುಮಿದೇವರಸ ಸಗರನಾಡನ್ನು ಆಳುತ್ತಿದ್ದನು. "ವಿಕ್ರಮಾದಿತ್ಯನ ಕಾಲದಲ್ಲಿ ದಂಡನಾಯಕ ಸೋವರಸ

ನರಿಯಂಬೊಳೆ ಎಪ್ಪತ್ತರಲ್ಲಿ'' ಆಳ್ವಿಕೆ ಮಾಡುತ್ತಿದ್ದನು. ಈತನ ಬಿರುದುಗಳು ಶಾಸನದಲ್ಲಿ ಈ ರೀತಿಯಾಗಿ ಕಂಡುಬರುತ್ತದೆ.

> ''ಸ್ವಸ್ತಿ ಸಮಸ್ತ ಗುಣಸಂಪನ ನುಡಿದ ಮತ್ತೆಂನ ಗೋತ್ರ
> ಪವಿತ್ರ ಪರನಾರೀಪುತ್ರ ಮಚ(ಚ್ಚ) ರಿಪರಗಂಡ ವಿಷಮ
> ಹಯಾರೂಢ ಪ್ರವುಡ ರೇವಂತ ಜಯಾಂಗನೋತು (ತ್ತು)ಂಗ
> ಅಯ್ಯನಸಿಂಗ ನಾಮಾದಿ ಸಮಸ್ತ ಪ್ರಸ(ಶ)ಸ್ತಿ
> ಸಹಿತಂ ಶ್ರೀಮತ್ರಿಭುವನಮಲ್ಲ ಪಾದಾರಾಧಕಂ ಆರುವ
> ಹುಲ್ಲೆಯ ಸಾಹಣಿ ಮಂಡಳಿಕಂ ಸೋವರಸರು ॥''

ಎಂಬ ಉಲ್ಲೇಖ ಕ್ರಿ.ಶ.೧೧೦೧ರ ಕೆಲ್ಲೂರು ಶಾಸನದಿಂದ ತಿಳಿದುಬರುತ್ತದೆ. ಕಾಳಿಮರಸ, ಲೆಕ್ಕರಸ, ಈತನ ಬಿರುದುಗಳು ಶಾಸನದಲ್ಲಿ ಈ ರೀತಿಯಾಗಿ ಕಂಡುಬರುತ್ತದೆ:

> ''ಪ್ರಧಾನಂ ಸಮಸ್ತರಾಜ್ಯಭರವನಿರೂಪಿತ ಮಹಾಮಾತ್ಯ
> ಪದವಿ ವಿರಾಜಮಾನ ಮಾನೋಂನತ ಪ್ರಭು
> ಮಂತ್ರೋತ್ಸಾಹಶಕ್ತಿತ್ರಯ ಸಂಪಂನಂ ನುಡಿದು ಮತ್ತೆಂನಂ
> ಗೋತ್ರಪವಿತ್ರಂ ಪರನಾರೀಪುತ್ರಂ ನಾಮಾದಿ ಸಮಸ್ತ
> ಪ್ರಶಸ್ತಿ ಸಹಿತಂ ಶ್ರೀಮನ್ಮಹಾಪ್ರಧಾನಂ ದಣ್ಡನಾಯಕಂ
> ತಿಕ್ಕರಸರುಂ ॥''

ಎಂಬ ಉಲ್ಲೇಖ ಕ್ರಿ.ಶ. ೧೧೩೭ರ ಶಿರವಾಳ ಶಾಸನದಿಂದ ತಿಳಿದುಬರುತ್ತದೆ. ಮಲ್ಲಿನಾಥ, ಧುರಿಮಯ್ಯ, ಲಕ್ಷ್ಮಿದೇವ, ದಾಸಿಯರಸ, ಮಲ್ಲಪಯ್ಯ, ಭೋಗಿಮಯ್ಯ, ಮಲ್ಲಣಭಟ್ಟ, ಗಯಾಧರ ಹೀಗೆ ಅನೇಕ ದಂಡನಾಯಕರು ಈ ನಾಡಿನ ಕೆಂಬಾವಿ, ಅಂಕಲಗಿ, ಕಡಕಲ್ಲು, ಬೊಮ್ಮನಹಳ್ಳಿ, ಯಾತನೂರು, ಹೊತಗಲ್, ಎಡೆಯಪುರ, ಚೆನ್ನೂರು, ಹುಣಸಗಿ ಶಾಸನಗಳಲ್ಲಿ ಉಲ್ಲೇಖಗೊಂಡಿದ್ದಾರೆ. ಈ ದಂಡನಾಯಕರು ತಮ್ಮದೇ ಆದ ಬಿರುದು ಪ್ರಶಸ್ತಿಗಳನ್ನು ಪಡೆದುಕೊಂಡಿದ್ದರು.

ಭಟ್ಟೋಪಾಧ್ಯಾಯ ಆರನೇ ವಿಕ್ರಮಾದಿತ್ಯನ ಕಾಲದಲ್ಲಿ ಕಲ್ಯಾಣದ ನೆಲೆವೀಡಿನಿಂದ ಐವತ್ತರ ಬಳಿಯ ಏವಂತನೂರು ದಾನವಾಗಿ ಕೊಟ್ಟಿದ್ದು ಯಾತನೂರು ಶಾಸನದಿಂದ ತಿಳಿದುಬರುತ್ತದೆ. ಈತನ ಹಾಗೂ ಪ್ರಶಸ್ತಿಯ ಉಲ್ಲೇಖವಿದೆ. ಈತನ ತಂದೆ ಕೋವಣ

ಭಟ್ಟೋಪಾಧ್ಯಾಯ ಯಾತನೂರಿನ ಇನ್ನೊಂದು ಶಾಸನದಲ್ಲಿ ಇವರ ವಂಶಾವಳಿ ಹೀಗೆ ಉಲ್ಲೇಖಗೊಂಡಿದೆ. ಬೋಪ್ಪಣ ಭಟ್ಟೋಪಾಧ್ಯಾಯ ಕೋವಣ ಭಟ್ಟೋಪಾಧ್ಯಾಯ ಮುದ್ದಗಲ್ಲ ಭಟ್ಟೋಪಾಧ್ಯಾಯ ವಂಶಾವಳಿ ಮದುಗಲ್ಲ ಶಾಸನದಿಂದ ತಿಳಿದು ಬರುತ್ತದೆ. ಕಲ್ಯಾಣ ಚಾಲುಕ್ಯ ಆರನೇ ವಿಕ್ರಮಾದಿತ್ಯನ ದಂಡನಾಯಕ ಮಲ್ಲಣಭಟ್ಟನು ಆಗಿದ್ದನು. ಈತನ ವಂಶಾವಳಿ ಶಾಸನದಲ್ಲಿ ಈ ರೀತಿಯಾಗಿದೆ.

**ವಂಶಾವಳಿ**




ಎಂಬ ಉಲ್ಲೇಖ ಕ್ರಿ.ಶ.೧೧೮೨ರ ಹೆಮ್ಮಡಗಿ ಶಾಸನದಿಂದ ತಿಳಿದುಬರುತ್ತದೆ. ಇತರ ದಂಡನಾಯಕರೆಂದರೆ ಮಲ್ಲಿನಾಥ, ಶಂಕರಭಟೋಪಾಧ್ಯಾಯ, ಮಾದಯ್ಯ, ನಾಗವರ್ಮಯ್ಯ, ಧುರಿಮಯ್ಯ, ಭೋಗಿಮಯ್ಯ, ಲಕ್ಷ್ಮಿದೇವ, ಲಕುಮಿದೇವರಸ, ದಾಸಿಯರಸ ಹೀಗೆ ಅನೇಕ ದಂಡನಾಯಕರ ಉಲ್ಲೇಖ ಕೆಂಬಾವಿ, ಅಂಕಲಗಿ, ಕಡಕಲ್ಲು, ಬೋಮ್ಮನಹಳ್ಳಿ, ಯಾತನೂರು, ಹೋತಗಲ್, ಎಡೆಯಪುರ, ಚೆನ್ನೂರು, ಹುಣಸಗಿ ಮುಂತಾದ ಶಾಸನಗಳಲ್ಲಿ ಕಂಡುಬರುತ್ತರೆ.

## ೩.೫. ಮಂತ್ರಿ ಮಂಡಳ :

ರಾಜರು ತಮ್ಮ ವಿಶಾಲವಾದ ಸಾಮ್ರಾಜ್ಯಕ್ಕೆ ಸುವ್ಯವಸ್ಥಿತವಾದ ಆಡಳಿತವನ್ನು ಮುಂದುವರೆಸಿಕೊಂಡು ಹೋಗಲು ತಮ್ಮದೇ ಆದ ಮಂತ್ರಿ ಮಂಡಲವನ್ನು ಹೊಂದಿದ್ದರು. ಇದರ ಮಹತ್ವವನ್ನು ಕೌಟಿಲ್ಯ, ಶುಕ್ರ, ಸೋಮೇಶ್ವರ ಮುಂತಾದ ರಾಜನೀತಿಜ್ಞರು ತಮ್ಮ ಅರ್ಥ ಶಾಸ್ತ್ರದಲ್ಲಿ ಹೇಳಿದ್ದಾರೆ. ಈ ನಾಡಿನ ಶಾಸನಗಳಲ್ಲಿ ಮಂತ್ರಿಗಳ ಉಲ್ಲೇಖ ಈ ಮುಂದಿನಂತೆ ಕಂಡು ಬರುತ್ತದೆ.

### ಪ್ರಧಾನ–ಮಹಾಪ್ರಧಾನರು :

ಇವರು ರಾಜನಿಗೆ ಆಪ್ತರಾಗಿದ್ದರು. ಮಹಾಪ್ರಧಾನ ರವಿಯಣಭಟ್ಟ, ಶ್ರೀಮನ್ಮಹಾಪ್ರಧಾನ ಲಕ್ಷ್ಮಣಯ್ಯ, ಶ್ರೀಮನ್ಮಮಹಾಪ್ರಧಾನ ಭೋಗರಸ, ಧುರಿಮಯ್ಯ, ಗಯಾಧರ, ಬಮ್ಮಿದೇವರಸ, ಆಹವಮಲ್ಲರಸ, ಪಾರಿಸಸೆಟ್ಟಿ, ಆದಿತ್ಯ ಭಟ್ಟಯ್ಯ, ಕಾಳಿಮರಸ ಚಿದ್ದರಸ, ಹಾಗೂ ಪ್ರಧಾನ ಕಂಚರಸರ ಉಲ್ಲೇಖ ಏವೂರು, ಮುದನೂರು, ಎಮ್ಮಡಗಿ ಯಡ್ರಾಮಿ, ಸಂಗಮ, ಮಲ್ಲಾಬಾದ ಹೀಗೆ ಅನೇಕ ಶಾಸನಗಳಲ್ಲಿ ಇವರು ಕಂಡುಬರುತ್ತಾರೆ. ಇವರ ಹೆಸರು ಶಾಸನಗಳಲ್ಲಿ ಉಲ್ಲೇಖಗೊಂಡರು, ಇವರು ನಿರ್ವಹಿಸುತ್ತಿದ್ದ ಕೆಲಸಗಳ ಬಗ್ಗೆ ಸ್ಪಷ್ಟ ಮಾಹಿತಿ ತಿಳಿದುಬಂದಿಲ್ಲ.

ಪ್ರಧಾನ ಎನ್ನುವ ಶಬ್ದಕ್ಕೆ ಮಹಾ ಎಂಬ ವಿಶೇಷಣ ಸೇರಿ ಮಹಾಪ್ರಧಾನವಾಗಿದೆ. ಡಿ.ಸಿ.ಸರಕಾರ ಅವರು ಮಹಾಪ್ರಧಾನ ಶಬ್ದಕ್ಕೆ ಪ್ರಧಾನಮಂತ್ರಿ, ಮುಖ್ಯಮಂತ್ರಿ, ಸೈನ್ಯದ ಅಧಿಕಾರಿ ಎಂದು ಅರ್ಥೈಸಿದ್ದಾರೆ. ಆದರೆ ಶಾಸನಗಳಲ್ಲಿ ಮಹಾಮಂಡಳೇಶ್ವರ, ಮಹಾಸಾಮಂತ, ದಂಡನಾಯಕರಿಗೂ ಮಹಾಪ್ರಧಾನ ಎಂಬ ಶಬ್ದ ಬಳಸಲಾಗಿದೆ. ಹೀಗಾಗಿ ಇದು ಹುದ್ದೆ ಎನ್ನದೇ ಪ್ರಮುಖ ವ್ಯಕ್ತಿ ಹಾಗೂ ಗೌರವವನ್ನು ಸೂಚಿಸುತ್ತದೆ ಎಂದು ಹೇಳಬಹುದು.

### ಸಂಧಿವಿಗ್ರಹಿ (ಹೇರಿಲಾಳ/ ಕನ್ನಡ ಸಂಧಿವಿಗ್ರಹಿ) :

ಸಂಧಿವಿಗ್ರಹಿ ಎಂದರೆ ಯುದ್ಧ ಮತ್ತು ಒಪ್ಪಂದ ಮಾಡಿಕೊಳ್ಳುವವನು. ಆಧುನಿಕ ಕಾಲದ ವಿದೇಶಾಂಗ ಮಂತ್ರಿಯಾಗಿದ್ದನು. ಸಗರ ನಾಡಿನ ಶಾಸನಗಳಲ್ಲಿ ಈ ಮಂತ್ರಿಗಳ ಉಲ್ಲೇಖವಿದೆ. "ಸಂಧಿವಿಗ್ರಹಿ ಅಧಿಸೆಟ್ಟಿ"[೫೫] "ಸಂಧಿವಿಗ್ರಹಿ ಒಡೆಯಮ ಸೆಟ್ಟಿ"[೫೬]

"ಮಹಾಮಂಡಳೇಶ್ವರ ವೀರುಪದೇವರಸನ ಸಂಧಿವಿಗ್ರಹಿ ಕಾಮರಸ"[೫೬] ಈ ಸಂಧಿವಿಗ್ರಹಿಗಳಿಗೆ ಹೊಂದಿಕೊಂಡು ಬಂದಿರುವ ಇನ್ನೊಂದು ಪದ ಹೇರಿಲಾಳ/ ಕನ್ನಡ ಸಂಧಿವಿಗ್ರಹಿಗಳು. ಹೇರಿಲಾಳ "ಲಾಳವೆಂಬುದು ಲಾಟ ಎಂಬುದರ ತದ್ಭವವೆಂದು ಗ್ರಹಿಸಿದ್ದಾರೆ. ಲಾಟ ಎಂಬುದು ದೇಶಗಳೊಂದಿಗೆ ಯುದ್ಧ, ಒಪ್ಪಂದ ನೋಡಿಕೊಳ್ಳುವ ಅಧಿಕಾರಿ."[೫೮] ಶಾಸನಗಳಲ್ಲಿ ಯುದ್ಧ, ಒಪ್ಪಂದಗಳ ಅಧಿಕಾರಕ್ಕೆ ಸಂಬಂಧಪಟ್ಟಂತೆ ಈ ಲಾಳಸಂಧಿವಿಗ್ರಹ ಎಂಬ ಪದ ಪದೇ ಪದೇ ಬಳಕೆಯಲ್ಲಿ ಬಂದಿದೆ. ಈ ಪದವನ್ನು ಸೂಕ್ಷ್ಮವಾಗಿ ಗಮನಿಸಿದರೆ, ಲಾಟ>ಲಾಳ ದಂತೆ ನಾಡ>ಲಾಳ ಎಂಬ ವ್ಯತ್ಯಾಸ ಉಂಟು ಮಾಡುತ್ತದೆ. ಹೀಗಾಗಿ ಶಾಸನಗಳಲ್ಲಿ ಹೆಚ್ಚು ಬಳಕೆಯಾಗಿರುವ ಪದವಾಗಿದ್ದರಿಂದ ಲಾಳ ಎಂದರೆ ನಾಡ ಎಂಬ ಅರ್ಥವನ್ನು ಊಹಿಸಿಕೊಳ್ಳಬಹುದು. ಹೇರಿಲಾಳ ಕನ್ನಡ ಸಂಧಿವಿಗ್ರಹಿ ಎಂಬ ಪದ ಶಾಸನಗಳಲ್ಲಿ ಅನೇಕ ಕಡೆ ಬಂದಿದೆ. "ಹೇರಿ ಎಂಬುದು ಹಿರಿಯ ಎಂಬುದರ ರೂಪಾಂತರವಾಗಿದ್ದಂತೆ ಕಾಣುತ್ತದೆ" ಹಿರಿಯ ಸಂಸ್ಕೃತದ ಮಹಾ ಎನ್ನುವುದರ ಕನ್ನಡ ರೂಪಾಂತರವಾಗಿದೆ. ಈ ಸಂದಿವಿಗ್ರಹಿಗಳು ಬಹುಶಃ ಲಾಟ ಹಾಗೂ ಕರ್ನಾಟಕ ಪ್ರದೇಶಗಳನ್ನು ನೋಡಿಕೊಳ್ಳುತ್ತಿದ್ದಂತೆ ಕಾಣುತ್ತದೆ. "ಲಾಳ ಲಾಳ ಸಂಧಿ ವಿಗ್ರಹಿಯಾಗಿದ್ದ ರವಿದೇವನ ಉಲ್ಲೇಖ ಏವೂರು ಶಾಸನದಲ್ಲಿ ಈ ರೀತಿ ವರ್ಣನೆ ಮಾಡಲಾಗಿದೆ. "ಇಂತೆನೆ ಮೂರುಂ ರಾಜ್ಯದೊಳನ್ತಾನೆ ಚಳುಕ್ಯ ನೃಪರ್ಗ್ಗೆ ಕಯ್ಗನ್ನಡಿಯಾದಂ ತನ್ನ ಗುಣದಿನಾ"[೫೯] ಈತ ಕಲ್ಯಾಣ ಚಾಲುಕ್ಯ ಒಂದನೇ ಸೋಮೇಶ್ವರ, ಎರಡನೇ ಸೋಮೇಶ್ವರ ಹಾಗೂ ಆರನೇ ವಿಕ್ರಮಾದಿತ್ಯನ ಕಾಲದವರೆಗೂ ಆಳಿದ ರಾಜ್ಯಗಳನ್ನು ಸೂಚಿಸುತ್ತವೆ. ಇವರಿಂದ ಹೆಚ್ಚು ಹೆಚ್ಚು ಅಧಿಕಾರ ಪಡೆದು ಉನ್ನತ ಹುದ್ದೆ ಏರಿದವನು ರವಿದೇವ. ಕಲ್ಯಾಣ ರಾಜ್ಯದ ಅಭ್ಯುದಯಕ್ಕೆ ಕಾರಣನಾಗಿದ್ದ. ಬಹಳ ಪ್ರಭಾವ ಶಾಲಿ ವ್ಯಕ್ತಿಯಾಗಿದ್ದನು. ಕನ್ನಡ ಸಂಧಿವಿಗ್ರಹಿ ಬಮ್ಮದೇವರಸ" ಹಾಗೂ ಬಮ್ಮಣಯ್ಯರ ಉಲ್ಲೇಖ ಕುಳಗೇರಿ ಶಾಸನಗಳಲ್ಲಿ ಉಲ್ಲೇಖಗೊಂಡಿದೆ.

ಈ ಅಧಿಕಾರಿಗಳ ಪ್ರಮುಖ ಕರ್ತವ್ಯ ಎಂದರೆ ಹೊರನಾಡು ಹಾಗೂ ಒಳನಾಡಿನ ವಿಷಯವನ್ನು ನೋಡಿಕೊಳ್ಳುವುದು. ಯುದ್ಧ–ಒಪ್ಪಂದಕ್ಕೆ ಸಂಬಂಧಿಸಿದ ದಾಖಲೆಗಳ ಪತ್ರಗಳನ್ನು ಸಂರಕ್ಷಣೆ ಮಾಡುವುದು. ಶಾಸನ ಪಾಠವನ್ನು ಸಿದ್ಧ ಪಡಿಸುವುದು. ಹೀಗೆ ಸಂಧಿವಿಗ್ರಹಿ ವಿದೇಶಾಂಗ ವ್ಯವಹಾರದ ಜೊತೆಗೆ ದಾನ ಪತ್ರಗಳ ಮೇಲ್ವಿಚಾರಣೆಯನ್ನು ನೋಡಿಕೊಳ್ಳುತ್ತಿದ್ದನು. ಪ್ರತಿಯೊಬ್ಬ ರಾಜನ ರಾಜ್ಯದಲ್ಲಿ ಅನೇಕ ಜನ ಸಂಧಿವಿಗ್ರಹಿಗಳಿರುತ್ತಿದ್ದು

ಅವರಿಗೆ ಮಹಾಸಂಧಿ ವಿಗ್ರಹಿಯು ಮುಖ್ಯಸ್ಥನಾಗಿರುವಂತೆ ಕಾಣುತ್ತದೆ. ಮಹಾಪ್ರಧಾನರೂ, ಮಹಾದಂಡನಾಯಕರೂ ಕೂಡ ಸಂಧಿವಿಗ್ರಹಿಗಳಾಗಿರುತ್ತಿದ್ದರು.

## ಸುಂಕದ ಅಧಿಕಾರಿಗಳು :

ಹೆರ್ಜ್ಜುಂಕ, ಪೆರ್ಜ್ಜುಂಕ, ಹೆಗ್ಗಡೆ, ಪೆರ್ಗ್ಗಡೆ, ಸುಂಕವೆರ್ಜ್ಜುಂಕ ಎಂಬ ಮುಂತಾದ ಹುದ್ದೆಗಳು ಸುಂಕಕ್ಕೆ ಸಂಬಂಧಸಿವೆ. ಅಧಿಕಾರಿಗಳ ಉಲ್ಲೇಖ ಈ ನಾಡಿನ ಶಾಸನಗಳಲ್ಲಿ ಕಂಡುಬರುತ್ತದೆ. ''ಪೆರ್+ಸುಂಕ=ಪೆಂರ್ಜುಂಕ, ಇದುವೆ ಹೆಚ್ಚುಂಕ ಎಂದಾಗಿದೆ. ಹೆರ್+ಸುಂಕ=ಹೆರ್ಜುಂಕ''[೬೦] ಈ ಅಧಿಕಾರಿಗಳು ಸುಂಕವನ್ನು ವಸೂಲಿ ಮಾಡಿ ರಾಜನಿಗೆ ಒಪ್ಪಿಸುತ್ತಿದ್ದರು. ''ಸಗರ ಐದನೂರು ಬಾಡದ ಹೆರ್ಜ್ಜುಂಕ ವೆರ್ಗ್ಗಂಡೆ ಕಂಚರಸ''[೬೧] ''ಮಹಾಪ್ರಧಾನಂ ಸುಂಕವೆರ್ಗ್ಗಡೆ ಗಯಾಧರ ಹಾಗೂ ಸಗರ ಐದನೂರು ಬಾಡದ ಪೆರ್ಜ್ಜುಂಕದ ಸುಂಕ ವೆರ್ಗ್ಗಡೆ ಮಾದೆಯನಾಯಕ ಮತ್ತು ನಾಗೆಯ ನಾಯಕ''[೬೨] ಎಂಬ ಉಲ್ಲೇಖವಿದೆ. ಇತರ ಅಧಿಕಾರಿಗಳಾದ ಕಡಿತವೆರ್ಗ್ಗಡೆ ಕಾಳಿಮರಸ, ಚಿದ್ದರಸ, ಹೆಗ್ಗಡೆ ಕಾವರಾಜಯ್ಯ ಎಡದೊರೆ ಎರಡು ಸಾವಿರನ್ನು ಆಳುತ್ತಿದ್ದನು. ಹೆಗ್ಗಡೆ ಮಲ್ಲಿದೇವರಸ, ಹೆಗ್ಗಡೆ ಚೌಡಣ, ಹೆಗ್ಗಡೆ ಕೊಪ್ಪರಸ, ಪೆರ್ಗ್ಗಡೆ ಲಕ್ಷ್ಮಣದೇವರಸ, ಪೆರ್ಗ್ಗಡೆ ಕೇತಯ್ಯ, ಪೆರ್ಗ್ಗಡೆ ಮಾರಯ್ಯ ಹೀಗೆ ಅನೇಕ ಸುಂಕ ಅಧಿಕಾರಿಗಳ ಉಲ್ಲೇಖ ಶಾಸನದಲ್ಲಿವೆ. ಕೆಲ ಅಧಿಕಾರಿಗಳು ಒಂದೇ ಸುಂಕವನ್ನು ವಸೂಲಿ ಮಾಡುವ ಅಧಿಕಾರಿಯಾಗಿದ್ದರೆ, ಮತ್ತೆ ಕೆಲವರು ಒಂದಕ್ಕಿಂತ ಹೆಚ್ಚು ಸುಂಕವನ್ನು ವಸೂಲಿ ಮಾಡುವ ಅಧಿಕಾರಿಯಾಗಿದ್ದಾರೆ. ಇತರ ಸುಂಕಗಳೆಂದರೆ ಮುದ್ರಾವಣದ ಸುಂಕ, ಕೀಳ್ವಟ್ಟೆಯ ಸುಂಕ, ವಡ್ಡರಾವುಳ, ದವಸಾಯ, ಪನ್ನಾಯ, ಅಚ್ಚು ಪನ್ನಾಯ, ಬಿಲ್ಕೊಡೆ ಮುಂತಾದ ಸುಂಕಗಳು ಹಾಗೂ ಸುಂಕಾಧಿಕಾರಿಗಳ ಉಲ್ಲೇಖ ಈ ನಾಡಿನ ಶಾಸನಗಳಿಂದ ತಿಳಿದು ಬರುತ್ತದೆ.

## ಶ್ರೀ ಕರಣ :

ಶ್ರೀಕರಣ ಎಂದರೆ ದಾಖಲೆಗಳ ಲೇಖಕ ಅಥವಾ ದಾಖಲಾಧಿಕಾರಿಗಳಾಗಿದ್ದರು. ಇತರ ಖಾತೆಗಳೊಂದಿಗೆ, ಈ ಖಾತೆಯನ್ನು ನಿರ್ವಹಿಸುತ್ತಿದ್ದರು. ಶ್ರೀಕರಣರ ಉಲ್ಲೇಖ ಶಾಸನದಲ್ಲಿ ಈ ರೀತಿ ಕಂಡುಬರುತ್ತದೆ. ''ಶ್ರೀಕರಣ ದಂಡನಾಯಕ ಭೋಗಸರ''[೬೩] ''ಶ್ರೀಕರಣ ವೈಜಯ್ಯ''[೬೪] ''ಶ್ರೀಕರಣ ದಂಡನಾಯಕ ಸೋವರಸ''[೬೫] ಶ್ರೀಕರಣ ದಂಡನಾಯಕ

ಧುರಿಮಯ್ಯಾ ಶ್ರೀಕರಣ ಬಮ್ಮರಸರ ಉಲ್ಲೇಖವಿದೆ. ಇವರೆಲ್ಲ ಸಗರನಾಡಿನ ಶ್ರೀಕರಣಗಳಾಗಿದ್ದರು.

## ಪಸಾಯಿತ :

ಪಸಾಯಿತ ಎಂದರೆ ರಾಜನ ಆಪ್ತ ಸಚಿವ. "ಸಂಧಿವಿಗ್ರಹಿ ಪಸಾಯ ಮನಡಸರ್ಗ್ಗೆವಳಂ ದಂಡನಾಯಕ ಬಮ್ಮದೇವ"[೬೬] "ಭೀಲ್ಲಮದೇವರ ಮಹಾಪಸಾಯಿತಂ ಅಧಿಕಾರಿ ಪಯ್ಯನಾಯಕ"[೬೭] ಪಸಾಯಿತರಾಗಿದ್ದರು. ಇವರ ಪ್ರಮುಖ ಸೇವೆ ರಾಜ ಪರಿವಾರಕ್ಕೆ ಬಟ್ಟೆ, ಆಭರಣ ಮುಂತಾದ ದಾಸ್ತಾನುಗಳನ್ನು ಒದಗಿಸುವುದಾಗಿತ್ತು.

## ಇತರ ಅಧಿಕಾರಿಗಳು :

ಸಗರ ನಾಡಿನ ಶಾಸನಗಳಲ್ಲಿ ಇತರ ಅಧಿಕಾರಿಗಳ ಉಲ್ಲೇಖ ಈ ರೀತಿಯಾಗಿವೆ. "ಕುರಿತುರಗ ಪಟ್ಟಸಾಹಣಾಧಿಪತಿ" ಅಂದರೆ ರಾಜನ ಆನೆ, ಕುದುರೆಗಳ ಮೇಲಾಧಿಕಾರಿಯಾಗಿದ್ದನು. ಬಮ್ಮಿದೇವರಸ ಸಾಹಣಾಧಿಪತಿಯಾಗಿದ್ದನು. 'ಭಂಡಾರಿಗ' ಎಂಬುದು ಅರಳಗುಂಡಗಿ ಶಾಸನದಲ್ಲಿ ಉಲ್ಲೇಖವಿದೆ. ಭಂಡಾರಿಗ ಎಂದರೆ ರಾಜನ ಬೊಕ್ಕಸದ ಅಧಿಕಾರಿ ಭಣ್ಡಾರಿಗಂ ಎಂಬ ಏಕೈಕ ತ್ರುಟಿತ ಶಾಸನ ಅರಳಗುಂಡಗಿಯಲ್ಲಿದೆ. 'ರಾಯಬಾರಿ'ಗಳು ರಾಜ್ಯದಲ್ಲಿ ಕಂಡುಬರುತ್ತಾರೆ. "ಮಹಾಮಂಡಳೇಶ್ವರ ಚಂಮಡಿಗ ದೇವರಸರಿಗೆ ಅಚಯ್ಯನೆಂಬ ರಾಯಭಾರಿ"[೬೮] ಇದ್ದನು. ಬಹುಃಶ ಈತ ಮಹಾಮಂಡಳೇಶ್ವರ ಮತ್ತು ರಾಜರ ನಡುವೆ ಮಧ್ಯಸ್ಥಿಕೆ ವಹಿಸುತ್ತಿರಬಹುದು.

ಇಲ್ಲಿಯವರೆಗೆ ತಿಳಿಸಲಾದ ಅಧಿಕಾರಿಗಳಲ್ಲದೆ ಇನ್ನಿತರ ಅಧಿಕಾರಿಗಳ ಉಲ್ಲೇಖ ಈ ನಾಡಿನ ಶಾಸನಗಳಲ್ಲಿವೆ. "ಕೀಳ್ವಾಳ (ಕೆಳದರ್ಜೆ ಅಧಿಕಾರಿ) ಸೋಮಯ್ಯ ನಾಯಕ"[೬೯] ರಾಷ್ಟ್ರಪತಿ, ವಿಷಯಪತಿ, ಗ್ರಾಮಕೂಟ ಆಯುಕ್ತಕ, "ನಿಯುಕ್ತಾಧಿಕಾರಿ, ಮಹತ್ತರಾಧಿಕಾರಿ"[೭೦] "ಮೆಕ್ಕಗಾಮುಂಡರು, ಮೂಲಿಗರು, ಬೀರವಣಿಗ"[೭೧] ಪೆರ್ಗ್ಗಡೆಕರಣ. ಪೆರ್ಗಡೆಕರನವಧ್ಯಕ್ಷ, ವೆಕ್ಕಡಿಗರು, ಅಚ್ಚು ಪನ್ಯಾಯದಧಿಷ್ಠಾಯಕ ಈ ರೀತಿ ಅನೇಕ ಅಧಿಕಾರಿಗಳ ಉಲ್ಲೇಖವಿದೆ.

## ಪ್ರಾಂತೀಯ ಆಡಳಿತ :

ಪ್ರಾಚೀನ ಕಾಲದಿಂದ ಆಡಳಿತ ಸುಗಮವಾಗಿ ಸಾಗಲು ರಾಜ್ಯವನ್ನು ಪ್ರಾಂತ್ಯಗಳಾಗಿ ವಿಭಾಗಿಸಲಾಗುತ್ತಿತ್ತು. ಪ್ರಾಂತ್ಯದಲ್ಲಿನ ಅಧಿಕಾರಿಗಳನ್ನು ಪ್ರಾಂತ್ಯಾಧಿಕಾರಿ ಹಾಗೂ ಪ್ರಭುಗಳು, ಪ್ರಭುಗಾವುಂಡರುಗಳು ಎಂದು ಕರೆಯುಲಾಗುತ್ತಿತ್ತು. ಇವರನ್ನು ರಾಜನೇ ನೇಮಕ ಮಾಡುತ್ತಿದ್ದನು. ಅರ್ಹತೆ, ನಿಷ್ಠೆ, ಸೇವಾ ಮನೋಭಾವ ಹಾಗೂ ಹಿರಿತನ ಇವುಗಳ ಆಧಾರದ ಮೇಲೆ ನೇಮಸಲಾಗುತ್ತಿತ್ತು. ನೇಮಕರಾದ ಪ್ರಭುಗಳು ರಾಜನಿಗೆ ನಿಷ್ಠರಾಗಿ, ವಿಧೇಯರಾಗಿ ಆಡಳಿತ ಮಾಡುತ್ತಿದ್ದರು.

ಶಾಸನಗಳಲ್ಲಿ ಇವರನ್ನು ಪ್ರಭುಗಾವುಂಡರು ಎಂಬ ಉಲ್ಲೇಖವಿದೆ. ಈ ಪ್ರಭುಗಾವುಂಡರ ಬಗ್ಗೆ ಅನೇಕ ಇತಿಹಾಸಕಾರರು ತಮ್ಮದೇ ಆದ ಅಭಿಪ್ರಾಯಗಳನ್ನು ಮಂಡಿಸಿದ್ದಾರೆ. ಡಾ.ಜಿ.ಎಸ್.ದೀಕ್ಷಿತ ಹಾಗೂ ಡಾ,ಚಿದಾನಂದಮೂರ್ತಿ ಅವರು ಗ್ರಾಮದ ಗಾವುಂಡನನ್ನೇ ಪ್ರಭುಗಾವುಂಡನೆಂದು ಕರೆದಿದ್ದಾರೆ. ನಾಡಿನ ಆಯಾ ಊರಿಗೆ ಮುಖ್ಯಸ್ಥನಾಗಿದ್ದನು. ಆದರೆ ಗಾವುಂಡರಿಗಿಂತ ಪ್ರಭುಗಳು ಭಿನ್ನರಾಗಿದ್ದಾರೆ. ಗಾವುಂಡನಿಗಿಂತ ಪ್ರಭುವಿನ ಸ್ಥಾನ ಹೆಚ್ಚಿನದಾಗಿದೆ. ಇವರು ಸಾಮಂತರ ಕೈಕೆಳಗಿನವರಾಗಿದ್ದಾರೆ. ಇವರು ತಮ್ಮ ತಮ್ಮ ಪ್ರಾಂತ್ಯಗಳಲ್ಲಿ ಆಳ್ವಿಕೆ ಮಾಡಿದ್ದು ಈ ನಾಡಿನ ಶಾಸನಗಳಿಂದ ತಿಳಿದು ಬರುತ್ತದೆ. "ಮಹಾಪ್ರಭು ಬಿಸಣಿ ಹನುಮಂತ"[೬೨], "ಮಹಾಪ್ರಭು ಬಂಮೊರಸ"[೬೩], "ಪ್ರಭು ಮಾಚರಸ"[೬೪], ಸಗರದ ಪ್ರಭು ಮಾದೆಯನಾಯಕ, ಪ್ರಭು ಸೌಧೊರೆ ಭಾವರಸ, ಮಹಾಪ್ರಭು ರವಿದೇವ, ಏವೂರ ಮಹಾಪ್ರಭು ತ್ರಿಪುರಾಂತಕ ದೇವರಸ ಹೀಗೆ ಅನೇಕ ಪ್ರಭುಗಳ ಉಲ್ಲೇಖ ಈ ನಾಡಿನ ಶಾಸನಗಳಲ್ಲಿ ಕಂಡು ಬರುತ್ತದೆ.

## ಗಾವುಂಡರು :

ಆಡಳಿತದ ಕೊನೆ ಘಟ್ಟವೇ ಗ್ರಾಮ. ಗ್ರಾಮದ ಆಡಳಿತವನ್ನು ಗಾವುಂಡ ಎಂಬ ಅಧಿಕಾರಿ ನೋಡಿಕೊಳ್ಳುತ್ತಿದ್ದನು. ಈ ಗಾಂವುಂಡರು ಒಂದು ಗ್ರಾಮದಲ್ಲಿ ಒಬ್ಬನೇ ಕಾರ್ಯ ನಿರ್ವಹಿಸಿದರೆ, ಇನ್ನು ಕೆಲ ಊರುಗಳಲ್ಲಿ ಹೆಚ್ಚು ಗಾವುಂಡರು ಇದದ್ದು ಕಂಡುಬರುತ್ತದೆ. ಇದನ್ನು ಗಮನಿಸಿದಾಗ ಬಹುಃಶ ಗಾವುಂಡರು ಮೂಲತಃ ಒಂದೇ ವಂಶಕ್ಕೆ ಸಂಬಂಧಿಸಿದ ಸಂಬಂಧಿಗಳಾಗಿರಬೇಕು. ಒಂದು ಊರಲ್ಲಿ ಅನೇಕ ಗಾವುಂಡರಿದ್ದರೂ, ಅವರೆಲ್ಲರ ಮೇಲೆ ಒಬ್ಬನೆ ಗಾವುಂಡನಿರುತ್ತಿದ್ದನು. ಎಲ್ಲ ಅಧಿಕಾರ ಈತನ ನಿಯಂತ್ರಣದಲ್ಲಿರುತ್ತಿತ್ತು.

ಗಾವುಂಡಗಳು ಗ್ರಾಮವನ್ನು ಆಳುತ್ತಿದ್ದರು. ಅವರು ಊರೊಡೆಯರೂ ಆಗಿದ್ದರು. ಅನೇಕ ಶಾಸನಗಳು ಇವರನ್ನು ಹೊಗಳಿವೆ. ಗುಣಾಗ್ರಣಿ, ಧರ್ಮಪ್ರತಿಪಾಳನರು, ಶೂರರೂ, ದಾನಿಗಳು ಆಗಿದ್ದರು. ಊರಿನಲ್ಲಿ ಯಾವುದೇ ಸಾರ್ವಜನಿಕ ಕ್ರಿಯೆ ನಡೆದರೂ ಅದು ಇವರ ಸಮ್ಮುಖದಲ್ಲಿ ನಡೆಯುತ್ತಿತು. ಶಾಸನಗಳಲ್ಲಿ ಇವರನ್ನು ಗಾಮುಣ್ಡರು, ಗಾವುಂಡ, ಗಾವುಡ, ಗವುಡ, ಗೌಡ ಎಂದು ಕೆರೆದಿದ್ದಾರೆ. ಇವರನ್ನು "ಗಾಮುಣ್ಡು"[೬೫], "ಊರೊಡೆಯ ಗಾಮುಣ್ಡುರು"[೬೬], "ನಗರ ಮುಖಮಣ್ಡನ"[೬೭], (ಮುಖಣ್ಡ-ಮುಖಂಡ) "ಹೊರನಾಯಕ ಗಾವುಂಡ"[೬೮], "ಗಾವುಂಣ್ಡ ಸ್ವಾಮಿಗಳುಂ"[೬೯], "ಆಚಗೌಂಡ, ಚೆಂನಗೌಡ, ವಾಜಗೌಡ"[೭೦] ಎಂಬ ಮುಂತಾದ ಉಲ್ಲೇಖಗಳು ಈ ನಾಡಿನ ಶಾಸನದಲ್ಲಿ ಕಂಡು ಬರುತ್ತವೆ. ಈ ಗಾವುಂಡರು ಊರಿನ ಆಡಳಿತದೊಂದಿಗೆ ದಾನ ಕಾರ್ಯಗಳನ್ನು ಕೈಗೊಳಗ್ಳುತ್ತಿದ್ದರು. ಇದರಿಂದ ಗಾವುಂಡರ ಮೇಲೆ ಊರಿನ ಜನ ವಿಶ್ವಾಸವಿಟ್ಟದ್ದರು.

## ಸೇನಬೋವರು :

ಗ್ರಾಮಗಳ ಲೆಕ್ಕ ಪತ್ರ ಬರೆಯುವವರು ಸೇನಬೋವರಾಗಿದ್ದರು. ಇವರು ಗಾವುಂಡಗಳ ಕೈಕೆಗಳಗಿನ ಅಧಿಕಾರಿಗಳಾಗಿದ್ದರು. ಈ ಸೇನಬೋವರನ್ನೆ ಇಂದು ಹಳ್ಳಿಗಳಲ್ಲಿ ಶ್ಯಾನಭೋಗರೆಂದು ಕರೆಯುತ್ತಾರೆ. ಇವರು ವಿದ್ಯಾವಂತರಾಗಿದ್ದರು. ಊರಿನ ಲೆಕ್ಕಪತ್ರಗಳನ್ನು ನೋಡಿಕೊಳ್ಳುತ್ತಿದ್ದರು. ಕುಲಕರಣಿ ಎಂಬುದು ಕೂಡ ಸೇನಭೋವರ ಇನ್ನೊಂದು ಹೆಸರು. ಇವರು ಊರಿನ ಎಲ್ಲ ಚಟುವಟಿಕೆಗಳಲ್ಲಿ ಪಾಲ್ಗೊಳ್ಳುತ್ತಿದ್ದರು. ಈ ನಾಡಿನ ಶಾಸನಗಳಲ್ಲಿ ಸೇನಭೋವರ ಉಲ್ಲೇಖ ಈ ರೀತಿ ಕಂಡುಬರುತ್ತದೆ. "ಹಗರಟಿಗಿಯ ಸೇನಭೋವ ಸಿರಿವಣ್ಣ"[೭೧], "ಕುಳಗೇರಿಯ ಕುಳಕರಣಿ ಸೇನಬೋವರು"[೭೨] ಇಲ್ಲಿನ ನಾಗೇಶ್ವರ ದೇವರಿಗೆ ದಾನ ಕೊಟ್ಟಿದು ತಿಳಿದು ಬರುತ್ತದೆ. ಸಗರ ನಾಡೊಳಗೆ "ಸಿರಿವಳಲ ಗ್ರಾಮದಲ್ಲಿ ಸೇನಭೋಗ ನಾಗಿಯರು"[೭೩] ಇಲ್ಲಿನ ಹನುಮಂತ ದೇವಾಲಯಕ್ಕೆ ದಾನ ಕೊಟ್ಟಿದ್ದರು. ಹೀಗೆ ಇವರು ಗ್ರಾಮದ ಲೆಕ್ಕಪತ್ರಗಳನ್ನು ನೋಡಿಕೊಳ್ಳುವುದರ ಜೊತೆಗೆ ದಾನ-ದತ್ತಿಗಳನ್ನು ಕೊಟ್ಟಿದ್ದು ಶಾಸನಗಳಿಂದ ತಿಳಿದುಬರುತ್ತದೆ.

## ೩.೭. ಆಡಳಿತದ ವಿಭಾಗಗಳು :

ಒಂದು ರಾಜ್ಯ ಸುಗಮವಾಗಿ ಸಾಗಬೇಕಾದರೆ, ಪ್ರಾಂತ್ಯಗಳು, ಜಿಲ್ಲೆಗಳು, ಗ್ರಾಮಗಳು ಹೇಗೆ ಕೂಡಿರುತ್ತವೆಯೋ, ಹಾಗೆ ಇವುಗಳ ಆಡಳಿತ ನೋಡಿಕೊಳ್ಳಲು ವಿಭಾಗಗಳನ್ನಾಗಿ ಮಾಡಿ, ಆಳ್ವಿಕೆ ಮಾಡುವುದು ಪ್ರಾಚೀನ ಕಾಲದಿಂದಲೂ ಬೆಳೆದು ಬಂದ ಪದ್ಧತಿಯಾಗಿದೆ. ಸಗರನಾಡಿನಲ್ಲಿ ಶಾಸನ್ತೋಕ ರಾಜಕೀಯ ಆಡಳಿತದ ವಿಭಾಗಗಳು ಈ ರೀತಿಯಾಗಿ ಕಂಡುಬರುತ್ತವೆ.

## ಸಗರನಾಡು (ಮುನ್ನೂರು/ ಐನೂರು) :

ರಾಷ್ಟ್ರಕೂಟರ ಕಾಲದಿಂದಲೂ ಕೃಷ್ಣಾ-ಭೀಮಾ ನದಿಗಳ ಮಡಿಲಲ್ಲಿ ಬರುವ ಪ್ರದೇಶಕ್ಕೆ 'ಸಗರ ನಾಡು' ಎಂದು ಕರೆಯಲಾಗುತ್ತಿತ್ತು. ಸಾವಿರ ವರ್ಷಗಳಿಂದ ಇತಿಹಾಸ ಪ್ರಸಿದ್ಧವಾದ ನಾಡಾಗಿದೆ. ಸುರಪುರ, ಶಹಾಪುರ ಹಾಗೂ ಜೇವರ್ಗಿ ತಾಲೂಕುಗಳನ್ನು ಒಳಗೊಂಡ ನಾಡೇ ಸಗರನಾಡು. ಕ್ರಿ.ಶ.೯೭೮ರ ವರೆಗೂ ಸಗರನಾಡು ಇತ್ತು. ಮುಂದೆ ಇದು ಕ್ರಿ.ಶ.೯೭೭ ರಿಂದ ೧೧೦೬ ರವರೆಗೆ ಮುನ್ನೂರು ಹಳ್ಳಿಗಳ ವಿಭಾಗವಾಗಿದ್ದರಿಂದ ಸಗರ ಮುನ್ನೂರು ಎಂದು ಪ್ರಸಿದ್ಧಿ ಪಡೆಯಿತು. ಸಗರನಾಡು ಎಂಬ ಉಲ್ಲೇಖ ಏವೂರು, ಕಚಕನೂರು, ಅಣಬಿ, ಬಿಜಾಪುರ, ಹೆಮ್ಮಡಗಿ, ಎಡೆಯಪುರ, ಶಿರವಾಳ, ಗೋಗಿ ಹೀಗೆ ಮುಂತಾದ ಶಾಸನಗಳಲ್ಲಿ ಇದರ ಉಲ್ಲೇಖ ಕಂಡು ಬರುತ್ತದೆ. ಕಲಬುರ್ಗಿ ಜಿಲ್ಲೆಯಲ್ಲಿ ಹರಿಯುವ ಕೃಷ್ಣಾ-ಭೀಮಾ ನದಿಗಳ ಮಧ್ಯದಲ್ಲಿರುವ ಈ ಸೀಮೆಗೆ 'ಸಗರನಾಡು' ಎನ್ನುವ ರೂಢಿ ಈ ನಾಡಿನ ಪ್ರತಿ ಹಳ್ಳಿ-ಹಳ್ಳಿಯಲ್ಲಿಯೂ ಮೂಡಿ ಬಂದಿದೆ.

ಸಗರ ನಾಡಿನ ಶಾಸನಗಳ ಪ್ರಕಾರ ರಾಷ್ಟ್ರಕೂಟರ ಕಾಲದಿಂದ ಕಲ್ಯಾಣ ಚಾಲುಕ್ಯರವರೆಗೂ ಸಗರ ಮುನ್ನೂರು ಇತ್ತು. ಇದು ಮುಂದೆ ಕಲ್ಯಾಣ ಚಾಲುಕ್ಯ ಎರಡನೇ ಜಗದೇಕಮಲ್ಲನ ಕಾಲದಲ್ಲಿ ಸಗರ ಐದನೂರು ಎಂದು ಇದರ ವ್ಯಾಪ್ತಿ ಹೆಚ್ಚಿತು. "ರಾಷ್ಟ್ರಕೂಟ ಹಿರಣ್ಯ ವರ್ಷದೇವನು (ಎಡೆದೊರೆ-೨೦೦೦) ಉಪವಿಭಾಗವಾದ ಸಗರ-೩೦೦ ಮತ್ತು ಯೆರಬಾಡ (ಯರಡೋಣಿ) ಗಳನ್ನು ಆಳುತ್ತಿದ್ದನು. "ಎಡೆದೊರೆಯಿರ್ಚ್ಛಾಸಿರದ ಭಾಗಂ ಸಗರ ಮುನೂರು"[೮೪] ಎಂಬ ಉಲ್ಲೇಖವಿದೆ. ಈ ಶಾಸನೋಕ್ತ ಹಿರಣ್ಯ ವರ್ಷದೇವನು ರಾಷ್ಟ್ರಕೂಟ ಮೂರನೇ ಇಂದ್ರನಾಗಿದ್ದಾನೆ ಎಂದು ಡಾ.ಶ್ರೀನಿವಾಸ ರಿತ್ತಿ ಅವರು ಅಭಿಪ್ರಾಯ ಪಟ್ಟಿದ್ದಾರೆ. ಇಂದ್ರ ಚಕ್ರವರ್ತಿಯಾಗಿ ಕೇವಲ ಸಗರ-ಮುನ್ನರುದಂತಹ ಸಣ್ಣ ವಿಭಾಗ ಆಳುತ್ತಿದ್ದನೆಂದು ಹೇಳವುದು ಅಸಮಂಸವೆನಿಸುತ್ತದೆ. ಕಾರಣ ಈತ ತನ್ನ

ತಂದೆಯ ಕಾಲದಲ್ಲಿ ಯುವರಾಜನಾಗಿ ವೃತ್ತಿಯಿಂದ ಈ ನಾಡನ್ನು ಆಳುತ್ತಿರಬೇಕು. ಅಂದರೆ ಸಗರ ಮುನ್ನೂರು ವಿಭಾಗವು ಎಡೆದೊರೆ ನಾಡಿನ ಉಪ ವಿಭಾಗವಾಗಿತ್ತೆಂದು ಹೇಳಬಹುದು. ಸಗರ ಮುನ್ನೂರರ ಉಲ್ಲೇಖ ಕೆಂಭಾವಿ, ತಿಂಥಣಿ, ಹಾವಿನಾಳ, ಯಡ್ರಾಮಿ, ದೋರನಹಳ್ಳಿ, ಧರಿಯಾಪುರ, ಶಿರವಾಳ, ಗುರಸುಣಗಿ, ಮುದನೂರು, ಯಾಳಗಿ, ಸಗರ, ಏವೂರು ಮುಂತಾದ ಕಡೆ ಕಲ್ಯಾಣ ಚಾಲುಕ್ಯರು ಆಳ್ವಿಕೆ ಮಾಡಿದ ನಾಡಾಗಿದೆ. ಸಗರ ಮುನ್ನೂರರಲ್ಲಿ ಪಿರಿಯಬೆಳ್ಳುಂಬಟ್ಟೆ, ಶಿವಪುರ, ಎಳರಾವೆ, ಏವೂರ, ತಿಂಥಿಣಿ, ಸಿರಿವರ, ಕಂನಡನೂರು, ಹಾಲಂಗೇರಿ ಎಂಬ ಹಳ್ಳಿಗಳು ಇದರಲ್ಲಿ ಸೇರಿದ್ದವು ಎಂಬುದು ಶಾಸನದಿಂದ ತಿಳಿದು ಬರುತ್ತದೆ.

ಕಲ್ಯಾಣ ಚಾಲುಕ್ಯ ಚಕ್ರವರ್ತಿ ಜಗದೇಕಮಲ್ಲನ ಕಾಲದಲ್ಲಿ ಸಗರ–ಐದನೂರು ಹಳ್ಳಿಗಳಾಗಿ ಮಾರ್ಪಟ್ಟಿದ್ದರಿಂದ ಇದರ ವ್ಯಾಪ್ತಿ ಹೆಚ್ಚಿತು. ಮುಂದೆ ಕಳಚೂರಿ ರಾಜರ ಆಳ್ವಿಕೆಯಲ್ಲಿ ಸಗರ–ಐದನೂರು ಆಗಿತ್ತೆಂದು ಹೇಳುವ ಗುರುಸುಣಗಿ ಶಾಸನದಿಂದ ಈ ಸಂಗತಿ ತಿಳಿದು ಬರುತ್ತದೆ. ಯಾದವರ ಕಾಲದಲ್ಲಿ ಸಗರ ಐದನೂರು ಆಡಳಿತದ ಸೀಮೆಯಾಗಿರುವುದನ್ನು ಸಮರ್ಥಿಸುತ್ತದೆ. ಸಗರ–ಐದನೂರರ ಉಲ್ಲೇಖ ಈ ನಾಡಿನ ಹಲವಾರು ಶಾಸನಗಳಲ್ಲಿ ಉಲ್ಲೇಖಗೊಂಡಿದೆ. ಸಗರ– ಐದನೂರು ಈ ತಾಲೂಕಿನ ಅರಕೇರಿ, ನಗರವುರ, ಚಣ್ಣವುರ (ಚೆನ್ನೂರು) ಹುಣಸಗಿ, ಶಿವಪುರ, ಕೆಂಭಾವಿ, ಕಚಕನೂರು, ಎಡೆಯಪುರ, ದೋರನಹಳ್ಳಿ, ಶಿರಿವಾಳ, ಕೋಬಾಳ, ಗುಂಡಲೂರು, ಸೂಗೂರು, ಹೋತಗಲ್ಲು, ಎಳರಾವೆ (ಯಡ್ರಾಮಿ) ಮಲ್ಲಾಬಾದ ಗ್ರಾಮಗಳು ಸಗರ–ಐದನೂರಲ್ಲಿ ಸಮಾವೇಶಗೊಂಡಿದ್ದವು.

## ಹಗರಟಗಿ ಮುನ್ನೂರು :

ಕುಂತಲ ನಾಡಿನ ಹಗರಟಗೆ–ಮುನ್ನೂರು ಪ್ರಮುಖ ವಿಭಾಗವಾಗಿತ್ತು. ಮುನ್ನೂರು ಹಳ್ಳಿಗಳಿಂದ ಕೂಡಿದ ಈ ವಿಭಾಗ ಸಗರನಾಡಿನ ಸುರಪುರ ತಾಲೂಕಿನ ನೈಋತ್ಯ ಭಾಗದಲ್ಲಿದೆ. ಉತ್ತರದಲ್ಲಿ ಬಿಜಾಪುರ ಜಿಲ್ಲೆಯ ಮುದ್ದೇಬಿಹಾಳ, ದಕ್ಷಿಣದಲ್ಲಿ ಸಿಂದಗಿ ತಾಲೂಕಿನ ಭೂ ಪ್ರದೇಶಗಳು ಸೇರಿದ್ದು ಶಾಸನಗಳಿಂದ ತಿಳಿದುಬರುತ್ತದೆ. ಹಗರಟಗಿ ನಾಡು ಕಲ್ಯಾಣ ಚಾಲುಕ್ಯ ಸತ್ಯಾಶ್ರಯನ ಆಳ್ವಿಕೆಗೆ ಒಳಪಟ್ಟಿತು. ನಂತರದ ರಾಜರುಗಳಾದ ಒಂದನೇಯ ಜಗದೇಕಮಲ್ಲ, ಎರಡನೇಯ ಜಯಸಿಂಹ, ಆರನೇ ವಿಕ್ರಮಾದಿತ್ಯ ಹಾಗೂ ಕಳಚೂರಿಯರ ಆಳ್ವಿಕೆಗೂ ಒಳಪಟ್ಟ ನಾಡಾಗಿದೆ. ಕಲ್ಯಾಣ ಚಾಲುಕ್ಯರ ಕಾಲದಿಂದಲೂ ಈ ನಾಡು ಮುನ್ನೂರು ಹಳ್ಳಿಗಳಿಂದ ಕೂಡಿತ್ತು. ಈ ನಾಡು ಬಿಜಾಪುರ ಜಿಲ್ಲೆಯ

ಮುದ್ದೆಬಿಹಾಳ ತಾಲೂಕಿಗೆ ಸಮೀಪವಾಗಿರುವುರಿಂದ ಅನೇಕ ರಾಜರು ಅಲ್ಲಿಂದಲೇ ಹಗರಟಿಗಿ-ಮುನ್ನೂರನ್ನು ಆಳುತ್ತಿದದ್ದು ಶಾಸನಗಳಿಂದ ತಿಳಿದುಬರುತ್ತದೆ. ''ಕಲ್ಯಾಣ ಚಾಲುಕ್ಯ ಒಂದನೇಯ ಜಗದೇಕಮಲ್ಲನ ಬಾವೂರ ಶಾಸನವು ಮೈಲರಸಂ ಪಲಗಟ್ಟಿ ಮುನ್ನೂರುಮಂ''[೮೫] ಆಳುತ್ತಿದ್ದನು ಎಂಬುದು ತಿಳಿದುಬರುತ್ತದೆ. ಮುದ್ದೆಬಿಹಾಳ ತಾಲೂಕಿನ ತುಂಬಗಿ, ಬಾವೂರ, ಬೇಲೂರು, ಗೋಟಖಂಡಕಿ, ತಾಳೀಕೋಟೆ, ಪೀರಾಪೂರ, ಸಿಂದಗಿ ತಾಲೂಕಿನ ಕಲ್ಕೇರಿ, ಸುರಪುರ, ತಾಲೂಕಿನ ಕಕ್ಕೇರಿ, ಮುದ್ದನೂರು, ರಾಜನಕೋಳೂರು, ಹಗರಟ್ಟಿಗೆ-ಮುನ್ನೂರಲ್ಲಿ ಸಮಾವೇಶಗೊಂಡಿದ್ದವು. ಕೆಂಬಾವಿ-೧೨, ಅದರೊಳಗೆ ಬೈಚಬಾಳ, ಕೂಡಲಗಿ, ಕಡಕಲ್ಲುಗಳು ಸೇರಿದ್ದವು.

ಹಗರಟಗಿ ಎಂಬ ಗ್ರಾಮದ ಉಲ್ಲೇಖ ಕಕ್ಕೇರಿ, ಮುದನೂರು, ರಾಜನಕೊಳೂರು, ಹಗರಟಗಿ ಶಾಸನಗಳಲ್ಲಿವೆ. ಹಗರಟಗಿ ನಾಡು ಎಂಬ ಉಲ್ಲೇಖ ಮುದನೂರು ಶಾಸನದಲ್ಲಿದೆ. ಹಗರಟಗಿ-ಮುನ್ನೂರು ಎಂಬ ಉಲ್ಲೇಖ ಕಡಕಲ್ಲು, ಮುದನೂರು, ಹಗರಟಗಿಯ ಶಾಸನದಲ್ಲಿದೆ. ಈ ನಾಡನ್ನು ಕುರಿತು ಶಾಸನಗಳಲ್ಲಿ ''ಪಲಗಟ್ಟಿ-೩೦೦, ಪಲಗಟ್ಟಿ ಪಗರಿಟೆನಾಡು, ಪಲಗಟಿ ವಿಶಯ, ಹಗಲಿಟ್ಟಗೆ-೩೦೦, ಹಗರಟ್ಟಿಗೆ ನಾಡು, ಹಗರಟ್ಟಗೆ-ಮುನ್ನೂರು ಎಂಬ ಮುಂತಾದ ಉಲ್ಲೇಖ ಸಗರ ನಾಡಿನ ಶಾಸನಗಳಿಂದ ತಿಳಿದು ಬರುತ್ತದೆ. ಅತಿ ಚಿಕ್ಕ ಗ್ರಾಮವಾದ ಈ ನಾಡು ೧೧ ರಿಂದ ೧೩ನೇ ಶತಮಾನದವರೆಗೂ ಬಹು ಪ್ರಾಮುಖ್ಯತೆ ಪಡೆದ ಪ್ರದೇಶವಾಗಿತ್ತು. ಅನೇಕ ರಾಜರು, ಮಹಾಮಂಡಳೇಶ್ವರರು, ಸಾಮಂತರು, ದಂಡನಾಯಕರು ಹಾಗೂ ಇತರ ಅಧಿಕಾರಿಗಳ ಆಳ್ವಿಕೆಗೆ ಒಳಪಟ್ಟ ನಾಡಾಗಿದೆ.

## ಕೆಂಭಾವಿ-ಇಪ್ಪತ್ತನಾಲ್ಕು :

ಸುರಪುರ ತಾಲೂಕಿನ ಮುಖ್ಯ ಕೇಂದ್ರವೇ ಕೆಂಭಾವಿ. ಈ ನಾಡಿನ ಮುಖ್ಯ ಪಟ್ಟಣವಾಗಿದೆ. ಕೆಂಭಾವಿ ಎಂಬ ರಾಜಧಾನಿ ಕೆಂಭಾವಿ ಕ್ರಿ.ಶ.೧೦೫೪ರ ಶಾಸನ ಹಾಗೂ ಎಡೆಯಪುರ ಕ್ರಿ.ಶ.ಸು.೧೨ನೇ ಶತಮಾನದ ಶಾಸನದಲ್ಲಿ ಮುಖ್ಯ ರಾಜಧಾನಿ ಕೆಂಭಾವಿ ಎಂಬ ಉಲ್ಲೇಖವಿದೆ. ''ಕಲ್ಯಾಣ ಚಾಲುಕ್ಯ ಮೊದಲನೇ ಸೋಮೇಶ್ವರನ ಮಹಾಮಂಡಳೇಶ್ವರನಾದ ಹೈಹಯವಂಶದ ರೇವರಸನ ಹೆಂಡತಿ ಮಾಳಿಯಬ್ಬರಸಿ ರಾಜಧಾನಿ ಕೆಂಭಾವಿಯ ಪೂರ್ವಭಾಗದಲ್ಲಿ ದಾನ ಬಿಟ್ಟಿದ್ದು ತಿಳಿಸುತ್ತದೆ.''[೮೬] ಶಾಸನದಲ್ಲಿ ಕೆಂಭಾವಿ-ಇಪ್ಪತ್ತನಾಲ್ಕು ಎಂಬ ಉಲ್ಲೇಖವಿದ್ದರೆ, ''ಕೆಂಭಾವಿ-ಪನ್ನೆರಡು''[೮೬] ಎಂಬ

ಉಲ್ಲೇಖವಿದೆ. ಇಪ್ಪತ್ತು ವರ್ಷಗಳ ಅಂತರದಲ್ಲಿ ಈ ವ್ಯತ್ಯಾಸ ಏಕೆ, ಯಾವಾಗಾಯಿತು ಎಂದು ತಿಳಿದುಬರುವುದಿಲ್ಲ. ಕೆಂಭಾವಿ ಶಾಸನವು ಇಪ್ಪತ್ತಾನಾಲ್ಕರ ಬಳಿಯ ಕರಡಿಕಲ್ಲುಡಲಿಗೆ ಎಂದು ಹೇಳಿದೆ. ಇದಲ್ಲದೆ. ಮುದನೂರು, ಬೈಚಬಾಳ, ದೇವಪುರ, ಕೆಂದಲಗೆ ಗ್ರಾಮಗಳೂ ಈ ಉಪವಿಭಾಗದಲ್ಲಿ ಸೇರಿದ್ದವು''[೮೮]. ಇವುಗಳ ಜೊತೆಗೆ ಕೆಂಭಾವಿ, ಕರಡಿಕಲ್ಲು ಮತ್ತು ಕೂಡಲಗಿ ಸೇರಿ ಈ ವಿಭಾಗದ ಏಳು ಹಳ್ಳಿಗಳನ್ನು ಗುರುತಿಸಲು ಸಾಧ್ಯವಾಗಿದೆ. ಉಳಿದ ಹದಿನೇಳು ಹಳ್ಳಿಗಳನ್ನು ಗುರುತಿಸಬೇಕಾಗಿದೆ. ಇದು ಸಗರ –೩೦೦ರ ಉಪವಿಭಾಗವೆಂದು ವಿ.ಎಸ್.ಕುಲಕರ್ಣಿಯವರು ಗುರುತಿಸಿದ್ದಾರೆ.

## ನರೆಯಂಬೊಳೆ–ಎಪ್ಪತ್ತು :

ಜೇವರ್ಗಿ ತಾಲೂಕಿನ ನರಬೋಳ ಪ್ರಮುಖ ಕೇಂದ್ರವಾಗಿತ್ತು. ಶಾಸನದಲ್ಲಿ 'ನೆರೆಂಬೊಳೆ ಎಪ್ಪತ್ತು' ಎಂಬ ಆಡಳಿತ ವಿಭಾಗದ ಉಲ್ಲೇಖವಿದೆ. ಈ ನರೆಯಂಬೊಳೆ–ಎಪ್ಪತ್ತರಲ್ಲಿಯ ಒಂದು ಗ್ರಾಮ ಕೆಲ್ಲೂರಾಗಿತ್ತು. ಇದರ ಜೊತೆಗೆ ಕಿರಿಯ ಬೆಳ್ಳುಂಬಟ್ಟೆ ಈ ವಿಭಾಗದಲ್ಲಿ ಸೇರಿತು. ಎಂಬುದು ತಿಳಿದು ಬರುತ್ತದೆ. ''ನರಿಯಂಬೊಳೆ–೭೦ರ ಬಳಿ ಏವಂತನೂರು''[೮೯] ಎಂಬ ಉಲ್ಲೇಖ ಯಾತನೂರ ಶಾಸನದಲ್ಲಿ ಬಂದಿದೆ. ಈ ಯಾತನೂರಿನ ಸುತ್ತ–ಮುತ್ತಲಿನ ಗ್ರಾಮಗಳು ಈ ವಿಭಾಗದಲ್ಲಿದ್ದವು.

## ಎಳರಾವೆ–ಐವತ್ತು :

ಜೇವರ್ಗಿ ತಾಲೂಕಿನ ಯಡ್ರಾಮಿಯೆ ಪ್ರಾಚೀನ ಎಳರಾವೆಯ ಮುಖ್ಯ ಪಟ್ಟಣವಾಗಿದೆ. ಕ್ರಿ.ಶ. ೧೧೩೬ರ ಮಲ್ಲಾಬಾದ ಶಾಸನದಲ್ಲಿ ಈ ವಿಭಾಗದ ಉಲ್ಲೇಖವಿದೆ. ಆದರೆ ಯಡ್ರಾಮಿ ಹಾಗೂ ಮಲ್ಲಾಬಾದ ಬಿಟ್ಟರೆ, ಈ ವಿಭಾಗದ ಇತರ ಹಳ್ಳಿಗಳ ಮಾಹಿತಿ ತಿಳಿದುಬಂದಿಲ್ಲ.

## ಇತರ ನಾಡುಗಳು :

ಗಂಗ, ವಂಗ, ಕಳಿಂಗ, ಕಾಂಬೋಜ, ಕೊಂಗು, ಕೊಂಕಣ, ಸೌರಾಷ್ಟ್ರ, ವರಾಳ, ಮಘದ, ಮಾಳವ, ಲಾಳ, ಪಾರ್ಯ್ಯತ್ರ, ತುರುಸ್ಕ, ಕಾಶ್ಮೀರ, ಚೇರ, ಚೋಳ, ಪಾಂಡ್ಯ, ಆಂದ್ರ, ಕರ್ನಾಟಕ, ಗಂಗಾ, ಯಮುನಾ, ಭೀಮರಥಿ, ಕೃಷ್ಣಾ–ಕೃಷ್ಣವೇಣ್ಣಾ, ಎಂಬ ಮುಂತಾದ

ನಾಡುಗಳ ಉಲ್ಲೇಖ, ತಿಂಥಣಿ, ಮುದನೂರು, ಹೆಮ್ಮಡಗಿ, ಬೊಮ್ಮನಹಳ್ಳಿ, ಕೆಂಭಾವಿ, ಸಗರ, ಅಣಬಿ, ಯಡ್ರಾಮಿ, ಕುಳಗೇರಿ, ಗೋಗಿ, ಶಿರವಾಳ, ಆಂದೋಲಗಳ ಶಾಸನದಲ್ಲಿ ಈ ನಾಡಿನ ಉಲ್ಲೇಖಗಳು ಕಂಡುಬರುತ್ತವೆ. ಈ ರೀತಿ ಸಗರನಾಡಿನ ಆಡಳಿತ ವ್ಯವಸ್ಥೆ ಅಚ್ಚುಕಟ್ಟಾಗಿತ್ತು. ರಾಜ ಸಮರ್ಥನಾಗಿದ್ದನು. ಪ್ರಜೆಗಳು ರಾಜನನ್ನು ಪ್ರತ್ಯಕ್ಷ ದೇವರೆಂದು ಭಾವಿಸಿದ್ದರು. ರಾಣಿಯರು, ಮಹಾಮಂಡಳೇಶ್ವರರು, ಮಹಾಸಾಮಂತರು ಹಾಗೂ ಇತರ ಅಧಿಕಾರಿಗಳು ಆಳ್ವಿಕೆ ಮಾಡಿದ ನಾಡು, ಸಗರನಾಡು.

## ಟಿಪ್ಪಣಿಗಳು

೧. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೪೧೬.

೨. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೪೧೬.

೩. ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ.೧೦೦.

೪. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೩೪೫.

೫. ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ.೯೪.

೬. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೩೮೨.

೭. ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ.೨೪.

೮. ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ.೧೯೪.

೯. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೨೯.

೧೦.ಆರನೇ ವಿಕ್ರಮಾದಿತ್ಯನ ಶಾಸನಗಳು ಒಂದು ಅಧ್ಯಯನ : ನಾಗಯ್ಯ ಜೆ.ಎಂ,. ವೀರಶೈವ ಅಧ್ಯಯನ ಅಕಾಡೆಮಿ, ಶ್ರೀ ನಾಗನೂರು ರುದ್ರಾಕ್ಷಿಮಠ, ಬೆಳಗಾವಿ, ೧೯೯೨, ಪು.ಸಂ.೦೩.

೧೧. ಅನುಶಾಸನ ; ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೨೦೦೨, ಪು.ಸಂ.೪೬.

೧೨. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೩೨೬.

೧೩. ಕಲಬುರ್ಗಿ ಜಿಲ್ಲೆಯ ಗ್ಯಾಸೆಟಿಯರ್ ; ಪಾಟೀಲ ಎಂ.ಬಿ, ಕರ್ನಾಟಕ ರಾಜ್ಯ ಸರಕಾರ ಕರ್ನಾಟಕ ಗ್ಯಾಸೆಟಿಯರ್, ಬೆಂಗಳೂರು, ೧೯೯೭, ಪು.ಸಂ.೫೩.

೧೪. ಮುದನೂರು ಮತ್ತು ಯಡ್ರಾಮಿ ಶಾಸನಗಳು : ಹಿರೇಮಠ ಬಿ.ಆರ್, ಶಿವಚಂದ್ರ ಪ್ರಕಾಶನ, ನವನಗರ ಹುಬ್ಬಳ್ಳಿ, ೧೯೯೪, ಪು.ಸಂ.೧೧.

೧೫. ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ.೧೫೨.

೧೬.ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೪೪೦.

೧೭.ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೪೪೨.

೧೮. ಅನುಶಾಸನ ; ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೨೦೦೨, ಪು.ಸಂ.೦೪.

೧೯.ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೪೬೧.

೨೦.ತರ್ದವಾಡಿ ನಾಡು ಒಂದು ಅಧ್ಯಯನ : ಕೊಪ್ಪಾ ಎಸ್.ಕೆ, ಪ್ರತಿಭಾ ಪ್ರಕಾಶನ, ಇಂಡಿ, ೧೯೯೦, ಪು.ಸಂ.೮೧.

೨೧. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೪೪೨.

೨೨. ಮಹಾರಾಷ್ಟ್ರದ ಕನ್ನಡ ಶಾಸನಗಳು : ಕಲಬುರ್ಗಿ ಎಂ.ಎಂ, ೧೯೮೭, ಪು.ಸಂ.೫೪.

೨೩. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೪೦೬.

೨೪. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೪೧೬.

೨೫. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೪೩೨

೨೬. Epigraphia Indica, Vol, XXII, P.No.321.

೨೭. ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ, ೩೮೨.

೨೮. ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ, ೩೮೨.

೨೯. ಆರನೇ ವಿಕ್ರಮಾದಿತ್ಯನ ಶಾಸನಗಳು ಒಂದು ಅಧ್ಯಯನ : ನಾಗಯ್ಯ ಜೆ.ಎಂ, ವೀರಶೈವ ಅಧ್ಯಯನ ಅಕಾಡೆಮಿ, ಶ್ರೀ ನಾಗನೂರು ರುದ್ರಾಕ್ಷಿಮಠ, ಬೆಳಗಾವಿ, ೧೯೯೨, ಪು.ಸಂ.೨೩.

೩೦.ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ, ೧೫೭.

೩೧. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೧೯೫.

೩೨. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೪೦೨.

೩೩. ಆರನೇ ವಿಕ್ರಮಾದಿತ್ಯನ ಶಾಸನಗಳು ಒಂದು ಅಧ್ಯಯನ : ನಾಗಯ್ಯ ಜೆ.ಎಂ, ವೀರಶೈವ ಅಧ್ಯಯನ ಅಕಾಡೆಮಿ, ಶ್ರೀ ನಾಗನೂರು ರುದ್ರಾಕ್ಷಿಮಠ, ಬೆಳಗಾವಿ, ೧೯೯೨, ಪು.ಸಂ.೧೫೧.

೩೪. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೪೨೭.

೩೫. ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ, ೦೭.

೩೬.ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ, ೨೬.

೩೭.ಹೈದರಾಬಾದು ಕರ್ನಾಟಕ ಭಾಗದ ಕನ್ನಡ ಶಿಲಾ ಶಾಸನಗಳು : ಶಿವಾನಂದ ವಿ,ಬನಾರಸ ಹಿಂದೂ ವಿಶ್ವವಿದ್ಯಾಲಯ, ವಾರಣಾಸಿ, ೧೯೯೨, ಪು.ಸಂ.೧೩೮.

೩೮. ಸಗರನಾಡ ದರ್ಶನ : ಸಂಶೋಧನಾತ್ಮಕ ಲೇಖನ–ಕವನಗಳ ಸಂಕಲನ, ಮಹಾಕವಿ ಲಕ್ಷ್ಮೀಶ ವಾಚನ ಸಂಘ, ಸುರಪುರ, ೧೯೮೫, ಪು.ಸಂ.೧೧೭.

೩೯.ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೩೬೨.

೪೦.ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ, ೧೩೮.

೪೧. ಆರನೇ ವಿಕ್ರಮಾದಿತ್ಯನ ಶಾಸನಗಳು ಒಂದು ಅಧ್ಯಯನ : ನಾಗಯ್ಯ ಜೆ.ಎಂ, ವೀರಶೈವ ಅಧ್ಯಯನ ಅಕಾಡೆಮಿ, ಶ್ರೀ ನಾಗನೂರು ರುದ್ರಾಕ್ಷಿಮಠ, ಬೆಳಗಾವಿ, ೧೯೯೨, ಪು.ಸಂ.೨೩೦.

೪೨. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೪೩೭.

೪೩. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೨೭೮.

೪೪. ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ, ೧೦೭.

೪೫. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೨೬೮.

೪೬. ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ, ೧೦೦.

೪೭. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೨೭೨.

೪೮. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೩೭೭.

೪೯.ಆರನೇ ವಿಕ್ರಮಾದಿತ್ಯನ ಶಾಸನಗಳು ಒಂದು ಅಧ್ಯಯನ : ನಾಗಯ್ಯ ಜೆ.ಎಂ, ವೀರಶೈವ ಅಧ್ಯಯನ ಅಕಾಡೆಮಿ, ಶ್ರೀ ನಾಗನೂರು ರುದ್ರಾಕ್ಷಿಮಠ, ಬೆಳಗಾವಿ, ೧೯೯೨, ಪು.ಸಂ.೨೩೦.

೫೦.ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೪೦೬.

೫೧. ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ, ೧೦೧.

೫೨. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೩೯೧.

೫೩. ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ, ೩೬.

೫೪. ಎಡದೊರೆ ನಾಡು : ಹಿರೇಮಠ ಚನ್ನಬಸವ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ, ೨೦೦೦, ಪು.ಸಂ.೧೬.

೫೫.ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ, ೧೪೨.

೫೬.ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ, ೧೩೪.

೫೭.ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೩೦೮.

೫೮. ಮಾರ್ಗ ಸಂ–೪; ಕಲಬುರ್ಗಿ ಎಂ.ಎಂ.ಸಪ್ನ ಬುಕ್ ಹೌಸ್, ಬೆಂಗಳೂರು, ೧೯೬೭, ಪು.ಸಂ.೪೪೨.

೫೯. Epigraphia Indica, Vol, XXII, P.No.274.

೬೦. ಶಾಸನ ಪರಿಭಾಷೆ : ಹಿರೇಮಠ ಎಸ್.ಎಂ, ವಿದ್ಯಾನಿಧಿ ಪ್ರಕಾಶನ, ಗದಗ, ೧೯೭೩, ಪು.ಸಂ.೧೭೪.

೬೧.ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ, ೪೪.

೬೨. ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ, ೧೪೧.

೬೩.ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ, ೧೦೫.

೬೪. ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ, ೧೧೯.

೬೫.ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ, ೧೫.

೬೬.ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೨೯೭.

೬೭.ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ, ೪೪೩.

೬೮.ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ, ೧೮೬.

೬೯.ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೪೧೪.

೭೦.ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ, ೧೬.

೭೧.ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೩೨೭.

೭೨. ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ, ೭೬.

೭೩.ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ, ೧೬೧.

೭೪. ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ, ೬೧.

೭೫.ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೨೭೮.

೭೬.ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ, ೧೦೭.

೭೭.ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ, ೧೦.

೭೮.ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೨೮೦.

೭೯.ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೪೩೩.

೮೦.ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ,೦೩.

೮೧. ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ,೧೮೬.

೮೨. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೩೨೪.

೮೩. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೪೪೫.

೮೪. ರಾಯಚೂರು–ಕೊಪ್ಪಳ ಜಿಲ್ಲೆಯ ಶಾಸನಗಳು : ಹಿರೇಮಠ ಚನ್ನಬಸವ, ಚೇತನ ಪ್ರಕಾಶನ, ಮಸ್ಕಿ, ೧೯೯೯, ಪು.ಸಂ.೧೬.

೮೫. ಅನುಶಾಸನ : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೨೦೦೨, ಪು.ಸಂ.೫೧.

೮೬.ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ,೬೮.

೮೭.ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ,೧೦೧.

೮೮. ಎಡದೊರೆ ನಾಡು : ಹಿರೇಮಠ ಚನ್ನಬಸವ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ, ೨೦೦೦, ಪು.ಸಂ.೦೮.

೮೯.ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೩೭೩.

# ಅಧ್ಯಾಯ–೪

## ಸಾಮಾಜಿಕ ವ್ಯವಸ್ಥೆ

೪.೧. ವರ್ಗ–ವರ್ಣ–ಜಾತಿ

೪.೨. ಸ್ತ್ರೀಯರ ಸ್ಥಾನಮಾನ

೪.೩. ಕುಟುಂಬ ವ್ಯವಸ್ಥೆ

೪.೪. ಹಬ್ಬ–ಹರಿದಿನಗಳು

೪.೫. ಸಾರ್ವಜನಿಕ ಚಟುವಟಿಕೆಗಳು

## ಪ್ರಸ್ತಾವನೆ :

ಕುಟುಂಬವು ಸಮಾಜದ ಒಂದು ಅವಿಭಾಜ್ಯ ಅಂಗ. ಮಾನವ ಸಂಘ ಜೀವಿ, ಅದನ್ನು ಹೊರತು ಪಡಿಸಿ ಆತ ಬದುಕಲಾರ. ಮಾನವ ತನ್ನ ಜೀವನ ಪಯಣಕ್ಕಾಗಿ ಕುಟುಂಬಗಳನ್ನು ರೂಪಿಸಿಕೊಂಡಿದ್ದಾನೆ. ಇಂತಹ ಕೆಲ ಕುಟುಂಬಗಳು ಸೇರಿ ಒಂದು ಸಮಾಜವಾಗಿರುವುದರಿಂದ, ಸಮಾಜ ಎನ್ನುವುದು ಕುಟುಂಬದ ಬಹು ದೊಡ್ಡ ರೂಪ. ಇಂತಹ ಸಾಮಾಜಿಕ ಸ್ತರಗಳಲ್ಲಿರುವ ಪ್ರತಿ ಕುಟುಂಬದ ಪ್ರತಿಕ್ರಿಯೆಗಳಿಗೆ ಸಮಾಜದ ಪ್ರೇರಣೆ ಇದ್ದೇ ಇರುತ್ತದೆ. ಯಾವುದೊಂದನ್ನು ಹೊರತುಪಡಿಸಿ ಅವುಗಳ ಅಸ್ತಿತ್ವವನ್ನು ಕಂಡುಕೊಳ್ಳಲು ಸಾಧ್ಯವಿಲ್ಲ. ನಾಗರಿಕತೆಗಳ ಬೆಳವಣಿಗೆಗೆ ಹೇಗೆ ಭೂಗೋಳ ಪೂರಕವೊ, ಹಾಗೇ ಸಮಾಜದ ನಿರಂತರ ಚಲನ ಶೀಲತೆಗೆ ಕುಟುಂಬವೆಂಬ ಘಟಕ ಅತಿ ಅವಶ್ಯಕ. ಕುಟುಂಬವನ್ನು ಸೀಮಿತ ವ್ಯಾಪ್ತಿಯಲ್ಲಿ ಗುರುತಿಸುವ ನಾವು, ಅದೇ ಕುಟುಂಬಗಳ ಸಮೂಹದಿಂದ ಆವಿರ್ಭವಿಸಿರುವ ಸಮಾಜವನ್ನು ಬಹುದೊಡ್ಡ ವ್ಯಾಪ್ತಿಯಿಂದ ಗುರುತಿಸುತ್ತೇವೆ.

ಕುಟುಂಬ ಸಮಾಜದ ಚಿಕ್ಕ ಘಟಕ. ಕುಟುಂಬ ಮತ್ತು ಸಮಾಜ ಇವೆರಡೂ ಅವಿನಾಭಾವ ಸಂಬಂಧವನ್ನು ಬೆಸೆದುಕೊಂಡಿವೆ. ಒಂದರ ಹೊರತು ಇನ್ನೊಂದರ ಸಾಧನಯಲ್ಲಿ ಸಾಫಲ್ಯವಿಲ್ಲ. ಅಂದರೆ "ಕುಟುಂಬ ಮತ್ತು ಸಮಾಜಗಳಲ್ಲಿರುವುದು ಗಾತ್ರ ವ್ಯತ್ಯಾಸವೇ ಹೊರತು ಗುಣ ವ್ಯತ್ಯಾಸವಲ್ಲ"[1] ಈ ದೃಷ್ಟಿಯಲ್ಲಿ ಕುಟುಂಬದ ಪ್ರಾಮುಖ್ಯತೆ ಪರಸ್ಪರ ಪ್ರೀತಿ, ಪ್ರೇಮದಿಂದ ಕೂಡಿ ಬಾಳುವುದು ಇದು ಸಮಾಜದ ಮೂಲ ಉದ್ದೇಶವೂ ಆಗಿದೆ. ಸಮಾಜದ ಪ್ರತಿಯೊಂದು ಜೀವಿಯು ಪರಸ್ಪರ ಸಹಕಾರ, ಸಹಬಾಳ್ವೆ, ಸಹೋದರತ್ವದಿಂದ ಬಾಳಿ ಬದುಕಿದಾಗ ಮಾತ್ರ ಅದರ ಬೆಳವಣಿಗೆ ಸಾಧ್ಯ. ಇಲ್ಲವಾದರೆ ಆ ಸಮಾಜ ಕ್ರಮೇಣ ಕಣ್ಮರೆಯಾಗುತ್ತ ಇತಿಹಾಸದ ಪುಟಗಳಲ್ಲಿ ಸೇರಬೇಕಾಗುತ್ತದೆ. ಇಂತಹ ಬದುಕಿಗೆ ಮಹಿಳೆ ಸಿದ್ಧರಾಗಬೇಕಾಗುತ್ತದೆ. ಆದರೆ ಕೌಟಂಬಿಕ ವಿಷಯವನ್ನು ಬಿಟ್ಟರೆ, ಸಮಾಜಿಕ ಕ್ಷೇತ್ರಗಳಲ್ಲಿ ಅವಕಾಶಗಳು ತೀರ ವಿರಳ. ಹೀಗಿರುವಾಗಲೂ ಉನ್ನತ ವರ್ಗದ ಮಹಿಳೆಯರು ಸಮಾಜಿಕ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವುದುಂಟು. ಆದರೂ ಮಹಿಳೆ ಈ ಸೀಮಿತ ಪರಿಸರವನ್ನು ಮೀರಿ ಜೀವನದಲ್ಲಿ ಹೆಚ್ಚಿನದನ್ನು ಸಾಧಿಸಬೇಕೆಂಬ ಛಲ ಹೊಂದಿದ್ದಾಳೆ.

## ೪.೧. ವರ್ಗ–ವರ್ಣ–ಜಾತಿ :

ಕುಟುಂಬಕ್ಕೆ ಪೂರಕವಾಗಿ ಸಮಾಜದಲ್ಲಿ ವರ್ಗ, ವರ್ಣ, ಜಾತಿ ವ್ಯವಸ್ಥೆಗಳು ಕ್ರಮೇಣ ರೂಪಗೊಳ್ಳುತ್ತಾ ಹೋದವು. ಆಯಾ ಕಾಲ ಘಟ್ಟಕ್ಕೆ ತಕ್ಕಂತೆ ಮಾನವನ ಉಡುಪು, ಆಭರಣ, ವೃತ್ತಿ, ಆಹಾರ ಮುಂತಾದವುಗಳ ಮಹತ್ವದ ವಿಷಯಗಳಲ್ಲಿ ಅಮೂಲಾಗ್ರ ಬದಲಾವಣೆಗಳಾಗುತ್ತ ಹೋಯಿತು. ಇದು ಸಮಾಜದ ಪರಿವರ್ತನೆ ಎಂದು ಕರೆಯಲೂಬಹುದು. ಕೆಲವೊಮ್ಮೆ ಈ ಸಮಾಜಿಕ ಪರಿಸರಕ್ಕೆ ಪೂರಕವಲ್ಲದ, ವಿಷಯಗಳು ಕೂಡ ಮೊಳಕೆಯೊಡೆದವು. ಉದಾರಣೆಗೆ ಜಾತಿ. ಜಾತಿ ಕ್ರಮೇಣ ಗತಿಸಿದಂತೆಲ್ಲಾ, ಜಟಿಲವಾಗುತ್ತ, ಸಮಾಜದ ಸ್ವಾಸ್ಥ್ಯವನ್ನು ಕೆಡಿಸುವ ಮಾರಕ ರೋಗವಾಯಿತು. ಮುಂದೆ ಅದು ಆರ್ಥಿಕವಾಗಿ ಜನರನ್ನು ಬಹುದೊಡ್ಡ ರೀತಿಯಲ್ಲಿ ವಿಂಗಡಿಸಿ, ಶ್ರಮಿಕ ಮತ್ತು ಶ್ರೀಮಂತ ಎಂಬ ವರ್ಗಗಳನ್ನು ಸೃಷ್ಟಿಸಿತು. ಇದು ಸಮಾಜದ ಆಯಾ ಜಾತಿಗಳಲ್ಲಿ, ವರ್ಗಗಳಲ್ಲಿಯೇ ಸಂಬಂಧವನ್ನು ಬೆಸೆಯುವಂತೆ ಪರಿಸ್ಥಿತಿಯನ್ನು ಸೃಷ್ಟಿಸಿತು. ಕ್ರಮೇಣ ಸ್ತ್ರೀಯರ ಸ್ಥಾನಮಾನ ಕ್ಷೀಣಿಸುತ್ತಾ ಹೋಯಿತು. ಹಲವಾರು ಸಂಪ್ರದಾಯ ನಂಬಿಕೆಗಳಲ್ಲಿ ವಿಪುಲ ಬದಲಾವಣೆಗಳಾದವು. ಧಾರ್ಮಿಕವಾಗಿ ಹೊಸ–ಹೊಸ ಆಚರಣೆಗಳು ಮೊಳಕೆಯೊಡೆದವು. ಆದರೂ ಎಲ್ಲಾ ಕಾಲ ಘಟ್ಟದಲ್ಲೂ ಎಲ್ಲಾ ಜಾತಿ, ವರ್ಗಗಳಿಲ್ಲದಿದ್ದರೂ ಕೆಲವೊಂದಾದರೂ ಕೆಲ ಹಬ್ಬ ಹರಿದಿನಗಳಲ್ಲಿ ಒಂದಾಗುತ್ತಾ ಸಮಾಜದಲ್ಲಿ ಸಹೋದರತ್ವವನ್ನು ಉಳಿಸಿಕೊಂಡವು.

ವರ್ಣಗಳು ನಾಲ್ಕು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ. ಮೊದಲ ಮೂವರನ್ನು 'ದ್ವಿಜ' ಎಂದು ಕರೆಯಲಾಗುತ್ತದೆ. ಶೂದ್ರರಲ್ಲಿ ಅನೇಕ ಜಾತಿಗಳು ಕಂಡು ಬರುತ್ತವೆ. ವರ್ಣ ಮತ್ತು ಜಾತಿ ಸಮಾನ ಅರ್ಥವನ್ನು ಕೊಡುವುದಿಲ್ಲ. ವರ್ಣಗಳು ನಾಲ್ಕೂ, ಜಾತಿಗಳು ನೂರಾರು. ವರ್ಣ ಸಂಕರಗಳಾಗಿದ್ದುದರಿಂದ ಜಾತಿಗಳು ಹುಟ್ಟಿಕೊಂಡವು.

## ಬ್ರಾಹ್ಮಣರು :

ಪ್ರಾಚೀನ ಕರ್ನಾಟಕದಲ್ಲಿ ಬ್ರಾಹ್ಮಣರು ಅತ್ಯಂತ ಪ್ರಭಾವ ಶಾಲಿಗಳಾಗಿದ್ದರು. ಜಾತಿಗಳಲ್ಲೇ ಶ್ರೇಷ್ಠವಾದದು ಬ್ರಾಹ್ಮಣರು. ಶಿಕ್ಷಣ, ರಾಜಕೀಯ, ಸಾಮಾಜಿಕ ಕ್ಷೇತ್ರದಲ್ಲಿ ಮುಂದುವರೆದಿದ್ದರು. ಅಶನ, ವ್ಯಸನಾದಿಗಳ ಚಿಂತೆ ಇಲ್ಲದೆ ವಿದ್ಯಾಭ್ಯಾಸವನ್ನು

ಮುಂದುವರೆಯಲು ಅನೇಕ ಅರಸರು ದಾನ-ದತ್ತಿಗಳನ್ನು ಕೊಟ್ಟಿದ್ದು ಈ ನಾಡಿನ ಶಾಸನಗಳಿಂದ ತಿಳಿದು ಬರುತ್ತದೆ. ಬ್ರಾಹ್ಮಣರು ಕೆಲ ಪ್ರಶಸ್ತಿಗಳನ್ನು ಹೊಂದಿದ್ದರು.

"ಸ್ವಸ್ತಿ ಯಮ ನಿಯಮ ಸ್ವಾಧ್ಯಾಯ ಧ್ಯಾನಧಾರಣ
ಮೌನಾನುಷ್ಠಾಣ ಜಪಸಮಾಧಿಶೀಲ ಗುಣಸಂಪಂನರೌ
ಪಾಸನಾಗ್ನಿಹೋತ್ರ ದ್ವಿಜಗುರು ದೇವಪೂಜಾತತ್ಪರರುಂ
ಮಾರ್ತ್ತಂಡೋಜ್ವಳ ಕೀರ್ತ್ತಿಯುತರುಂ ಅಶೇಷ ವೈಶೇಷಿಕ
ನೈಯಾಯಿಕ ಲೋಕಾಯತಮತಕೆ ಮೀಮಾಂಸಾದ್ಯನೇಕ
ಶಾಸ್ತ್ರ ಪ್ರವೀಣರುಂ ವಿದ್ವಾಂಸಕದಂಬ ಹ್ರಿದ್ದರ್ಮಿನೀ
ರಾಜಹಂಸರು ಭಾರಾವತಿ ಕರ್ನ್ನಾವತಂಶರುಂ ಶಕಲಲೋಕರ್ಕ್ಕೆ
ಕಂಜಮಂಜರಿ ರಂಜಿತ ಬಾಲದಿವಾಕರರುಂ ಬ್ರಹ್ಮವಂಶವಾರ್ದ್ಧಿವರ್ದ್ಧನ
ಸುಧಾಕರರುಂ ಹರಿಹರಖ್ಯಾತ ರಣಗರ್ವ್ವಪಾದಾಂಭೋಜರುಂ,
ಜಪಚರಿತರುಂ,ಹತೌಕಾಶೌಕಾಶಾ, ಗಂಗಾವಳತರತರಂಗಿ
ತರಾರಾಧೀಶರುಂ ದಿವಿಜವಿದಂದ ಡಿಂಡಿಮ ಪಾಂಡುರಂಗ ವಿಚಕಿಳ
ಪಾಂಚಜನ್ಯರು ಪತಾಕರುಂಮಪ್ಪ ಶ್ರೀಮತು
ಸರ್ವ್ವನಮಸ್ಯದಗ್ರಹಾರಂ ಹಗರಟಗಿ||".[೨]

ಈ ರೀತಿ ಬ್ರಾಹ್ಮಣರಿಗೆ ಹೊಗಳಿದ್ದು, ಪ್ರಶಸ್ತಿಗಳು ಪಡೆದುಕೊಂಡಿದ್ದು ಶಾಸನಗಳಿಂದ ತಿಳಿದು ಬರುತ್ತದೆ. "ಬ್ರಾಹ್ಮಣರನ್ನು ಷಟ್ಕರ್ಮ ನಿರತರು"[೩] ಎಂದು ವರ್ಣಿಸಲಾಗುತ್ತದೆ. ಅಧ್ಯಯನ ಅಧ್ಯಾಪನ (ಪಾಠವನ್ನು ಬೋಧಿಸುವುದು) ಯಜನ (ಯಾಗವನ್ನು ಮಾಡುವುದು) ಯಾಜನ (ಯಾಗವನ್ನು ಮಾಡಿಸುವುದು) ದಾನ, ಪ್ರತಿಗ್ರಹ (ದಾನವನ್ನು ಸ್ವೀಕರಿಸುವುದು) ಇವೇ ಷಟ್ಕರ್ಮಗಳಾಗಿವೆ. ಚಕ್ರವರ್ತಿಗಳಿಗೆ ಧಾರ್ಮಿಕ ಗುರುವಾಗಿ, ರಾಜಕೀಯ ಮಾರ್ಗದರ್ಶಕರಾಗಿ ಸಮಾಜದಲ್ಲಿ ಅಗ್ರಸ್ಥಾನ ಪಡೆದಿದ್ದರು.

## ಕ್ಷತ್ರಿಯರು :

ಸಮಾಜದಲ್ಲಿ ಕ್ಷತ್ರಿಯರು ಎರಡನೇ ಸ್ಥಾನವನ್ನು ಹೊಂದಿದ್ದರು. ಬ್ರಾಹ್ಮಣರು ಆರ್ಥಿಕವಾಗಿ ಕ್ಷತ್ರಿಯರನ್ನು ಅವಲಂಬಿಸಿದ್ದರೆ, ಪ್ರತಿಯಾಗಿ ಕ್ಷತ್ರಿಯರು ತಮ್ಮ ಪುಣ್ಯಾರ್ಜನೆಯ ವೈದಿಕ ಆಚರಣೆಗಳಿಗಾಗಿ ಬ್ರಾಹ್ಮಣರನ್ನು ಅವಲಂಬಿಸಿದ್ದರು. "ರಾಜ್ಯಕ್ಕೆ ಒಡೆಯರಾದ

ಅರಸರು ದೇವ ದ್ವಿಜರ ದಾಸರಾಗಿ ಇವರನ್ನು ಪೂಜಿಸುತ್ತಿದ್ದರು."[೪] "ಅಂಕಲಗಿಯ ಶ್ರೀ ಮಾದಯ್ಯರು ತ್ರಿಭುವನ ಮಲ್ಲದೇವನಿಂದಲೂ ಆರಾಧಿಸಲ್ಪಟ್ಟಿದ್ದರು".[೫] ಕ್ಷತ್ರಿಯರ ವಿವಾಹಗಳು ರಾಜಕೀಯ ಹಿನ್ನಲೆಯಿಂದ ನಡೆಯುತ್ತಿದ್ದವು. ಕಲ್ಯಾಣ ಚಾಲುಕ್ಯ ಆರನೇ ವಿಕ್ರಮಾದಿತ್ಯನು ಹಲವು ಧರ್ಮಗಳ ಹಲವು ರಾಜ ವಂಶೀಯರ ಕನ್ಯೆಯರನ್ನು ವಿವಾಹವಾಗಿದ್ದನ್ನು ಇಲ್ಲಿ ಸ್ಮರಿಸಬಹುದು.

**ವೈಶ್ಯರು :**

ಕ್ಷತ್ರಿಯರ ನಂತರದ ಸ್ಥಾನ ವೈಶ್ಯರದು. ಇವರು ಸಮಾಜದಲ್ಲಿ ಮೂರನೇ ಸ್ಥಾನ ಹೊಂದಿದ್ದರು. ಇವರು ವೃತ್ತಿ ವ್ಯಾಪಾರ. ಇವರು ತಮ್ಮನ್ನು ಒಂದೇ ಹೆಸರಿನಿಂದ ಗುರುತಿಸಿಕೊಂಡಿಲ್ಲ. ಅನೇಕ ಹೆಸರುಗಳು, ಒಳ ಪಂಗಡಗಳನ್ನು ಮಾಡಿಕೊಂಡಿದ್ದರು. ಉದಾಹರಣೆಗಾಗಿ ಹೇಳುವುದಾದರೆ, ರಥಕಾರರು, ಮೋಹಕಾರರು, ಬಡಗಿಗಳು, ಚರ್ಮಕಾರರು, ಮುಂತಾದವು ವೃತ್ತಿ ಆಧಾರಿತ ಗುಂಪುಗಳಾಗಿ ವಿಭಜನೆಗೊಂಡಿದ್ದವು. ಆದರೆ ಶಾಸನಗಳಲ್ಲಿ ಇವರ ಬಗ್ಗೆ ಯಾವುದೇ ಉಲ್ಲೇಖ ಕಂಡು ಬರುವುದಿಲ್ಲ.

**ಶೂದ್ರರು :**

ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಈ ಮೂರು ವರ್ಗದವರ ಸೇವೆ ಮಾಡುವುದೇ ಶೂದ್ರರ ಕಾರ್ಯವಾಗಿತ್ತು. ಸಮಾಜದಲ್ಲಿ ಇವರು ಕೊನೆ ಸ್ಥಾನ ಹೊಂದಿದ್ದರು. ಹಾಗಾಗಿ ಇವರ ಸ್ಥಿತಿ ಹೀನಾಯವಾಗಿತ್ತು. ಮೇಲ್ವರ್ಗದವರ ಸೇವೆ ಮಾಡುವುದೇ ಇವರ ಜೀವನದ ಪರಮ ವೃತ್ತಿಯಾಗಿತ್ತು. ಶೂದ್ರರನ್ನು ಅಶುದ್ಧರೆಂದು ಪರಿಗಣಿಸಿ, ಮೇಲ್ವರ್ಗದವರು ಇವರನ್ನು ದೇವಾಲಯಗಳಲ್ಲಿ ಸೇರಿಸಿಕೊಳ್ಳುತ್ತಿರಲಿಲ್ಲ. ಶೂದ್ರರ ಬಗೆಗೆ ಶಾಸನಗಳು ಹೆಚ್ಚಿನ ಮಾಹಿತಿ ನೀಡುವುದಿಲ್ಲ. ಆದರೂ ಕೂಡ ಅಂದು ಶೂದ್ರ ವರ್ಗವಿದ್ದ ಬಗ್ಗೆ ಕೇವಲ ಒಂದೇ ಒಂದು ಶಾಸನದಲ್ಲಿ ಮಾತ್ರ ಉಲ್ಲೇಖಗೊಂಡಿದೆ.

> "ಬ್ರಾಹ್ಮಣಂ ಕ್ಷತ್ರಿಯ ವೈಶ್ಯಶೂದ್ರವಾದಿ ಆ
> ನಿಯಮ ದಂಡಧರರುಂ ಮಂತ್ರಶಕ್ತಿ ಯಿಚ್ಛಾಶಕ್ತಿ
> ಕ್ರಿಯಾಶಕ್ತಿ ಶಾಪಾನುಗ್ರಹ ಸಮರ್ತ್ಥರು ಸಮಸ್ತ
> ಗುಣಮಣಿ ಭೂಷಣರುಮಪ್ಪ ನೂರನಾಲ್ವತ್ತೀಶ್ವರಾಭರಣಂ
> ಸರ್ವ್ವನಮಸ್ಯದಗ್ರಹಾರಂ ಅವಕ್ಕ XX ಯಷೇ (ಶೇ)ಷ
> ಮಹಾಜನಂಗಳು ॥"

ಎಂಬ ಉಲ್ಲೇಖ ಕ್ರಿ.ಶ.೧೧೭೫ರ ಕೆಲ್ಲೂರು ಶಾಸನದಿಂದ ತಿಳಿದುಬರುತ್ತದೆ. ಮಹಾಜನರನ್ನು ವರ್ಣಿಸುವ ಸಂದರ್ಭದಲ್ಲಿ "ಬ್ರಾಹ್ಮಣಂ ಕ್ಷತ್ರಿಯ ವೈಶ್ಯ ಶೂದ್ರಾದಿ ಆ ನಿಯಮ ದಂಡಧರರುಂ,"[೬] ಎಂಬ ಉಲ್ಲೇಖವಿದೆ. ಕ್ರಮೇಣ ಈ ವರ್ಣ ವ್ಯವಸ್ಥೆಯು ವೃತ್ತಿ ಆಧಾರಿತ ಜಾತಿ ವ್ಯವಸ್ಥೆಯಾಗಿ ರೂಪಾಂತರಗೊಂಡಿತು. ಆದರೂ ಕೂಡಾ ವರ್ಣ ಪದ್ಧತಿಯ ಸಂಪ್ರದಾಯದ ಕಪಿಮುಷ್ಟಿಯಿಂದ ಸಮಾಜವು ಪಾರಾಗಲಿಲ್ಲ.

## ವೃತ್ತಿ ಆಧಾರಿತ ಜಾತಿ ಪದ್ಧತಿ :

ವೃತ್ತಿ ಆಧಾರದ ಮೇಲೆ ಜಾತಿಗಳು ಹುಟ್ಟಿಕೊಂಡವು. ಕೆಲವೊಂದು ವೃತ್ತಿ ಆಧಾರಿತ ಜಾತಿಗಳನ್ನು ಇಲ್ಲಿನ ಶಾಸನಗಳಿಂದ ಅರಿಯಬಹುದಾಗಿದೆ. ಪ್ರತಿನಿತ್ಯದ ಜೀವನಕ್ಕೆ ಅಗತ್ಯವಾದ ಎಣ್ಣೆಯನ್ನು ಉತ್ಪಾದಿಸುವವರೆ ತೆಲ್ಲಿಗರು, ಗಾಣದಿಂದ ಎಣ್ಣೆಯನ್ನು ತೆಗೆಯುತ್ತಿದ್ದವರು ತೈಲಿಗರು ಅಥವಾ ತೆಲ್ಲಿಗರು. ಮನುಷ್ಯನಿಗೆ ನೀರು ಎಷ್ಟು ಮುಖ್ಯವೋ, ಆಹಾರಕ್ಕೆ ಎಣ್ಣೆಯು ಅಷ್ಟೇ ಮುಖ್ಯ ಹಾಗೂ ದೇವರ ನಂದಾದೀವಿಗೆಗೆ ಎಣ್ಣೆ ಉಪಯೋಗಿಸಲಾಗುತ್ತಿತ್ತು. ಸಗರನಾಡಿನ ಶಾಸನಗಳಲ್ಲಿ ಇವರನ್ನು "ತೆಲ್ಲಿಗರು, ಗಾಣದವರು"[೭] ಗಾಣಿಗರು, ಎಂಬ ಉಲ್ಲೇಖವಿದೆ.

> "ಬ್ರಹ್ಮೇಸ್ವರ ದೇವರ್ಗ್ಗೆ ಅಲ್ಲಿಯ ಆಚಾರ್ಯ್ಯ
> ಚಿಕಯ್ಯಂಗೆ ಧಾರಾಪೂರ್ವ್ವಕಂ ಮಾಡಿ ಬಿಟ್ಟ
> ನೆಲಂ ಗುಂಡಿಗೆ ಹಳ್ಳಿಯಿಂ ಬಡಗಲು ಮಡೆಯ
> ಹಳ್ಳದಲು ಹಿರಿಯ ಕೋಲ ಮತ್ತರು ೧
> ಕಂಬ ೪೫೦ ಆ ದೇವರ್ಗ್ಗೆ ನಂದಾದೀವಿಗೆಗೆ
> ಗಾಣದವರು ಬಿಟ್ಟ ಎಣ್ಣೆಗಾಣದಲು
> ಸೊಂಟಿಗೆವೊಂದು ॥"

ಎಂಬ ಉಲ್ಲೇಖ ತಳಿಬೀಡಿ ಶಾಸನದಲ್ಲಿ ಕಂಡುಬರುತ್ತದೆ. ಎಣ್ಣೆ ಉತ್ಪಾದನೆಗಾಗಿ ಕಲ್ಲು ಹಾಗೂ ಕಟ್ಟಿಗೆಯಿಂದ ಮಾಡಿದ ಗಾಣಗಳು ಕಂಡು ಬರುತ್ತವೆ. "ಗಾಣಾಯ" ಎಂಬ ತೆರಿಗೆಯನ್ನು ತೆಲ್ಲಿಗರು ತಮ್ಮ ಉತ್ಪಾದನೆಯ ಮೇಲೆ ಸಲ್ಲಿಸುತ್ತಿದ್ದರು. ಇವರು ತೆಲ್ಲಿಗರೈವತ್ತೊಕ್ಕಲು ಎಂಬ ಸಂಘವನ್ನು ಕಟ್ಟಿಕೊಂಡಿದ್ದರು. ಸಮಾಜದಲ್ಲಿ ಇವರು ಒಂದು ಮಹತ್ವದ ಅಂಗವಾಗಿದ್ದರು ಎಂಬುದು ಇದರಿಂದ ಸ್ಪಷ್ಟವಾಗುತ್ತದೆ. ವಿನಿಮಯ ಪದ್ಧತಿಯಲ್ಲಿ ಅವರ ಬದುಕು ಸಾಗುತ್ತಿತ್ತು.

ವೀಳೆಯದೆಲೆಗಳನ್ನು ಮಾರಾಟ ಮಾಡುತ್ತಿದ್ದವರೇ ತಂಬುಲಿಗರು. ಶಾಸನಗಳಲ್ಲಿ "ಹೆಗಲಗವರಿಗಳು",[೮] "ತಂಬುಲಿಗ" "ಸಾಸಿರ್ವರು",[೯] "ಹನ್ನವಣಿಗಸಾಸಿಬ್ಬರು"[೧೦] ಎಂಬ ಉಲ್ಲೇಖ ಕಂಡು ಬರುತ್ತವೆ. ತಂಬುಲಿಗ ಸಾಸಿರ್ವರು, ಹನ್ನವಣಿಗಸಾಸಿರ್ಬ್ಬರು ಇವು ಇವರ ವೃತ್ತಿ ಸಂಘಗಳಾಗಿವೆ. ಇವರು ತಮ್ಮ ಎಲೆಯ ವ್ಯಾಪಾರದ ಮೇಲೆ ತೆರಿಗೆಯನ್ನು ವಿಧಿಸುತ್ತಿದ್ದರು. 'ಎಲೆಯಾಯ' ಎಂಬ ತೆರಿಗೆಯನ್ನು ಭರಿಸುತ್ತಿದ್ದರು.

ದೇವರ ಪೂಜೆಗಾಗಿ ಹೂಗಳ ಬೇಡಿಕೆ ಹೆಚ್ಚಾಗಿತ್ತು. ಹಾಗಾಗಿ ಹೂ ಮಾರುವ ಹಾಗೂ ಕಟ್ಟಿಕೊಡುವ ವೃತ್ತಿಯು ಈ ನಾಡಿನ ಶಾಸನಗಳಿಂದ ತಿಳಿದು ಬರುತ್ತದೆ. "ಮಾಲಗಾರರು" "ಜೀಯ"[೧೧] ಎಂಬ ಉಲ್ಲೇಖ ಕಂಡು ಬರುತ್ತದೆ. ಹೂವಿನ ತೋಟಗಳ ಉಲ್ಲೇಖವಂತೂ ಅನೇಕ ಶಾಸನಗಳಲ್ಲಿ ಕಂಡು ಬರುತ್ತದೆ. ಹೀಗೆ ಅನೇಕ ಶಾಸನಗಳಲ್ಲಿ ವೃತ್ತಿ ಆಧಾರಿತ ಜಾತಿಗಳು ಕಂಡು ಬರುತ್ತವೆ.

**ಜಾತಿವ್ಯವಸ್ಥೆ :**

ಅಂದಿನ ಸಮಾಜದಲ್ಲಿ ಶ್ರಮಜೀವಿಗಳು ವಂಶ ಪರಂಪರೆಯಾಗಿ, ಕಾಯ್ದುಕೊಂಡು ಬಂದ ವೃತ್ತಿ ವೈಶಿಷ್ಟ್ಯಗಳೇ ಮುಂದೆ ಜಾತಿ ವ್ಯವಸ್ಥೆಗೆ ಕಾರಣವಾದವು. ವರ್ಣಾಶ್ರಮದಿಂದ ಕೂಡಿದ ಸಮಾಜದಲ್ಲಿ ಬ್ರಾಹ್ಮಣರಿಗೆ ಉಚ್ಚಸ್ಥಾನವಿತ್ತು. ಕೆಳಹಂತದ ಕೆಳವರ್ಗದ ಜನರು ಇದ್ದರು. ಇವರು ಅಂದಿನ ಸಮಾಜದಲ್ಲಿ ಕೀಳರಾಗಿ ಇತರರು ಅವರನ್ನು ಅವಹೇಳನ ಮಾಡುತ್ತಿದ್ದರು. ಶರಣರ ಕಾಲದಲ್ಲಿಯೂ ಕೂಡ ಈ ಸಮಾಜ ಪ್ರಬಲವಾಗಿ ಬೆಳೆಯಿತು "ಹೊಲೆಯ ನಾಯಿ ಹುಲುಸರವಿಯಿಂದ ಕರಕಷ್ಟ" ಎಂದು ಕೆಳು ವರ್ಗದವರನ್ನು ನಾಯಿಯೊಂದಿಗೆ ಹೋಲಿಸುತ್ತಿದ್ದರು. ಇದರಿಂದ ಇವರ ಸ್ಥಿತಿ ಹೀನಾಯವಾಗಿತ್ತು ಎಂಬುದು ಅರಿವಾಗುತ್ತದೆ. ಅಂತ್ಯಜನು ಹೆಸರು ಪಡೆಯಲೂ ಅನರ್ಹವಾದ ಅನಾಮಿಕನಾಗಿದ್ದ ಎಂದು ಅಂದು ಬಸವಣ್ಣನವರು ಹೇಳಿದ್ದು ನೆನಪಿಗೆ ಬರುತ್ತದೆ. ಇವರು ರಸ್ತೆಯಲ್ಲಿ ಹೋಗಬೇಕಾದರೆ ಕೈಯಲ್ಲಿ ಕೋಲನ್ನು ಹಿಡಿದು ಕುಟ್ಟಿ ಶಬ್ಧ ಮಾಡುತ್ತ, ಸೊಂಟಕ್ಕೆ ಮುಳ್ಳನ್ನು ಕಟ್ಟಿಕೊಂಡು ಬರುತ್ತಿದ್ದರೆಂದು ವಿದೇಶಿ ಪ್ರವಾಸಿಗರು ಬರೆದಿರುವರು. ಈ ಅನಿಷ್ಟ ಪದ್ಧತಿಯನ್ನು ಹೋಗಲಾಡಿಸಲು ಪ್ರಮುಖವಾಗಿ ಹನ್ನೆರಡನೇ ಶತಮಾನದ ಕಲ್ಯಾಣದ ಶಿವಶರಣರು ಪ್ರಯತ್ನಿಸಿದ್ದಾರೆ.

ಕಲ್ಯಾಣದಲ್ಲಿ ಅನುಭವ ಮಂಟಪವನ್ನು ಸ್ಥಾಪಿಸಿ 'ಸಕಲ ಜೀವಿಗಳೆಲ್ಲ ಒಂದು' ಎಂದು ಶಿವಶರಣರು ಸಾರಿದರು. "ಕೊಲ್ಲುವವನೆ ಮಾದಿಗ, ಹೊಲಸು ತಿನ್ನುವವನೆ ಹೊಲೆಯ" ಎಂಬ ಮಾತುಗಳಿಂದ ಬಸವಣ್ಣನವರ ನೆನಪಾಗುತ್ತದೆ. ಈ ಮಾತು ಶರಣರ ಮನೋಭಾವವನ್ನು ಪ್ರತಿಬಿಂಬಿಸುತ್ತಿದ್ದು, ಮೊದಲಿನ ವ್ಯವಸ್ಥೆಯನ್ನು ನಿರ್ನಾಮ ಮಾಡಲು ಪ್ರಯತ್ನಿಸಿತೆನ್ನಬೇಕು. "ವಿಪ್ರ ಮೊದಲು, ಅಂತ್ಯಜ ಕಡೆಯಾಗಿ ಎಲ್ಲರೂ ಒಂದೆಂಬ" ಬಸವಣ್ಣನವರ ನಿಲುವು ಶರಣ ಸಮಾಜಕ್ಕೆ ಹೊಸ ಚಾಲನೆಯನ್ನು ನೀಡಿತು. ಇದರಿಂದ ಸಮಾಜದಲ್ಲಿರುವ ಎಲ್ಲಾ ಜೀವಿಗಳಿಗೂ ಸುಃಖದಿಂದ ಬಾಳಲು ಅನುಕೂಲವಾಯಿತ್ತೆನ್ನಬಹುದು.

## ಶ್ರಮಿಕ ವರ್ಗ :

ವಿವಿಧ ವೃತ್ತಿಗಳನ್ನಾಶ್ರಯಿಸಿದ ಕುಶಲಕರ್ಮಿಗಳು ಶ್ರಮಿಕ ವರ್ಗವನ್ನು ಪ್ರತಿನಿಧಿಸುತ್ತಾರೆ. ಸಗರನಾಡಿನ ಶಾಸನಗಳಲ್ಲಿ ಉಲ್ಲೇಖಗೊಂಡ ಶ್ರಮಿಕ ವರ್ಗವನ್ನು ಇಲ್ಲಿ ಪರಿಶೀಲಿಸಬಹುದು. "ಅಕ್ಕಸಾಲಿಗ, ಕಂಚಗಾರ, ಕಮ್ಮಾರ, ಶಿಲ್ಪಿ, ಬಡಿಗ ಈ ಕುಶಲ ಕರ್ಮಿಗಳನ್ನು ಪಾಂಚಾಳರೆಂದು ಕರೆಯುತ್ತಿದ್ದರು".[೧೩] ಚಿನ್ನದ ಕೆಲಸವನ್ನು ಮಾಡುವ ಅಕ್ಕಸಾಲಿಗರು, "ತಾಮ್ರ ಶಾಸನಗಳನ್ನು ಕೆತ್ತಲು, ನಾಣ್ಯಗಳನ್ನು ತಯಾರಿಸಲು ನೇಮಕಗೊಳ್ಳುತ್ತಿದ್ದರು".[೧೪] ಬಡಗಿಗಳು ಒಕ್ಕಲುತನಕ್ಕೆ ಬೇಕಾದ ಸಾಮಾನುಗಳನ್ನು ಮತ್ತು ಜನ ಸಾಮಾನ್ಯರ ಬಳಕೆಗೆ ಬೇಕಾಗುವ ಮನೆ ಉಪಯೋಗಿ ವಸ್ತು ಮುಂತಾದವುಗಳನ್ನು ತಯಾರಿಸುತ್ತಿದ್ದರು. ಕಮ್ಮಾರರು ಕಬ್ಬಿಣದ ಕೆಲಸವನ್ನು ಮಾಡುತ್ತಿದ್ದರು. ಇವರು ಒಕ್ಕಲುತನಕ್ಕೆ ಬೇಕಾಗುತ್ತಿದ್ದ ಅನೇಕ ಸಾಮಾನುಗಳನ್ನು ಮಾಡುತ್ತಿದ್ದರಲ್ಲದೇ ಖಡ್ಗಾದಿ ಶಸ್ತ್ರಾಸ್ತ್ರಗಳನ್ನು ತಯಾರಿಸುತ್ತಿದ್ದರು. ಬಡಿಗ, ಕಮ್ಮಾರ, ಅಕ್ಕಸಾಲಿಗರು, ಬೆರಟ್ಟುಂಬರು ಇವರು "ಒಕ್ಕಲ ಅಡ್ಡ"[೧೫] ಎಂಬ ಕೂಲಿಯನ್ನು ಪಡೆಯುತ್ತಿದ್ದರು. "ಚುಕೇಣಿಕಾರರು, ಕೋಲ್ಕಾರರು",[೧೬] ಕುಶಲ ಕರ್ಮಿಗಳಾದ "ವಿಶ್ವಕರ್ಮ್ಮರು, ಚಿತ್ರಕಂರ್ಮ್ಮ, ಕಾಷ್ಟಕರ್ಮ್ಮ, ರತ್ನಕರ್ಮ್ಮ, ಗುಣಕರ್ಮ್ಮ, ಪತ್ರಭೇಧ"[೧೭] ಇವರಿಗೆ ಲಾಕುಳಾಗಮದ ಜ್ಞಾನವಿತ್ತು. ಸಿಳಾಕರ್ಮ, ಯೂಪಕರ್ಮ, ಲೇಪಕರ್ಮಗಳನ್ನು ಅರಿತಿದ್ದರು. ಕಂಠಾಭರಣ, ಬಾಹುಪೂರ, ನೂಪುರಗಳನ್ನು ಮಾಡುತ್ತಿದ್ದರು.

## ಇತರ ವೃತ್ತಿಗಳು :

ನೇಕಾರರು ಮಗ್ಗದಿಂದ ಬಟ್ಟೆಗಳನ್ನು ನೇಯುತ್ತಿದ್ದರು. ಇವರನ್ನು ಸೊಲಿಗ ಸಮಯಂಗಳು ಎಂದು ಕರೆಯಲಾಗಿದೆ. ಒಕ್ಕಲಿಗ ಇವರು ವ್ಯವಸಾಯ ಮಾಡುತ್ತಿದ್ದರು ಅರವತ್ತೊಕ್ಕಲು ಎಂಬ ಸಂಘವನ್ನು ಕಟ್ಟಿಕೊಂಡಿದ್ದರು. ಕ್ಷೌರದ ಕೆಲಸ ಮಾಡುವವರನ್ನು ಶಾಸನಗಳು ನಾವಿದರು ಎಂದು ಕರೆದಿವೆ. "ಅಂಕಕಾರರು (ಅರಸನ ಸಹಾಯಕ) ಬೀರರು (ಪರಾಕ್ರಮಿಗಳು) ಬಾರಿಕರು (ಗ್ರಾಮದ ಕಾವಲುಗಾರರು)"[೧೭] ಇವರನ್ನು ಸಾರ್ವಜನಿಕ ಸ್ಥಳಗಳಾದ ಬಾವಿ, ದೇವಾಲಯ, ಬನಗಳನ್ನು ಕಾಯಲು ಆಳುಗಳನ್ನಾಗಿ ನೇಮಿಸುತ್ತಿದ್ದರು. ಇವರು ದೇವಾಲಯಗಳಿಗೆ ದತ್ತಿ ಕೊಟ್ಟಿದ್ದು ಕುಳಗೇರಿ ಶಾಸನದಿಂದ ತಿಳಿದು ಬರುತ್ತದೆ. "ಅಗಸ, (ಬಟ್ಟೆ ತೊಳೆಯುವವ) ಚಮ್ಮಾರ (ಚರ್ಮದ ವಸ್ತುಗಳನ್ನು ತಯಾರಿಸುವವ) ಗಾರುಡಿಗ, ಕೊರಮ (ಬುಟ್ಟಿ ಹೆಣೆಯುವವ) ನಾವಿಕ, ಬೆಸ್ತ, ಬೇಡ ಮತ್ತು ನೆಯ್ಗೆ"[೧೮] ಎಂಬ ಎಂಟು ವೃತ್ತಿ ಸಂಘಗಳಿದ್ದವು. ಇಲ್ಲಿ ಎಂಟು ಹಿಟ್ಟಿನ ಬಗ್ಗೆ ಉಲ್ಲೇಖವಿದೆ. ಕ್ರಮೇಣ ಈ ವೃತ್ತಿ ಸಂಘಗಳಲ್ಲಿ ಪ್ರಾದೇಶಿಕ ಬದಲಾವಣೆಗಳಾಗಿರಬೇಕು. ಎಂಟು ಹಿಟ್ಟು, ಹನ್ನಿ ಹಿಟ್ಟುಗಳ ಉಲ್ಲೇಖ ಶಾಸನದಲ್ಲಿ ಹಿಂದು ಮುಂದಾಗಿ ಬರುತ್ತವೆ. "ಮೂಲಿಗ"[೧೯]

"ತಿಕೇಶ್ವರ ದೇವರ ಪೂಜೆ ಪುನಸ್ಕಾರ
ಧೂಪದೀಪನಿವೇದ್ಯಕ್ಕಂ ಧಾರಾಪೂರ್ವ್ವಕಂ
ಮಾಡಿ ಬಿಟ್ಟ ಕಯಿ ಮೂಲಿಗರ ಸ್ತಳ ॥"

ಎಂಬ ಉಲ್ಲೇಖ ಕೆಲ್ಲೂರು ಶಾಸನದಲ್ಲಿ ಕಂಡುಬರುತ್ತದೆ. ಮೂಲಿಗ ಎನ್ನುವುದು ವಂಶಪಾರಂಪರ್ಯದಿಂದ ಮುಂದುವರೆಸಿಕೊಂಡು ಬಂದ ಊರಿನ ಮುಖ್ಯಸ್ಥನನ್ನು (ಗಾವುಂಡ) ಸೂಚಿಸುತ್ತದೆ. ಇಲ್ಲಿನ ಮೂಲಿಗ ವೃತ್ತಿಯನ್ನು ಗಾವುಂಡುಗಳ ದತ್ತಿ ಇಲ್ಲವೆ, ಮೂಲ ದತ್ತಿ ಎಂದು ಅರ್ಥೈಸಬೇಕಾಗುತ್ತದೆ.

ಒಟ್ಟಿನಲ್ಲಿ ಶ್ರಮ ಜೀವಿಗಳಾದ ಒಕ್ಕಲಿಗರು, ತಂಬುಲಿಗರು, ಜೇಡ, ಹಟಗಾರ, ಗಾಣಿಗ, ಅಗಸ, ನಾವಿಂದ, ಕಂಚಗಾರ, ಕೇಣಿಕಾರ, ಕೋಲ್ಕಾರ, ಬೋಗಾರ, ಕಲ್ಕುಟಿಗ, ಬಡಿಗ, ಕಮ್ಮಾರ, ಅಕ್ಕಸಾಲಿಗ, ಸೊಲ್ಲಿಗ, ಸಮಯ, ಮಂಡಗೆಯರು, ಮೂಲಿಗರು ಮುಂತಾದ ವೃತ್ತಿ ಸಂಘದವರು ತಮ್ಮದೇ ಆದ ಸಂಘಗಳನ್ನು ಕಟ್ಟಿಕೊಂಡು ಜೀವನ ಸಾಗಿಸುತ್ತಿದ್ದ ಬಗ್ಗೆ ಸಗರನಾಡಿನ ಶಾಸನಗಳಿಂದ ತಿಳಿದು ಬರುತ್ತದೆ.

## ೪.೨. ಸ್ತ್ರೀಯರ ಸ್ಥಾನಮಾನ :

ವೇದಗಳ ಕಾಲದಲ್ಲಿ ಸ್ತ್ರೀಯರ ಸ್ಥಾನಮಾನ ಉತ್ತಮವಾಗಿತ್ತು. ಆದರೆ ಸ್ಮೃತಿ ಕಾಲದಲ್ಲಿ ಅವಳ ಸ್ಥಾನಮಾನಕ್ಕೆ ಧಕ್ಕೆ ಉಂಟಾಯಿತು. ಹೀಗಾಗಿ ಸ್ತ್ರೀ ಬಾಲ್ಯದಲ್ಲಿ ತಂದೆ-ತಾಯಿಗಳ ಆಶ್ರಯದಲ್ಲಿ, ಯೌವ್ವನದಲ್ಲಿ ಗಂಡನ ಆಶ್ರಯದಲ್ಲಿ, ವೃದ್ಯಾಪ್ಯದಲ್ಲಿ ಮಕ್ಕಳ ಆಶ್ರಯದಲ್ಲಿ ಉಳಿಯಬೇಕಾಯಿತು. ಮನು ಪ್ರಕಾರ "ನ ಸ್ತ್ರೀ ಸ್ವಾತಂತ್ರ್ಯ ಮರ್ಹತಿ" ಎಂದು ಹೇಳಿದ್ದಾನೆ. ಆದರೆ ಜನ ಇದನ್ನು ತಮಗೆ ಬೇಕಾದ ರೀತಿಯಲ್ಲಿ ಅರ್ಥೈಸಿಕೊಂಡರು. ಸಗರನಾಡಿನ ಶಾಸನಗಳಲ್ಲಿ ಸ್ತ್ರೀಯರು ಆಡಳಿತ ಹಾಗೂ ದಾನದತ್ತಿಗಳ ಸಂದರ್ಭದಲ್ಲಿ ಮಾತ್ರ ಕಂಡು ಬರುತ್ತಾರೆ. ಈ ನಾಡಿನ ಆಡಳಿತದ ಜವಾಬ್ದಾರಿಯನ್ನು ನಿರ್ವಹಿಸಿದ ರಾಣಿ ವರ್ಗದ ಸ್ತ್ರೀಯರನ್ನು ಈ ಮಹಾ ಪ್ರಬಂಧದ ರಾಜಕೀಯ ವ್ಯವಸ್ಥೆ ಎಂಬ ಅಧ್ಯಾಯದಲ್ಲಿ ಗಮನಿಸಿರುವುದರಿಂದ ಇಲ್ಲಿ ಇತರ ಸ್ತ್ರೀ ಸಮಾಜವನ್ನು ಮಾತ್ರ ಗಮನಿಸಲಾಗಿದೆ. ಕೆಂಭಾವಿ ಮಾಳಿಯಬ್ಬರಸಿ ತನ್ನ ಹೆಸರಲ್ಲೇ "ಮಾಳಿಬೇಶ್ವರ ದೇವಾಲಯ ನಿರ್ಮಿಸಿ ೧೦೦೦ ಮತ್ತರು ಭೂದತ್ತಿ ಬಿಟ್ಟಿದ್ದಾಳೆ"[೨೦]. "ಬ್ರಾಹ್ಮಣ ದೇವಿಕವ್ವೆ ಉಪಾಧ್ಯಾಯಿನಿಯಾಗಿ ಬೋಧಿಸಿದ್ದಾಳೆ"[೨೧]. ರಾಜಪರಿವಾರದ ಮತ್ತು ಅಧಿಕಾರ ವರ್ಗದ ಸ್ತ್ರೀಯರು ಧಾರ್ಮಿಕ ಸಮಾರಂಭಗಳಲ್ಲಿ ಮುಕ್ತವಾಗಿ ಭಾಗವಹಿಸುತ್ತಿದ್ದ ಬಗ್ಗೆ ಉಲ್ಲೇಖಗಳು ಲಭಿಸುತ್ತವೆ. ಆದರೆ ಸಾಮಾನ್ಯ ವರ್ಗದ ಸ್ತ್ರೀಯರ ಹೆಸರಾಗಲಿ, ಉಲ್ಲೇಖಗಳಾಗಲಿ ಕಂಡು ಬರುವುದಿಲ್ಲ. ಈ ಅಂಶವು ಅಂದು ಸಾಮಾನ್ಯ ವರ್ಗದ ಸ್ತ್ರೀಯರು ಯಾವುದೇ ವಿಶೇಷ ಸ್ಥಾನಮಾನಗಳನ್ನು ಹೊಂದಿಲ್ಲ ಎನ್ನುವುದು ಎತ್ತಿ ತೋರಿಸುತ್ತದೆ.

## ವೇಶ್ಯೆಯರು :

ಕರ್ನಾಟಕದಲ್ಲಿ ಕ್ರಿ.ಶ. ಆರನೇ ಶತಮಾನದಿಂದ ಒಂಬತ್ತನೇ ಶತಮಾನದ ಅವಧಿಯಲ್ಲಿ ಸೂಳೆ ಪದ ಪರ್ಯಾಯವಾಗಿ ಕಂಡು ಬಂದಿದ್ದು ಹೀಗೆ. "ಪೊಡ್ಡಿ, ಪೋಟಿ, ಬೊಡ್ಡಿಗಳು ಎಂಬ ಶಬ್ದಗಳು ಬಳಕೆಯಾಗಿವೆ."[೨೨] ಈ ವೇಳೆಗೆ ಸೂಳೆ ಸಮಾಜವು ಸಾಮಾಜಿಕವಾಗಿ, ರಾಜಕೀಯವಾಗಿ, ಆರ್ಥಿಕವಾಗಿ, ಉನ್ನತ ಸ್ಥಾನ ಪಡೆದಿದ್ದರು. ಗ್ರಹಿಣಿ ಸಮಾಜದ ಜೊತೆ-ಜೊತೆಯಲ್ಲಿಯೇ ಬೆಳೆದು ಬಂದಿದೆ. ಋಗ್ವೇದದಲ್ಲಿ ಗಣಿಕಾ ಸ್ತ್ರೀಯರ ಉಲ್ಲೇಖವಿದೆ. "ವ್ಯಕ್ತಿಯೊಬ್ಬನ ಜೊತೆ ಇದ್ದವಳು ವ್ಯಕ್ತಿಸೂಳೆ, ದೇವರ ಹೆಸರಿನಲ್ಲಿ ಬಿಟ್ಟವಳು ದೇವಸೂಳೆ, ಹಣಕ್ಕಾಗಿ ದೇಹ ಮಾರುವವಳು ಸಮಾಜ ಸೂಳೆ". [೨೩] ಒಬ್ಬನ ಜೊತೆಯಲ್ಲಿರುವವಳು ವ್ಯಕ್ತಿ ಸೂಳೆ. ದೇವಾಲಯದಲ್ಲಿ ಅಂಗಭೋಗ-ರಂಗಭೋಗದ

ಕಾರ್ಯ ಚಟುವಟಿಕೆಗಳು ಹೆಚ್ಚಿದಂತೆ, ದೇವರ ಸೇವೆಗಾಗಿ ಹೆಣ್ಣು ಮಕ್ಕಳನ್ನು ಬಿಡುತ್ತಿದ್ದರು. ಇವರು ಕೇವಲ ದೇವರ ಪೂಜೆಗಾಗಿ ಮೀಸಲಾಗಿದ್ದರು. ಇವರನ್ನು ದೇವರ ಸೂಳೆಯರೆಂದು ಕರೆಯಲಾಗಿದೆ. ಇವರು ವಿವಾಹವಾಗದೆ, ಇತರ ವೇಶ್ಯೆಯರಿಗಿಂತ ಭಿನ್ನವಾಗಿದ್ದರು. ಇವರು ಸಮಾಜದ ನಿಯಮಗಳನ್ನು ಅನುಸರಿಸುತ್ತಿದ್ದರು. "ನೃತ್ಯ",[೨೪] "ಪಾತ್ರಂ",[೨೫] "ಪಾತ್ರ ಪಾವುಳ",[೨೬]

> "ಶ್ರೀ ಸಂಗಮೇಶ್ವರದೇವರ್ಗ್ಗೆಯೊಳೆಯಾಗಿ
> ನಡೆವ ಸಗರವಯ್ನೂರರ ಬಳಿಯ ಬಾಡಂ
> ಗಂಡಲೂರು ಸೂಗೂರು ಕೋಬಾಳನ್ತು ಮೂಪುರವುಭೆಯ
> ಸಾಮ್ಯವಂ ದೇವರಪೂಜೆ ಪುನಸ್ಕಾರವಂಗಭೋಗ ನೈವೇದ್ಯ
> ಖಂಡಸ್ಫುಟಿತ ಜೀರ್ಣ್ನೋದ್ಧಾರ ಚೈತ್ರ ಪವಿತ್ರಾರೋಹಣ
> ಪಾತ್ರ ಪಾವುಳಕ್ಕೆಂದಾ ದೇವರ ಶ್ರೀಪಾದಪದ್ಮಂಗಳು॥"

ಎಂಬ ಉಲ್ಲೇಖ ಸಂಗಮ ಶಾಸನದಿಂದ ತಿಳಿದು ಬರುತ್ತದೆ.

> "ಸೂಳೆ ಸಜ್ಜನ"[೨೭] "ಶ್ರೀ ಸ್ವಸ್ತಿ ಶ್ರೀಮತು ತ್ರಿಭುನವ ಮಲ್ಲನ ಭೋಗಾರ
> ನಖರಂಗಳು ನೂರಿಪ್ಪತ್ತೊಕ್ಕಲುಂ ಶಿವಾಲ್ಯ ಮಾಡಿಸಿದಂXX ಗಳಿXX
> ರತ್ನಶಿವನ ಕಾಲಂ ಕರ್ಚ್ಚಿ ಧಾರಾಪೂರ್ವ್ವಕಂ ಮಾಡಿ ಕೊಟ್ಟ ಆಯವೆಂತೆX
> Xಎರಡು ಬಾಡ ಮಳಿಗೆಯಲ್ಲಿ ಮತ್ತ ಎರಡು ಸೂಳೆ ಸಜ್ಜನ
> ಕೊಟ್ಟಲ್ಲಿಂ ॥"

ಎಂದು ಉಲ್ಲೇಖಿಸಿದೆ. ಸೂಳೆ ಎಂಬುದು "ಸೂರ್" ಎಂಬ ಪದದ ಮುಂದುವರಿದ ರೂಪವಾಗಿದ್ದು, ಅದು ದೇವಾಲಯದಲ್ಲಿ ಸರತಿಯ ಮೇಲೆ ಸೇವೆ ಸಲ್ಲಿಸುವುದನ್ನು ಸೂಚಿಸುತ್ತಿರಬೇಕು. ಪಾತ್ರದವಳಾಗಲಿ, ಸೂಳೆಯಾಗಲಿ, ಗಣಿಕಾಸ್ತ್ರೀ ಅಥವಾ ವೇಶ್ಯಾವರ್ಗಕ್ಕೆ ಸೇರಿದವರಲ್ಲ. ಇವರು ದೇವಾಲಯದ ಸೇವಾವರ್ಗಕ್ಕೆ ಸೇರಿದವರು. ಅದರಲ್ಲೂ ವಿಶೇಷವಾಗಿ ರಂಗಭೋಗದ ಸೇವಾ ವರ್ಗಕ್ಕೆ ಸೇರಿದವರಾಗಿದ್ದರು. ವೇಶ್ಯೆಯರು ನೃತ್ಯ ಮತ್ತು ಸಂಗೀತದಲ್ಲಿ ಪರಿಣಿತಿಯನ್ನು ಹೊಂದಿದ್ದರು. ಆದ್ದರಿಂದ ಇವರನ್ನು ಸೂಳೆ ಕಂಬದವರು ಎಂದು ಶಾಸನಗಳು ಕರೆದಿವೆ. ಹಾಗಾಗಿ ಇವರು ಇತರರನ್ನು ಸಂತೋಷಗೊಳಿಸುತ್ತಿದ್ದರು. ಕೇವಲ ಇವರು ಭೋಗಕ್ಕೆ ಮಾತ್ರ ಸೀಮಿತವಾಗಿರದೇ, ಸಾಮಾಜಿಕ ಮತ್ತು ಧಾರ್ಮಿಕ ಸಭೆ–ಸಮಾರಂಭಗಳಲ್ಲಿ ಭಾಗವಹಿಸುತ್ತಿದ್ದರು. ಆದರೆ

ಹನ್ನೆರಡನೇ ಶತಮಾನದ ಶಿವಶರಣರು ಧಾರ್ಮಿಕ ಜೀವನಕ್ಕೆ ಹೆಚ್ಚು ಒತ್ತು ಕೊಟ್ಟಿರುವುದರಿಂದ ಇವರ ಸಹವಾಸ ಹೀನಾಯವಾಗಿ ಕಂಡಿರಬಹುದು. ಅಂತೆಯೇ "ಸೂಳೆಗೆ ಲಿಂಗ ಸಾಹಿತ್ಯವ ಮಾಡಿದಾತ ಏಳೇಳು ಜನ್ಮದಲ್ಲಿ ಶ್ವಾನನ ಬಸಿರಲ್ಲಿ ಬಪ್ಪನು".[೨೮] ಎಂದು ಚನ್ನಬಸವಣ್ಣ ಕಟುವಾಗಿ ನುಡಿದಿದ್ದಾನೆ.

ಸಾರ್ವಜನಿಕರ ಕಾಮತೃಪ್ತಿಯ ಅವಶ್ಯಕತೆ ಪೂರೈಸಲು ಹಾಗೂ ಹಣಕ್ಕಾಗಿ ತನ್ನ ದೇಹವನ್ನು ಮಾರಿಕೊಳ್ಳುವವರು ಸಮಾಜ ಸೂಳೆ ಎಂದು ಹೇಳಬಹುದು. ಸಮಾಜದ ಅನಿವಾರ್ಯ ಎಂಬಂತೆ ಈ ಸಮಾಜದಲ್ಲಿ ಸೂಳೆಗಾರಿಕೆ ಬೆಳೆದು ಬಂದಿದೆ. ಶಮನಗೊಳ್ಳದ ಮಾನವನ ಕಾಮ ಸೂಳೆಗೇರಿಯ ಆಶ್ರಯವಿರದಿದ್ದರೆ ಹುಚ್ಚಾಗಿ ಹರಿದು ಗ್ರಹಸ್ಥ ಸಮಾಜದ ಸ್ವಾಸ್ತ್ಯವನ್ನೇ ಅಲುಗಿಸಬಹುದಿತ್ತು. ಈ ನಿಟ್ಟಿನಲ್ಲಿ ಸಮಾಜಸೂಳೆಯರು ಅವಶ್ಯಕವೆಂದೇ ಹೇಳಬಹುದು. ಸೂಳೆಸಜ್ಜನ, ಸೂಳೆಕಂಬ ಎಂಬ ಉಲ್ಲೇಖ ಸಗರನಾಡಿನ ಹಗರಟಗಿ, ಯಾತನೂರು, ಸಂಗಮ ಶಾಸನದಲ್ಲಿ ಕಂಡು ಬರುತ್ತದೆ. ಸಮಾಜ ಸೂಳೆಯರ ಬಗ್ಗೆ ಶಾಸನಗಳಲ್ಲಿ ಹೆಚ್ಚು ಉಲ್ಲೇಖ ಕಂಡು ಬರುವುದಿಲ್ಲ. ಆದರೆ ಕಾವ್ಯಗಳಲ್ಲಿ ಇವರ ಬಗ್ಗೆ ಉಲ್ಲೇಖವಿದೆ.

## ತೊತ್ತುಗಳು :

ಸೂಳೆಗಾರಿಕೆಯಂತಹ ಮತ್ತೊಂದು ಅನಿಷ್ಠ ಸಂಪ್ರದಾಯ ತೊತ್ತುಗಳದು. ತೊತ್ತುಗಳು ಎಂದರೆ ಸ್ತ್ರೀ ಸೇವಕಿಯರು. ಒಮ್ಮೆ ತೊತ್ತನ್ನು ಕೊಂಡ ಒಡೆಯರು ಅವರ ಮೇಲೆ ಸಂಪೂರ್ಣ ಅಧಿಕಾರ ಹೊಂದಿದ್ದರು. ಹಾಗೆ ಇವರನ್ನು ಇನ್ನೊಬ್ಬರಿಗೆ ಮಾರುವ ಅಧಿಕಾರವನ್ನು ಹೊಂದಿದ್ದರು. ಇಂತಹ ಒಂದು ಗಂಭೀರ ವಿಷಯ ಈ ನಾಡಿನ ಕೊಂಡಗುಳಿ ಶಾಸನದಲ್ಲಿ ಉಲ್ಲೇಖಗೊಂಡಿದೆ. "ದೇವರಿಗೆ ತೊತ್ತು ಮಾರಿದಡಂ, ದೇವರಿಗೆ ಆಯಮಂ ತಿರುವರು"[೨೯] ಎಂಬ ಉಲ್ಲೇಖವಿದೆ. ಅಂದು ತೊತ್ತುಗಳ ಮಾರಾಟ ಮಾನ್ಯತೆ ಪಡೆದಿತ್ತು.

## ಸತಿ ಸಹಗಮನ ಪದ್ಧತಿ :

ಸತಿ ಪದ್ಧತಿ ಉಗಮದ ಬಗ್ಗೆ ನಿಖರವಾಗಿ ತಿಳಿದು ಬಂದಿಲ್ಲ. ಸತಿ ಪದ್ಧತಿ ಎಂದರೆ "ಮರಣ ಹೊಂದಿದ ಪತಿಯ ಶವದೊಡನೆ ಅಗ್ನಿ ಪ್ರವೇಶ ಮಾಡುವುದು. ಸಹಗಮನ ಎಂದರೆ, ದೂರದ ಪ್ರದೇಶದಲ್ಲಿ ಮಡಿದ ಪತಿಯ ಶವ ಸಿಗದೇ ಹೋದರೆ, ಆತನ ಪ್ರೀತಿಯ

ವಸ್ತುವಿನೊಡನೆ ಅಗ್ನಿ ಪ್ರವೇಶ ಮಾಡುವುದು ಅನುಗಮನ".[೩೦] ಸತಿ ಪದ್ಧತಿ ಸಂಪ್ರದಾಯಕ್ಕೆ ವಿದ್ವಾಂಸರು ಹಲವಾರು ಕಾರಣಗಳನ್ನೂ ನೀಡಿದ್ದರೂ ಸಹ ಪುರುಷರ, ಪುರೋಹಿತರ ಮತ್ತು ಪ್ರಭುಗಳ ಒತ್ತಾಯ, ಮುಗ್ಧ ಸ್ತ್ರೀಯರ ಒತ್ತಾಸೆಗಳಿಂದಾಗಿ ಈ ಪದ್ಧತಿ ಸಮಾಜದಲ್ಲಿ ಒಂದು ದೈವಿ ಮೌಲ್ಯವಾಗಿ ಪರಿಣಮಿಸಿತು. ಇಂತಹ ಒಂದು ನಿದರ್ಶನ ಸಗರನಾಡಿನ ಶಾಸನದಲ್ಲಿದೆ.

"ಸ್ವಸ್ತಿ ಶ್ರೀ ಶಕ ವರುಷ ೧೩೧೩ನೆಯ ಖರ
ಸಂವತ್ಸರದ ಕಾಣಿರಿಕ್ತ ಬಹುಳ ನವಮಿ ಸುಕ್ರವಾರ
ದಲು ಶ್ರೀಮತು ಲಿಂಗಗೌಡರ ವೀರಪ್ಪರುಸನ
ರುತುಕನ ಮಗ ಬಂಹತ ಜಾಯನಬ್ಬೆ ಅರಸಿಯರ (ಮ)
ಹಸತಿ ಬಿರಾಯ ಹಸ್ತ ॥"

"ಕೋಳಕೂರಿನ ಲಿಂಗನ ಗೌಡರ ವೀರಪ್ಪರಸನು ವೀರ ಮರಣ ಅಪ್ಪಿದಾಗ ಆತನ ಹೆಂಡತಿ ಜಾಯನಬ್ಬೆ ಮಹಾಸತಿಯಾದಳು".[೩೧] ಸಗರ ನಾಡಿನ ಶಹಾಪುರ ತಾಲೂಕಿನ ಕೊಂಕಲದಲ್ಲಿ ಒರಟು ಕಲ್ಲಿನ ಮೇಲೆ ಒಕ್ಕೈ ಮಾಸ್ತಿ ಶಿಲ್ಪವಿದೆ. ಮಾಸ್ತಿಕಲ್ಲು ಈ ನಾಡಿನಲ್ಲಿ ಅತಿ ವಿರಳವಾಗಿ ಕಂಡು ಬರುತ್ತವೆ. ಈ ಪದ್ಧತಿ ಅಷ್ಟೊಂದು ಜನಪ್ರಿಯವಿರಲಿಲ್ಲ. ಹನ್ನೆರಡನೇ ಶತಮಾನದ ಶರಣರ ಕ್ರಾಂತಿಯಿಂದ ಈ ಅನಿಷ್ಠ ಪದ್ಧತಿಗೆ ತೆರೆ ಬಿದ್ದಿರಬೇಕು.

## ೪.೩. ಕುಟುಂಬ ವ್ಯವಸ್ಥೆ :

ಕುಟುಂಬಕ್ಕೆ ಮೂಲ ಹೆಣ್ಣು-ಗಂಡುಗಳಲ್ಲಿನ ಸಂಬಂಧವಾಗಿದೆ. ಈ ಸಂಬಂಧವೇ ವಿವಾಹವಾಗಿದೆ. ಇದರ ಮೂಲ ಉದ್ದೇಶ ಮನುಷ್ಯನ ಲೈಂಗಿಕ ಆಪೇಕ್ಷೆಯನ್ನು ಪೂರೈಸಿ ಸಂತಾನಾಭಿವೃದ್ಧಿಯನ್ನು ಹೊಂದುವುದೇ ಆಗಿದೆ. ಕೂಡಿ ಬಾಳಿ ಬದುಕುವುದು ಉದಾತ್ತ ಜೀವನ ನಡೆಸುವುದೇ ಭಾರತೀಯ ಕುಟುಂಬದ ಮುಖ್ಯ ಲಕ್ಷಣವೆಂಬುದು ಈ ನಾಡಿನ ಶಾಸನಾಧ್ಯಾಯನದಿಂದ ತಿಳಿದು ಬರುತ್ತದೆ.

ಅವಿಭಕ್ತ ಕುಟುಂಬಗಳು ಹೆಚ್ಚು ಜನಪ್ರಿಯವಾಗಿದ್ದವು ಪೂಜಾಕಾರ್ಯಗಳಲ್ಲಿ ಕುಟುಂಬದ ಎಲ್ಲ ಸದಸ್ಯರ ಹೆಸರುಗಳನ್ನು ಪ್ರಸ್ತಾಪಿಸಿದ್ದು ಕೆಲ್ಲೂರು ಶಾಸನದಿಂದ ತಿಳಿದು ಬರುತ್ತದೆ. ಅಂದಿನ ಕುಟುಂಬ ವ್ಯವಸ್ಥೆಯಲ್ಲಿ ತಮ್ಮ ಪೂರ್ವಜರ ಹೆಸರುಗಳನ್ನು ತಮ್ಮ ಮಕ್ಕಳಿಗೆ, ಮೊಮ್ಮಕ್ಕಳಿಗೆ ಇಡುತ್ತಿದ್ದರು. "ಸಗರನಾಧೀಶ್ವರಂ ನಿಂಬರಸ, ನಿಂಬರಸನ ಮಗ ನಲ್ಲಪುಲಿ, ಅಲ್ಲಪುಲಿಯ ಮಗ ಚಂದಿಮರಸ, ಚಂದಿಮರಸನ ಮಗ ನಿಂಬರಸ,

ನಿಂಬರಸನ ತಮ್ಮ ರೇವರಸ, ರೇವರಸನ ತಮ್ಮ ಮಂಜರಸ, ಮಂಜರಸನ ಮಗ ಅಲ್ಲಮಲಿಯರಸ".[೩೨] ಈ ರೀತಿ ವಂಶಾವಳಿಯ ಉಲ್ಲೇಖ ಕೆಲ್ಲೂರು ಶಾಸನದಲ್ಲಿ ಕಂಡು ಬರುತ್ತದೆ.

ಈ ರೀತಿ ಅಂದಿನ ಕುಟುಂಬ ವ್ಯವಸ್ಥೆಯಲ್ಲೂ ಹಿರಿಯರ ಬಗ್ಗೆ ಇದ್ದ ಗೌರವ ಭಾವನೆಯನ್ನು ಸೂಚಿಸುತ್ತದೆ. ಪ್ರಾರಂಭದಿಂದಲೂ ಭಾರತೀಯ ಕುಟುಂಬ ವ್ಯವಸ್ಥೆಯಲ್ಲಿ ಈ ಸಂಪ್ರದಾಯ ಬೆಳೆದುಕೊಂಡು ಬಂದಿರುವುದನ್ನು ಗಮನಿಸಬಹುದು. ಮರಣ ಹೊಂದಿದ ಹಿರಿಯರ ಹೆಸರುಗಳನ್ನು ತಮ್ಮ ಮಕ್ಕಳಿಗೆ ಇಡುವುದರ ಮೂಲಕ ಭಾವನಾತ್ಮಕವಾಗಿ ಅವರನ್ನು ತಮ್ಮ ಜೊತೆಯಲ್ಲಿ ಉಳಿಸಿಕೊಂಡಂತೆ ಭಾವಿಸಲಾಗುತ್ತಿತ್ತು.

## ವಿವಾಹ ಸಂಬಂಧಗಳು :

ಸಗರನಾಡಿನ ಯಾವ ಶಾಸನಗಳಲ್ಲಿ ಬಾಲ್ಯ ವಿವಾಹಗಳ ಉಲ್ಲೇಖ ಕಂಡು ಬರುವುದಿಲ್ಲ. ಆದರೂ ಇದನ್ನು ಸಂಪೂರ್ಣವಾಗಿ ಅಲ್ಲಗೆಳೆಯಲಾಗದು. ಬಾಲಕಿಯರು ಪೂರ್ಣವಾಗಿ ಬೆಳೆದ ನಂತರ ಅವರಿಗೆ ವಿವಾಹ ಮಾಡುತ್ತಿದ್ದರು. ನಾಲ್ಕು ವರ್ಣಗಳ ನಡುವೆ ವಿವಾಹಕ್ಕೆ ಅಡೆತಡೆಗಳಿರದಿದ್ದರೂ ದಾಸ್ಯುಗಳ ಜೊತೆ ವೈವಾಹಿಕ ಸಂಬಂಧವಿರಲಿಲ್ಲ. ವಿವಾಹಕ್ಕೆ ಪಿತ್ರುಗಳ ಸಮ್ಮತಿ ಅನಿವಾರ್ಯವಾಗಿತ್ತು. ಆದರೂ ತಮ್ಮ ಬಾಳ ಸಂಗಾತಿಯನ್ನು ಆಯ್ಕೆ ಮಾಡಿಕೊಳ್ಳುವ ಸ್ವಾತಂತ್ರ್ಯವಿತ್ತು.

ಪತಿ–ಪತ್ನಿ ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಸಮಾಜದ ಮುಂದುವರಿಕೆಗೆ ಇವರಿಬ್ಬರಲ್ಲಿರುವ ಅನ್ಯೂನ್ಯತೆ ಹಾಗೂ ಲೈಂಗಿಕ ಸಂಬಂಧ ಅವಶ್ಯಕ ಮತ್ತು ಅನಿವಾರ್ಯವೂ ಕೂಡಾ. ಇವರನ್ನು ಬೆಸೆಯುವ ಸಂಸ್ಕಾರಕ್ಕೆ ವಿವಾಹ ಎಂದು ಕರೆಯಲಾಗಿದೆ. ಸಗರನಾಡಿನ ಶಾಸನಗಳನ್ನು ಪರಿಶೀಲಿಸಿದಾಗ ಅತಿ ಸಮೀಪದ ರಕ್ತ ಸಂಬಂಧಗಳಲ್ಲಿ ವಿವಾಹಗಳು ಏರ್ಪಟ್ಟಿದ್ದು ತಿಳಿದು ಬರುತ್ತದೆ.

"ಶ್ರೀಮನ್ಮಹಾಪ್ರಧಾನಂ ದಂಡನಾಯಕಂ
ಶ್ರೀಮದಯ್ಯಂಗಳು ಶ್ರೀರುದ್ರಭಟ್ಟೋಪಾಧ್ಯಾಯರಗ್ರ
ತನುಜ ಕನ್ನಾರತ್ನ ರೂಪಸಂಪನ್ನೆ ಪತಿಹಿತಾಚಾರವ್ರತೆ
ಪರಿವಾರ ಚಿನ್ತಾಮಣಿ ಗೋತ್ರ ನಿಸ್ತಾರ ಸಾರಸಂಪುರ್ಣೆಯೆನಿಸಿದ
ಮುದ್ದಲದೇವಿಯ ಧರ್ಮ್ಮ ವಿವಾಹ ಕಾಲದಲು ‖"

ಎಂಬ ಉಲ್ಲೇಖವಿದೆ.

"ಅಂಕಲಗಿ ರುದ್ರಭಟ್ಟನು ತನ್ನ ಅಕ್ಕನಾಗಲದೇವಿಯ ಮಗ ಶಂಕರ ಭಟ್ಟೋಪಾಧ್ಯಾಯನಿಗೆ ತನ್ನ ಮಗಳಾದ ಮುದ್ದಲದೇವಿಯನ್ನು ಕೊಟ್ಟು ಧರ್ಮ ವಿವಾಹ ಮಾಡಿದ್ದು."[೩೩] ಅಂಕಲಗಿ ಶಾಸನದಿಂದ ತಿಳಿದುಬರುತ್ತದೆ.

## ಬಳುವಳಿ (ವರದಕ್ಷಣೆ) :

ದಾನಗಳಲ್ಲಿ ಶ್ರೇಷ್ಠದಾನ ಕನ್ಯಾದಾನ. ತಂದೆ ಕುಟುಂಬದ ಜವಾಬ್ದಾರಿ ವಹಿಸಿಕೊಂಡಿದ್ದರಿಂದ ಕನ್ಯಾದಾನ ಮಾಡುವ ಸಂಸ್ಕಾರ, ಸಂಪ್ರದಾಯ, ಹಿಂದೂ ಸಮಾಜದಲ್ಲಿ ಬೆಳೆದು ಬಂದಿದೆ. ಕನ್ಯಾದಾನ ಮಾಡುವುದರ ಜೊತೆಗೆ ವಿವಾಹ ಸಮಯದಲ್ಲಿ ಕನ್ನೆಗೆ ಬಳುವಳಿ ಕೊಡುವ ಪರಂಪರೆ ಅನಾದಿ ಕಾಲದಿಂದಲೂ ಬೆಳೆದು ಬಂದಿದೆ. ಇಂತಹ ಒಂದು ಉದಾಹರಣೆ ಸಗರನಾಡಿನ ಶಾಸನಗಳಲ್ಲಿ ಉಲ್ಲೇಖಗೊಂಡಿದೆ. "ರುದ್ರಭಟ್ಟನು ತನ್ನ ಮಗಳು ಮುದ್ದಲದೇವಿಯ ಧರ್ಮ ವಿವಾಹ ಕಾಲದಲ್ಲಿ ತರ್ದವಾಡಿ ಸಾಸಿರದ ಕಂಪಣ ಅಯ್ವತ್ತರ ಮೊದಲ ಬಾಡ ಅಂಕುಲಗೆ"[೩೪]

"ಶ್ರೀಮನ್ಮಹಾಪ್ರಧಾನಂ ದಂಡನಾಯಕಂ
ಶ್ರೀಮದಯ್ಯಂಗಳು ಶ್ರೀರುದ್ರಭಟ್ಟೋಪಾಧ್ಯಾಯರಗ್ರ
ತನುಜ ಕನ್ನಾರತ್ನ ರೂಪಸಂಪನ್ನೆ ಪತಿಹಿತಾಚಾರವ್ರತೆ
ಪರಿವಾರ ಚಿನ್ತಾಮಣಿ ಗೋತ್ರ ನಿಸ್ತಾರ ಸಾರಸಂಪ್ರರ್ಣ್ಣೆಯೆನಿಸಿದ
ಮುದ್ದಲದೇವಿಯ ಧರ್ಮ್ಮ ವಿವಾಹಕಾಲದಲು ಶ್ರೀಮತ್ರೈಲೋಕ್ಯ
ಮಲ್ಲದೇವರು ತರ್ದವಾಡಿ ಸಾಸಿರದ ಬಳಿಯ ಕಂಪಣ
ಅಯ್ವತ್ತರ ಮೊದಲಬಾಡ ಅಂಕುಲಗೆಯ ಧಾರಾಪೂರ್ವಕವಾಗಿ
ಸರ್ವನಮಶ್ಯಂ ಮಾಡಿ ಕೊಟ್ಟುದನೆ ‖"

ಎಂಬಲ್ಲಿ ಅಂಕುಲಗೆಯನ್ನು ಬಳುವಳಿಯಾಗಿ ಕೊಟ್ಟಿದ್ದು ಈ ನಾಡಿನ ಶಾಸನದಿಂದ ತಿಳಿದು ಬರುತ್ತದೆ.

## ಕನ್ಯಾಶುಲ್ಕ (ತೆರವು) :

ವಿವಾಹದ ಸಮಯದಲ್ಲಿ ಹೆಣ್ಣಿನವರು, ಗಂಡಿಗೆ ಬಳುವಳಿ ಕೊಡುವುದಕ್ಕೆ ಕನ್ಯಾಶುಲ್ಕ (ತೆರವು) ಎಂದು ಕರೆಯುತ್ತಾರೆ. ಆರ್ಷ ವಿವಾಹ ಪದ್ಧತಿಯಲ್ಲಿ ಮನು ಹೇಳಿಕೆಯ

ಪ್ರಕಾರ ಕನ್ಯಾಪಿತೃ ವರನ ಕಡೆಯಿಂದ ಒಂದು ಜೊತೆ ಗೋವುಗಳನ್ನು ತೆಗೆದುಕೊಂಡು ತನ್ನ ಮಗಳನ್ನು ವರನಿಗೆ ಒಪ್ಪಿಸುತ್ತಾನೆ. ಇಂತಹ ಒಂದು ಉದಾಹರಣೆ ಈ ನಾಡಿನ ಶಾಸನದಲ್ಲಿ ಉಲ್ಲೇಖಗೊಂಡಿದೆ. "ದೇವರಿಗೆ ಸರ್ವ ನಮಸ್ಯವಾಗಿ ಬಿಟ್ಟ ಕೂಸು, ಕುದುರೆ, ಎತ್ತು, ತೊತ್ತು, ಭತ್ತ ಏನು ಮಾರಿದಡಂ ದೇವರಿಗೆ ಆಯಮಂ ತಿರುವರು"[೩೫] ಎಂಬ ಉಲ್ಲೇಖವಿದೆ. ಇಲ್ಲಿ ಹೆಸರಿಸಲಾದ ಕೂಸು ಕನ್ಯೆಯನ್ನು ಪ್ರತಿನಿಧಿಸುತ್ತದೆ. ಕೂಸನ್ನು ಧಾರೆಯೆರೆದು ಕೊಡುವಾಗ ತೆಗೆದುಕೊಂಡ ಕನ್ಯಾಶುಲ್ಕದ ಮೇಲಿನ ತೆರುವಿನ ಒಂದು ಭಾಗ ಆಯವಾಗಿ ಕೊಡಬೇಕಿತ್ತೆಂಬುದನ್ನು ಸೂಚ್ಯವಾಗಿ ಹೇಳಿದೆ. ಅಂದಿನ ಕಾಲದಲ್ಲಿಯೂ ಕೂಡ ಕನ್ಯಾಶುಲ್ಕ (ತೆರವು) ಕೊಡುವ ಪದ್ಧತಿ ಜಾರಿಯಲ್ಲಿತ್ತೆಂಬುದು ತಿಳಿದು ಬರುತ್ತದೆ. ಇಂದಿಗೂ ಕೆಲವೊಂದು ಜನಾಂಗದಲ್ಲಿ ಈ ಪದ್ಧತಿ ಬೆಳೆದು ಬಂದಿದೆ.

## ಬಹುಪತ್ನಿತ್ವ :

ಬಹುಪತ್ನಿತ್ವ ಪದ್ಧತಿ ಅನಾದಿ ಕಾಲದಿಂದಲೂ ಇದೆ. ಅದರಲ್ಲೂ ಪ್ರಭು ವರ್ಗದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಕಂಡು ಬರುವ ಈ ಪದ್ಧತಿ ಸಾಮಾನ್ಯರಲ್ಲಿ ಇಲ್ಲವೆನ್ನುವಷ್ಟು ವಿರಳವಾಗಿತ್ತು. ರಾಜ–ಮಹಾರಾಜರು ಯಾವಾಗಲೂ ಬಹುವಲ್ಲಭರು. ಕಲ್ಯಾಣ ಚಾಲುಕ್ಯ ಆರನೇ ವಿಕ್ರಮಾದಿತ್ಯನಿಗೆ ಇಪ್ಪತ್ತು ಜನ ರಾಣಿಯರಿದ್ದದ್ದು ತಿಳಿದು ಬರುತ್ತದೆ. ಇವರ ಹೆಸರುಗಳು ಈ ಮಹಾಪ್ರಬಂಧದ ರಾಜಕೀಯ ವ್ಯವಸ್ಥೆಯಲ್ಲಿ ಗಮನಿಸಲಾಗಿದೆ. ಹಿರಿಯವಳು ಅಗ್ರಮಹಿಷಿ ಅಥವಾ ಪಿರಿಯರಸಿ. ಇವಳು ರಾಜನ ಜೊತೆಯಲ್ಲಿ ಅರಮನೆಯಲ್ಲಿಯೇ ಇರುತ್ತಿದ್ದಳು. ಇನ್ನುಳಿದ ರಾಣಿಯರು ರಾಜಕೀಯದಲ್ಲಿ ತೊಡಗುವಂತೆ ಮಾಡಿ ಅವರಿಗೆ ಕೆಲ ಪ್ರದೇಶಗಳನ್ನು ಬಿಟ್ಟು ಕೊಟ್ಟಿದ್ದನು. ಸಮಾಜದಲ್ಲಿ ಇವರಿಗೂ ಗೌರವವಿತ್ತು.

## ದಾಂಪತ್ಯ :

"ಭಾರತೀಯ ಪರಂಪರೆ ಯಾವಾಗಲೂ ಆದರ್ಶ ದಾಂಪತ್ಯವನ್ನು ಎತ್ತಿ ಹಿಡಿದಿದೆ. ಸತಿ–ಪತಿ ಗಳಿಬ್ಬರೂ ಜೀವನದುದ್ದಕ್ಕೂ ಸಹ ಯಾತ್ರಿಕರು. ಧಾರ್ಮಿಕ ಆಚರಣೆಯಲ್ಲಂತೂ ಅವರು ಒಟ್ಟಾಗಿರಬೇಕು. ಋಗ್ವೇದ ಸೂಕ್ತಗಳು ದೇವತೆಗಳಿಗೆ ಒಟ್ಟಾಗಿ ಆಹುತಿಗಳನ್ನರ್ಪಿಸುವ ದಂಪತಿಗಳನ್ನು ಅನುಗ್ರಹಿಸುವಂತೆ ಪ್ರಾರ್ಥಿಸುತ್ತವೆ".[೩೬] ಸಂಸಾರಿಕ ಜೀವನವನ್ನು ಕುರಿತು ಶಿವಶರಣರು 'ಸತಿಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ'

ಎಂದು ಹೇಳಿದ್ದಾರೆ. ಗಂಡ-ಹೆಂಡತಿಯರಲ್ಲಿ ಹೊಂದಾಣಿಕೆ ಇರಬೇಕು ಎಂಬುದನ್ನು ಒತ್ತಿ ಹೇಳಲಾಗಿದೆ. ಧಾರ್ಮಿಕ ಕಾರ್ಯಗಳಲ್ಲಿ ದಾನ ಮಾಡುವಾಗ ಇಬ್ಬರು ಸಮಾನ ಮನಸ್ಕರಾಗಿ, ಒಂದಾಗಿ ದಾನ ಮಾಡಲು ಧರ್ಮಶಾಸ್ತ್ರಗಳು ತಿಳಿಸುತ್ತವೆ. ಕೂಡಿ ಬಾಳಿದರೆ ಸ್ವರ್ಗ ಸುಃಖ ಎಂಬುದು ದಾಂಪತ್ಯದ ರಹಸ್ಯವಾಗಿದೆ. ಇಂತಹ ಕೆಲ ದಾಂಪತ್ಯಗಳ ಉಲ್ಲೇಖ ಈ ನಾಡಿನ ಶಾಸನದಲ್ಲಿ ಉಲ್ಲೇಖಗೊಂಡಿದೆ. "ನಾಗಲದೇವಿ ಸಕಲಗುಣ ಸಂಪೂರ್ಣೆ ಗೌರಿಯ ದೇಸಿಗುಣ ಸಂಪೂರ್ಣೆ ಗೋತ್ರ ಪವಿತ್ರ ಪತಿವರತಾ ಸಂಪೂರ್ಣೆ"[೩೭]

> "ಯಮನಿಯಮ ಸ್ವಾಧ್ಯಾಯ ಧ್ಯಾನ ಧಾರಣ
> ಮೋನಾನುಷ್ಠಾನ ಜಪ ಸಮಾಧಿಶೀಳ ಸಮ್ಪನ್ನರಪ್ಪ
> ಶ್ರೀಮತು ತ್ರಿವಿಕ್ರಮ ಪಳಂಗಿಯರ್ಗ್ಗೆ ಶ್ರೀರುದ್ರ
> ಭಟ್ಟೋಪಾಧ್ಯಾಯರಿಂ ಪಿರಿಯಳು ಸಕಲ ಗುಣ ಸಂಪೂರ್ಣ್ಣೆ
> ಕಲಿಕಾಲದರುನ್ದತಿ ಗೋತ್ರಪವಿತ್ರ ಪತಿವ್ರತಾ ಸಂಪೂರ್ಣ್ಣೆಯೆನಿಸಿ
> ನೆಗರ್ದ್ದ ಕೀರ್ತ್ತಿ ವಿಳಾಸ ಕಾಶ್ಯಪಗೋತ್ರ : ಕೀರ್ತ್ತಿನಾರಾಯಣ
> ವಿಪ್ರಕುಳಕಮಳಮಾರ್ತ್ತಂಡ ಸ್ವಸ್ತಿ ಸಮಧಿಗತ ಪಂಚಮಹಾಶಬ್ದ
> ಮಹಾಸಾಮನ್ತಾಧಿಪತಿ ಮಹಾಪ್ರಚಂಡ ದಂಡನಾಯಕಂ ಶಂಕರಭಟ್ಟೋ
> ಪಾಧ್ಯಾಯರ್ಗ್ಗೆ ಮಾವಂಗಳು ॥"

ಎಂಬ ಉಲ್ಲೇಖ ಕ್ರಿ.ಶ.೧೦೭೭ರ ಅಂಕಲಗಿ ಶಾಸನದಿಂದ ತಿಳಿದು ಬರುತ್ತದೆ.

## ಸಂಪ್ರದಾಯ, ನಂಬಿಕೆಗಳು :

ನಂಬಿಕೆಗಳು ವ್ಯಕ್ತಿಯ ಮನಸ್ಸಿನ ಪ್ರಕ್ರಿಯೆಗಳಾಗಿವೆ. ಹಾಗಾಗಿ ಮನುಷ್ಯನ ಜೀವನ ಹೆಚ್ಚಾಗಿ ಸಂಪ್ರದಾಯ, ನಂಬಿಕೆಗಳ ಮೇಲೆ ನಿಂತಿದೆ. ಪ್ರತಿನಿತ್ಯ ವ್ಯವಹಾರದ ಪದ್ಧತಿಗಳೂ ಹಾಗೂ ಅವುಗಳ ಹಿನ್ನಲೆಯಲ್ಲಿರುವ ಕಲ್ಪನೆಗಳೂ, ಉದ್ದೇಶಗಳೂ ಸೇರಿ ಸಂಪ್ರದಾಯವಾಗಿ ರೂಪ ತಾಳುತ್ತವೆ. ಇವುಗಳ ಹಿನ್ನಲೆಯಲ್ಲಿ ಮನುಷ್ಯ ತನ್ನ ಜೀವನವನ್ನು ರೂಡಿಸಿಕೊಂಡು, ಬೆಳೆಸಿಕೊಂಡು ಬಂದಿದ್ದಾನೆ. ಇದರಿಂದ ಸಮಾಜದಲ್ಲಿ ಸಂಪ್ರದಾಯ, ಆಚಾರ-ವಿಚಾರ, ವಿಧಿ-ವಿಧಾನಗಳು, ಹಬ್ಬ-ಹರಿದಿನಗಳು, ಪಾಪ-ಪುಣ್ಯಗಳೂ ಬೆಳೆದು ಬಂದಿವೆ.

"ದೇವಾಲಯಗಳ ಆಚಾರ್ಯರು, ತಪೋಧನರು, ನೈಷ್ಠಿಕ ಬ್ರಹ್ಮಚಾರಿಗಳಾಗಿರಬೇಕು".[೩೮] ಅಂಥವರು ಮಾತ್ರ ಏವೂರು ಸ್ವಯಂಭೂ ಸೋಮೇಶ್ವರ ದೇವಾಲಯದ ಮಠದಲ್ಲಿರಬೇಕೆಂಬುದು ಸಂಪ್ರದಾಯವಾಗಿತ್ತು. ಇಂತಹ ಸಂಪ್ರದಾಯ ಅನೇಕ ದೇವಾಲಯಗಳಲ್ಲಿ ಕಂಡು ಬರುತ್ತವೆ "ನಿಧಿಯ ಮೇಲೂ ಕೂಡ ಅಂದಿನ ಜನರಿಗೆ ನಂಬಿಕೆ ಇತ್ತು. ನೆಲದಲ್ಲಿ ನಿಧಿ ನಿಕ್ಷೇಪಗಳಿರುತ್ತವೆ. ಎಂದು ಅವರು ನಂಬಿದ್ದರು".[೩೯]

''ಸ್ವಸ್ತಿ ಶ್ರೀಚಾಳುಕ್ಯ ವಿಕ್ರಮವರ್ಷದ ಪ್ರಥಮದ ನಳಸಂವತ್ಸರದ
ಫಾಲ್ಗುನ ಶುದ್ಧ ಪಂಚಮಿ ಬ್ರಹಸ್ಪತಿವಾರದಂದು ಪಟ್ಟಬನ್ಧೋತ್ಸವ
ನಿಮಿತ್ತದಿಂ ಪಲವುಂ ಮಹಾದಾನಂಗಳಂ ಮಾಡಿ ॥'' ಅಂದರೆ

"ರಾಜರು ತಮ್ಮ ಸಿಂಹಾಸನಾರೋಹಣ ದಿನದಂದು ದಾನ ಮಾಡಿದರೆ ಪುಣ್ಯ ಬರುತ್ತದೆ ಎಂಬ ನಂಬಿಕೆ ಇತ್ತು".[೪೦] ಅಂದಿನ ಜನ ಹೆಚ್ಚು ಮೌಢ್ಯರಾಗಿದ್ದರು. ದೇವರಲ್ಲಿ ಅಪಾರವಾದ ಶ್ರದ್ಧೆ, ಭಕ್ತಿ, ನಂಬಿಕೆ ಇತ್ತು. ಏವೂರಿನ ದೇವಾಲಯವೇ ಇದಕ್ಕೆ ನಿದರ್ಶನ. ಏವೂರಿನ ಸ್ವಯಂಭೂ ದೇವಾಲಯದಲ್ಲಿ ಹಾವು ಕಡಿದರೆ, ಚೇಳು ಕಡಿದರೆ ತಕ್ಷಣ ಅವರು ದೇವಾಲಯಕ್ಕೆ ಬಲ ಸುತ್ತು ಹಾಕುತ್ತಿದ್ದರು. ಇದರಿಂದ ಏರಿದ ವಿಷ (ಗರ) ಇಳಿಯುತ್ತದೆ ಎಂಬ ನಂಬಿಕೆ ಇತ್ತು. ಹಾಗೆ "ಮನೆಗೆ ಬೆಂಕಿ ಹತ್ತಿದ್ದರೆ, ತಕ್ಷಣವೇ ದೇವಾಲಯಕ್ಕೆ ಬಲ ಸುತ್ತು ಹಾಕಿದರೆ ಹತ್ತಿದ ಬೆಂಕಿ ಆರಿಸುವ ಶಕ್ತಿ ಆ ದೇವರಲ್ಲಿದೆ ಎಂಬ ಬಲವಾದ ನಂಬಿಕೆ ಇತ್ತು".[೪೧]

''ತತ್ಸ್ವಯಂಭೂದೇವ ಪ್ರಭಾವಮೇ ದೊರೆತೆನೆ ॥
ಕಂ ॥ ಅಹಿ ಕೊಣ್ಡಡೆ ತೇಳ್ತಿನ್ದಡೆ ದಹನಂ ಪತ್ತಿದಡೆ
ಬನ್ದು ತಕ್ಷಣದೊಳ್ ತದ್ಗೃಹಮಂ ಬಲಗೊಳೆ ತದ್ವಿಷರಹಿತತೆ
ಮನುಜರ್ಗ್ಗೆ ನಿಮಿಷಮಾತ್ರದಿನಕ್ಕುಂ ॥ ಜರಿತಂಗೆ ನೇತ್ರರೋಗಿಗೆ
ಶಿರೋವ್ಯಥಾರ್ತ್ತಂಗೆ ಕರ್ಣ್ಣಶೂಳಿಗೆ ನೀರೋದರಿಗೆ ರುಜಾಹರಣಂ
ತಚ್ಚರಣಯುಗ ಸ್ಮರಣಮಾತ್ರದಿಂ ದೊರೆಕೊಳ್ಗುಂ ॥''

ಎಂಬ ಉಲ್ಲೇಖ ಕ್ರಿ.ಶ.೧೦೭೭ರ ಏವೂರು ಶಾಸನದಿಂದ ತಿಳಿದುಬರುತ್ತದೆ. ತಮ್ಮ ರೋಗ, ರುಜಿನುಗಳಿಗೂ ಸಹ ದೇವರಲ್ಲಿ ಮಾನಸಿಕ ನಂಬಿಕೆ ಹೊಂದಿದ್ದರು.

**ಪಾಪ-ಪುಣ್ಯ :**

ಸಮಾಜದ ಸ್ವಾಸ್ಥವನ್ನು ಕಾಪಾಡುವ ಉದ್ದೇಶದಿಂದ ಪಾಪ-ಪುಣ್ಯ, ಸ್ವರ್ಗ-ನರಕಗಳ ಕಲ್ಪನೆ ಪ್ರಾರಂಭದಲ್ಲಿ ಹುಟ್ಟಿದರೂ, ಅದು ಒಂದು ನಂಬಿಕೆಯಾಗಿ ಪ್ರಾಚೀನ ಕಾಲದಿಂದ ಇಂದಿನವರೆಗೂ ಮುಂದುವರೆದುಕೊಂಡು ಬಂದಿದೆ. ಶಾಸನದ ಕೊನೆ ಭಾಗದಲ್ಲಿ ಸಾಮಾನ್ಯವಾಗಿ ಪಂಚ ಮಹಾಪಾತಕದ ಹೆಸರನ್ನು ಉಲ್ಲೇಖಿಸುತ್ತವೆ. ಸಗರ ನಾಡಿನ ಶಾಸನಗಳು ಹೆಚ್ಚು ದಾನಕ್ಕೆ ಸಂಬಂಧಿಸಿದ್ದರಿಂದ, ದಾನವನ್ನು ಮಾಡಿದವರಿಗೆ ಪುಣ್ಯ ಬರುತ್ತದೆ. ಕೆಡಿಸಿದವನಿಗೆ, ಪಾಪ ಬರುತ್ತದೆ. ಎಂಬುದು ಶಾಸನದ ಫಲಶೃತಿಗಳಿಂದ ತಿಳಿದು ಬರುತ್ತದೆ. ಶ್ಲೋಕ ಇಲ್ಲದಿದ್ದ ಕಡೇ ಅವರ ದೇಶ-ಭಾಷೆಯಲ್ಲಿ ಅದರ ಸಾರವನ್ನು ಹೇಳಲಾಗಿದೆ. ಇದರ ಮುಖ್ಯ ಉದ್ದೇಶ ಕೊಟ್ಟ ದಾನ ಉಳಿಯಬೇಕು. ಹಾಗೆ ಮುಂದುವರೆಯಬೇಕು. ಇವುಗಳ ರಕ್ಷಣೆ ಮಾಡದೇ ಇದ್ದರೇ, ಪಶು, ಪಕ್ಷಿ, ಕ್ರಿಮಿಯಾಗಿ ಸತ್ತು ನರಕಕ್ಕೆ ಸೇರುತ್ತಾರೆ ಎಂಬ ಭಯದ ನಂಬಿಕೆ ಇತ್ತು. ಈ ಪ್ರಾಯಶ್ಚಿತಕ್ಕಾಗಿ ದಾನ, ಧರ್ಮ, ಆಚರಣೆ, ವಿಧಿ-ವಿಧಾನ, ಸಂಸ್ಕಾರ, ಸಂಸ್ಕೃತಿ, ಸಂಪ್ರದಾಯಗಳು ಹುಟ್ಟಿಕೊಂಡವು. ಇದರಿಂದ ಸಗರ ನಾಡಿನ ಶಾಸನಗಳು ಹೆಚ್ಚಾಗಿ ದಾನ-ಧರ್ಮಕ್ಕೆ ಸಂಬಂಧಿಸಿದ್ದಾಗಿವೆ.

**ಬಹಿಷ್ಕಾರ :**

ವ್ಯಕ್ತಿಯೊಬ್ಬ ಧಾರ್ಮಿಕ ಹಾಗೂ ಸಾಮಾಜಿಕ ನಿಯಮಗಳನ್ನು ಮೀರಿದಾಗ ಆತನಿಗೆ ಸಂಘ, ಹಾಗೂ ಸಂಘದಲ್ಲಿನ ಸದಸ್ಯರು ಸಮಾಜದಲ್ಲಿ ಬಹಿಷ್ಕಾರ ಹಾಕುತ್ತಿದ್ದರು. ಸಂಪ್ರದಾಯ, ರೀತಿ-ನೀತಿ, ಕಟ್ಟಳೆಗಳನ್ನು ಮೀರಿದಾಗ ಅಂತಹವರಿಗೆ ಬಹಿಷ್ಕಾರಿಸಲಾಗುತ್ತಿತ್ತು. ಅವರನ್ನು ಅಧಿಕಾರದಿಂದ ಕೆಳಗಿಳಿಸಲು ಶಾಸನಗಳು ಎಚ್ಚರಿಕೆ ನೀಡಿವೆ. ಏವೂರಿನ ಮಠದಲ್ಲಿ ನೈಷ್ಠಿಕ ಬ್ರಹ್ಮಚಾರಿಗಳು ಮಾತ್ರ ಇರಲು ಅವಕಾಶವಿತ್ತು. ಇದನ್ನು ಮೀರಿದವರಿಗೆ ಬಹಿಷ್ಕಾರ ಹಾಕಲಾಗಿತ್ತು.

ಏವೂರಿನ ಮಠದಲ್ಲಿರುವ ಯತಿಗಳು, ತಪೋಧನರು ಹಾಗೂ ಅಲ್ಲಿ ವಿದ್ಯಾಭ್ಯಾಸ ಮಾಡುತ್ತಿರುವ ವಿದ್ಯಾರ್ಥಿಗಳು ಕಡ್ಡಾಯವಾಗಿ ಬ್ರಹ್ಮಚರ್ಯ ಪರಿಪಾಲನೆ ಮಾಡಬೇಕಿತ್ತು. ಒಂದು ವೇಳೆ ಇವುಗಳನ್ನು ಮೀರಿ ನಡೆದರೆ ಮಠದಿಂದ ಅವರನ್ನು ಹೊರ ಹಾಕಲಾಗುತ್ತಿತ್ತು. ಒಂದು ವೇಳೆ ಅವರು ಹೋಗದಿದ್ದರೆ ಬಹಿಷ್ಕರಿಸಲಾಗುತ್ತಿತ್ತು. ಇಂತಹ ಒಂದು ನಿದರ್ಶನ ಸಗರ ನಾಡಿನ ಶಾಸನದಲ್ಲಿ ಈ ರೀತಿ ಉಲ್ಲೇಖಗೊಂಡಿದೆ.

"ಈ ಸ್ಥಾನದ ಆಚಾರ್ಯ್ಯರಕ್ಕೆ ತಪೋಧನರಕ್ಕೆ ನೈಷ್ಠಿಕ ಬ್ರಹ್ಮಚಾರಿಗಳ್ಗಲ್ಲದೆ ಮಠದೊಳಿರಲ್ಸಲ್ಲದು ಬ್ರಹ್ಮಚರ್ಯ್ಯಮಿಲ್ಲದವರನೂರುಮಂ ನಕರಮುಮರಸುಮಿರ್ದ್ದು ಪೊರಮಡಿಸಿ ಕಳೆವರ್ ಪೊರಮಡಲೊಲ್ಲದೆ ಮೊಣ್ಡುಯತನಮಂಗೆಯ್ದರ ಪ್ಪೊಡೆಶ್ವಗಾರ್ದ್ದಭ ಚಣ್ಡಾಳರನ್ನುಮಲ್ಲದೆ"[೪೨]

## ೪.೪. ಹಬ್ಬ–ಹರಿದಿನಗಳು :

"ಪರ್ವ ಎಂಬ ಸಂಸ್ಕೃತ ಶಬ್ದವು ಪ್ರಾಕೃತ ಜನರ ಬಾಯಲ್ಲಿ ಅಪಭ್ರಂಶವಾಗಿ ಪಬ್ಬ ಎಂದಾಯಿತು. ಈ ಪಬ್ಬವು ಹಬ್ಬವೆಂದು ರೂಪಗೊಂಡು ಕನ್ನಡ ನಾಡಿನಲ್ಲಿ ರೂಢಿಯಾಗಿದೆ".[೪೩] ಅಂದು ದೇವಾಲಯಗಳಲ್ಲಿ ನಡೆಯುತ್ತಿದ್ದ ಉತ್ಸವಗಳು ಎರಡೆರಡು. ಚೈತ್ರ ಮತ್ತು ಪವಿತ್ರ. "ಫ್ಲಿಟ್ ಮತ್ತು ರೈಸ್ ಅವರು ಅದನ್ನು ತತ್ಪುರುಷ ಸಮಾಸವೆಂದು ಭಾವಿಸಿ ಚೈತ್ರ ಮಾಸದಲ್ಲಿ ನಡೆಯುವ ಶುದ್ಧೀಕರಣದ ಉತ್ಸವ ಎಂದು ಅರ್ಥೈಸಿದ್ದರು". ಆರ್ ನರಸಿಂಹಾಚಾರ್ಯರು ತಮ್ಮ ಲೇಖನವೊಂದರಲ್ಲಿ "ಚೈತ್ರ ಪವಿತ್ರವೆಂಬುದು ದ್ವಂದ್ವ ಸಮಾಸವೆಂದೂ, ಅದು ದೇವಸ್ಥಾನಗಳಲ್ಲಿ ನಡೆಯುವ ಎರಡು ಉತ್ಸವಗಳನ್ನು ಸೂಚಿಸುವುದೆಂದೂ ಸ್ಪಷ್ಟಪಡಿಸಿದ್ದಾರೆ".[೪೪] ಇಂತಹ ಉತ್ಸವಗಳು ಜನ ತಮ್ಮ ಮನೆಯಲ್ಲಿ ಚೈತ್ರ ಮಾಸ ಹುಣ್ಣಿಮೆಯಂದು ಆಚರಣೆ ಮಾಡುತ್ತಿದ್ದರು. ಇದೇ ಉತ್ಸವ ದೇವಾಲಯದಲ್ಲಿಯೂ ಆಚರಣೆ ಮಾಡುತ್ತಿದ್ದರಿಂದ, ಮನೆಯಲ್ಲಿನ ಉತ್ಸವ ಹಾಗೂ ದೇವಾಲಯದ ಉತ್ಸವ ಒಂದೇಯಾಗಿತ್ತೆನ್ನಬಹುದು. ಡಾ. ಬೆಟಗೇರಿ ಕೃಷ್ಣಶರ್ಮ ಅವರ ಪ್ರಕಾರ ವರ್ಷದಲ್ಲಿ ಬರುವ ಹನ್ನೆರಡು ಹುಣ್ಣಿಮೆ, ಅಮವಾಸ್ಯೆ, ಸಂಕ್ರಮಣಗಳನ್ನು ಹಬ್ಬಗಳೆಂದು ಕರೆದಿದ್ದಾರೆ. ಮಾರ್ಗಶಿರದ ಅಮವಾಸ್ಯೆ, ಪುಷ್ಯದ ಅಮವಾಸ್ಯೆ, ಕಾರ್ತಿಕ ಅಮವಾಸ್ಯೆ, ಸಂಕ್ರಾಂತಿ ಗ್ರಹಣಾದಿ ಪರ್ವಗಳನ್ನು ಈ ನಾಡಿನ ಜನರು ಆಚರಿಸುತ್ತಿದ್ದದ್ದು ಕಂಡು ಬರುತ್ತದೆ.

ಗ್ರಹಣದ ದಿನ ಒಂದು ವಿಶೇಷ ದಿನ. ಇದು ಪ್ರಾಚೀನಕಾದಿಂದಲೂ ಪ್ರಾಮುಖ್ಯತೆ ಪಡೆದುಕೊಂಡಿದೆ. ಇಂತಹ ವಿಶೇಷ ದಿನದಂದು ನದಿಯಲ್ಲಿ ಸ್ನಾನಮಾಡಿ ಪುನೀತರಾಗುತ್ತಿದ್ದರು. ಇದಕ್ಕೆ ನಿದರ್ಶನ ಈ ನಾಡಿನ ಶಾಸನದಲ್ಲಿ ಉಲ್ಲೇಖಗೊಂಡಿದೆ. ಸಂಕ್ರಮಣದ ಸೋಮಗ್ರಹಣದಂದು ಮಹಾಪ್ರದಾನ ಸೇನಾಧಿಪತಿ ಚಿದ್ದರಸರು, ಮಹಾನದಿ ದಕ್ಷಿಣ ಪ್ರಯಾಗ ಶ್ರೀ ಕೃಷ್ಣವೇಣ್ಣಾ ಭೀಮರಥ್ಯಾ ದೇವಿ ಸಂಗಮದಲ್ಲಿ ಸ್ನಾನಮಾಡಿದ ಉಲ್ಲೇಖ ಸಂಗಮ ಶಾಸನದಿಂದ ತಿಳಿದು ಬರುತ್ತದೆ. ಹಬ್ಬ–ಹರಿದಿನ, ಗ್ರಹಣ ಮತ್ತು ವಿಶೇಷ ಸಂದರ್ಭಗಳಲ್ಲಿ ನದಿಯಲ್ಲಿ ಸ್ನಾನ ಮಾಡುವುದು, ಇವು ನಮ್ಮ ನಾಡಿನ

ಸಂಪ್ರದಾಯಗಳಲ್ಲಿ ಬೆಳೆದು ಬಂದಿದೆ. ಇಂತಹ ವಿಶೇಷ ದಿನದಂದು ದಾನ ಕೊಟ್ಟದ್ದು ತಿಳಿದು ಬರುತ್ತದೆ. ಹೋಮ, ಬಲಿ, ಕ್ರಿಯಾದಿಗಳನ್ನು ಮಾಡುತ್ತಿದದ್ದು ಶಾಸನಗಳಿಂದ ತಿಳಿದು ಬರುತ್ತದೆ. ನಾಡಿನ ಶಾಂತಿ ಮತ್ತು ಸಮೃದ್ಧಿಗಾಗಿ ಇವುಗಳನ್ನು ಮಾಡುತ್ತಿದ್ದರು.

ಪಂಚಾಂಗ ಹಾಗೂ ತಿಥಿಗಳು ಕೂಡ ಶಾಸನದಲ್ಲಿ ಕಂಡು ಬರುತ್ತವೆ. ಈ ನಾಡಿನ ಜನರು ತಮ್ಮ ದಿನ ನಿತ್ಯದ ಕೆಲಸ ಕಾರ್ಯಗಳನ್ನು ಪ್ರಾರಂಭಿಸಲು ಪಂಚಾಂಗ-ತಿಥಿಗಳನ್ನು ನೋಡುತ್ತಿದ್ದರು. ಅಂತೆಯೇ ಶಾಸನಗಳಲ್ಲಿ ಕರಾರುವಕ್ಕಾಗಿ ಪುಣ್ಯಕಾಲವನ್ನು ಗ್ರಹಿಸಿದ್ದಾರೆ. ಇದಕ್ಕೆ ಒಂದು ಉದಾಹರಣೆ- "ಶ್ರೀಮಚ್ಚಾಳುಕ್ಯ ಪ್ರತಾಪ ಚಕ್ರವರ್ತಿ ಜಗದೇಕ ಮಲ್ಲಿದೇವ ವರ್ಷದ ಆರನೇ ರುಧಿರೋದ್ಗಾರಿ ಸಂವತ್ಸರದ ಶ್ರಾವಣದ ಪೌರ್ಣ್ಣಮಾಸ್ಯೆ ಬುಧವಾರ ಧನಿಷ್ಟಾ ನಕ್ಷತ್ರ ಶೋಭ ನಯೋಗ ಭವಕರಣ ಸೂರ್ಯ್ಯಸಿಂಹ ಸಂಕ್ರಮಣದಂದು ಸೋಮಗ್ರಹಣ ನಿಮಿತ್ತವಾಗಿ".[೪೫] ಹೀಗೆ ಇಂದು ನಾವು ಆಚರಿಸುವ ದಿನ, ವಾರ, ಮಾಸ, ಸಂವತ್ಸರಗಳು ಅಂದಿನ ಶಾಸನಗಳಿಂದ ಯಥಾವತ್ತಾಗಿ ಮುಂದುವರೆಸಿಕೊಂಡು ಬಂದಿವೆ.

## ೪.೫. ಸಾರ್ವಜನಿಕ ಚಟುವಟಿಕೆಗಳು :

ಜೀವನ ಕ್ಷಣಿಕವಾದುದು ದಿನದಿಂದ ದಿನಕ್ಕೆ ಆಯುಷ್ಯ ಕ್ಷೀಣಿಸುತ್ತದೆ. ಹೀಗಿರುವಾಗ ಮನುಷ್ಯನು ಧರ್ಮವನ್ನು ಅವಲಂಬಿಸಿ ಸದ್ಗತಿಗಳನ್ನು ಸಾಧಿಸಬೇಕು. ಕಲಿಯುಗವು ಬಹು ಕೆಟ್ಟದ್ದು. ನಿಜವಾದ ಬಂಧುಗಳು ಈ ಕಾಲದಲ್ಲಿ ಸಿಗುವುದು ದುರ್ಲಭ. ಆದ್ದರಿಂದ 'ನಾಸ್ತಿ, ಧರ್ಮ, ಸಮೋ ಬಂಧು', ಅಂದರೆ. ಧರ್ಮವೊಂದೇ ನಿಜವಾದ ಬಂಧು. ಎಲ್ಲ ಧರ್ಮಗಳು ಒತ್ತಿ ಹೇಳುವುದೇನೆಂದರೆ, ಬಾವಿ, ಕೆರೆ, ತಟಾಕ, ಅರವಟ್ಟಿಗೆ, ದೇವಾಲಯ ನಿರ್ಮಾಣ ಮಾಡಿ, ಪುಣ್ಯ ಕಾರ್ಯಗಳನ್ನು ಮಾಡಿ ನೀ ಮಾಡಿದ ಪಾಪಗಳಿಂದ ಮುಕ್ತಿಯನ್ನು ಪಡೆದುಕೋ ಎಂದು ಸಾರಿ ಸಾರಿ ಹೇಳುತ್ತವೆ.

ಮನುಷ್ಯ ಕೇವಲ ತನ್ನ ಒಂದು ಚೌಕಟ್ಟಿನಲ್ಲೆ ಜೀವನ ಮಾಡಿದರೆ ಸಾಲದು, ವೈಯಕ್ತಿಕ ಕಾರ್ಯಗಳೊಂದಿಗೆ ಸಾಮಾಜಿಕ ಸತ್ಕಾರ್ಯದಲ್ಲಿ ತನ್ನನ್ನು ತಾನು ತೊಡಗಿಸಿಕೊಂಡಾಗ ಮಾತ್ರ ಪುಣ್ಯ ಲಭಿಸುತ್ತದೆ. ಇಂತಹ ಕಾರ್ಯದಲ್ಲಿ ಯಾವುದೇ ಜಾತಿ-ಮತ, ಬೇಧ-ಭಾವ, ಮೇಲು-ಕೀಳು, ಬಡವ-ಶ್ರೀಮಂತ ಎನ್ನದೇ ಸತ್ಕಾರ್ಯಗಳನ್ನು ಮಾಡಿದ ಉಲ್ಲೇಖ ಈ ನಾಡಿನ ಶಾಸನಗಳಿಂದ ತಿಳಿದು ಬರುತ್ತದೆ. ಸೇವಾ ಮನೋಭಾವ ಮತ್ತು ತ್ಯಾಗದಿಂದ ತಮ್ಮನ್ನು ತಾವು ಸಮರ್ಪಿಸಿಕೊಂಡಿದ್ದಾರೆ. ಹೀಗಾಗಿ ಈ ನಾಡಿನಲ್ಲಿ

ಅನೇಕ ದೇವಾಲಯಗಳು, ಕೆರೆ, ಬಾವಿ, ಅಗ್ಗಷ್ಟಿಗೆ, ಸತ್ರಗಳು ನಿರ್ಮಾಣಗೊಂಡಿದ್ದು ಕಂಡು ಬರುತ್ತದೆ.

ಮಹಾಭಾರತದ ಶ್ಲೋಕ ಒಂದರ ಪ್ರಕಾರ ಯಾವ ವ್ಯಕ್ತಿ ಕಟ್ಟಿಸಿದ ಕೆರೆಯಲ್ಲಿ ಹಸುಗಳು, ಪ್ರಾಣಿಗಳು, ಪಕ್ಷಿಗಳು, ಮನುಷ್ಯರು ನೀರನ್ನು ಕುಡಿದು, ತಮ್ಮ ದಾಹವನ್ನು ಇಂಗಿಸಿ ತೃಪ್ತರಾಗುವರೋ, ಆಗ ಯಾರು ಆ ಕೆರೆಯನ್ನು ಕಟ್ಟಿಸಿದ್ದರೋ ಅವರಿಗೆ ಅಶ್ವಮೇಧಯಾಗ ಮಾಡಿದಷ್ಟು ಫಲ ದೊರೆಯುತ್ತದೆ ಎಂದು ಹೇಳಲಾಗಿದೆ.

## ಕೆರೆಗಳು (ತಟಾಕ) :

ದಾನಗಳಲ್ಲಿ ಶ್ರೇಷ್ಠ ದಾನ ಜಲದಾನ. ಅಂತೆಯೇ ದೇವಾಲಯ ನಿರ್ಮಾಣದೊಂದಿಗೆ ತಟಾಕ (ಕೆರೆ)ಗಳ ನಿರ್ಮಾಣವು ತಲೆ ಎತ್ತಿದವು. ಕೆರೆ ನಿರ್ಮಾಣ ಒಂದು ದೃಷ್ಟಿಯಿಂದ ಧಾರ್ಮಿಕ ಕಾರ್ಯ ಎನಿಸಿದರೆ, ಇನ್ನೊಂದು ದೃಷ್ಟಿಯಲ್ಲಿ ಸಾಮಾಜಿಕ ಹಾಗೂ ಸಾರ್ವಜನಿಕ ಕಾರ್ಯಗಳು ಎನಿಸುತ್ತವೆ. 'ಶಿವನೊಂದಿಗೆ ಗಂಗೆ' ಎಂಬಂತೆ ದೇವಾಲಯ ನಿರ್ಮಾಣದೊಂದಿಗೆ ಕೆರೆ ನಿರ್ಮಾಣವು ಒಂದಾಗಿದೆ. ಇದು ಪಾರಂಪರಿಕವಾಗಿ ಬೆಳೆದು ಬಂದ ಸಾರ್ವಜನಿಕ ಕಾರ್ಯ. ಇಂತಹ ಪುಣ್ಯದ ಕಾರ್ಯ ಈ ನಾಡಿನ ಶಾಸನದಲ್ಲಿ ಉಲ್ಲೇಖಗೊಂಡಿದೆ. "ಶ್ರೀ ಕಾಳಾಮುಖ ತಪೋಧನಾಗ್ರಗಣ್ಯರಪ್ಪ ಕೆಸ್ಡಿಲೆಯ ಶಿಗತಗಿಸ ದೇವರು ಕಟ್ಟಿಸಿದ ಕೆರೆ ಧರಿಯಾಪುರದ ಕೆರೆ",[೪೬] ಎಂಬ ಉಲ್ಲೇಖ ಧರಿಯಾಪುರ ಶಾಸನದಿಂದ ತಿಳಿದುಬರುತ್ತದೆ. ಕಲ್ಯಾಣ ಚಾಲುಕ್ಯ ಆರನೇ ವಿಕ್ರಮಾದಿತ್ಯನ ದಂಡನಾಯಕ ಮಲ್ಲದೇವರಸನು "ನಾಗರ ಕೆರೆಯಂ ತೋಡಿಸುವದಕಂ, ಕಟ್ಟಿಸುವದಕಂ, ಮಹಾಮಂಡಲೇಶ್ವರ ಮಲ್ಲಿದೇವರಸರಂ"[೪೭] ಎಂಬ ಉಲ್ಲೇಖವಿದೆ. ಮಲ್ಲಿದೇವರಸ ಆಂದೋಲದಲ್ಲಿ ಉತ್ತರದ ದಿಕ್ಕಿನಲ್ಲಿ ನಾಗರ ಕೆರೆ ಹೆಸರಿನ ಮೇಲೆ ಹೊಳಿಟ್ಟ ಭೂಭಾಗ ಇಂದಿಗೂ ಕಂಡು ಬರುತ್ತದೆ. ನಾಲ್ಕು ಕಡೆ ಕೆರೆಯ ತೂಬುಗಳು (ಜಲಾಶಯದ ದ್ವಾರ) ಅವಶೇಷಗಳು ಕಂಡು ಬರುತ್ತವೆ. ಆದರೆ ಇವು ಈಗ ಹಿಂದಿನ ಸ್ಥಿತಿಯಲ್ಲಿ ಇಲ್ಲ. ಎಲ್ಲ ವಿನಾಶದ ಅಂಚಿನಲ್ಲಿ ಕಂಡು ಬರುತ್ತವೆ. "ಮೀಹದ ಕೆರೆ",[೪೮] ಸೂಳೆಕೆರೆ, ಅಣ್ಣಗಾವುಂಡನ ಕೆರೆ ಹೀಗೆ ಸಗರನಾಡಿನ ಆಂದೋಲ, ಏವೂರುಗಳ ಶಾಸನದಲ್ಲಿ ಕೆರೆಗಳ ಉಲ್ಲೇಖ ಕಂಡು ಬರುತ್ತವೆ.

''ಶ್ರೀಮದೆಳಮೇಲ ಸಿಂಹಪರ್ಷನ್ಮಣ್ಡಲಿ ಮಲೆಯಾಳದೇವರ
ಶಿಷ್ಯಪ್ರಶಿಷ್ಯರಪ್ಪ ಮೋನಿಪಂಡಿತರ ॥ ವ್ರಿತ್ತ ॥
ದಕ್ಷಿಣವಾರಣಾಸಿಯೆನಿಸಿದೆಳರಾಮೆಗೆ ದಿವ್ಯಮೂರ್ತಿ(೯)
ಪಾಪಕ್ಷಯ ಕಾ XXX ರ್ದ ಜನ್ನದ ಬಾವಿಗೆ ಬಂದು
ರಾಗದಿಂ ತ್ರ್ಯಕ್ಷನಿವಾಸ(ಮೆ) ನೆರೆಯೆ ಮಾಡುವೆಮೆಂದೆನಲೇಂ ॥''

ಎಂಬ ಉಲ್ಲೇಖ ಯಡ್ರಾಮಿ ಶಾಸನದಲ್ಲಿ ಕಂಡುಬರುತ್ತದೆ.

ಕಲ್ಯಾಣ ಚಾಲುಕ್ಯ ಆರನೇ ವಿಕ್ರಮಾದಿತ್ಯನ ದಂಡನಾಯಕ ಕೊಮಾರ ಸ್ವಾಮಿ ಶ್ರೀ ರಾಮೇಶ್ವರ ದೇವರಿಗೆ "ಜಂನದ ಬಾವಿ"[೩೦]ಯನ್ನು ದಾನವಾಗಿ ಕೊಟ್ಟಿದ್ದು ಶಾಸನದಿಂದ ತಿಳಿದು ಬರುತ್ತದೆ.

''ಶ್ರೀಮದಗ್ರಹಾರಂ ಮದ್ರಿಕಿ ಊರೊಡೆಯಂ ಸರ್ವ್ವದೇವಭಟ್ಟರ್
ಪ್ರಮುಖ ಮಹಾಜನಮಯ್ಮೂರ್ವ್ವರುಮಿರ್ದ್ದು ನಾಮಗಾಮುಣ್ಡನ
ಬಾವಿಯ ಧರ್ಮ್ಮತಕ್ಕೆ ಧರ್ಮ್ಮಾರ್ತ್ಥಮಾಗೆ ಸಿರಿವೊಳಲ ದಾರಿಯಂ
ತೆಂಕ ಪೊನ್ನಂಬಟ್ಟೆಯ ದಾರಿಯಿಂ ಮೂಡ ಮಾನ್ಯಗೋಲಲ್
ಕೊಟ್ಟ ಕೆಯ್ಯಿ ॥''

ಎಂಬ ಉಲ್ಲೇಖ ಮದ್ರಿಕಿ ಶಾಸನದಲ್ಲಿ ಕಂಡುಬರುತ್ತದೆ.

"ನಾಮಗಾಮುಣ್ಡನ ಬಾವಿ"[೩೧] ಮದ್ರಿಕೆಯ ಊರಿನ ಒಡೆಯರು, ದೇವಭಟ್, ಹಾಗೂ ಇಲ್ಲಿನ ಮೂನ್ನೂರು ಮಹಾಜನರು ಧರ್ಮಕ್ಕಾಗಿ ನಾಮಗಾಮುಣ್ಡನ ಬಾವಿಯನ್ನು ದಾನವಾಗಿ ಕೊಟ್ಟಿದ ಉಲ್ಲೇಖವಿದೆ.

''ಶ್ರೀ ಸಿದ್ಧಸಾತೇಶ್ವರದೇವರ ದೇವಕಾರ್ಯ್ಯವೆಲ್ಲಾ ಕಾಲ ಮುಂನಡೆ
ವಂತಾಗಿ ಪೂಜೆ ಪುನಸ್ಕಾರ ಧೂಪದೀಪನೈವೇದ್ಯ ತಾಂಬೂಲಾರ್ಚ್ಚನ
ವಿಧಾನಕ್ಕೆಂದು ಆಚಾರ್ಯ್ಯ ಚೆಲ್ಲೆಯನ ಕಾಲಂ ಕರ್ಚ್ಚಿ ಧಾರಾಪೂರ್ವ್ವಕಂ
ಮಾಡಿ ಬಿಟಂ ಬ್ರಹ್ಮೇಶ್ವರದೇವರ ಕೇರೆಂ ಪಡುವಲು ಪಲಕಾಳಪನ
ಕೋಲ ಮತ್ತರು ಗ ೩ ಹಾಲಭಾವಿಯ ಹಂನ ಮತ್ತರು ೧ ॥''

ಎಂಬ ಉಲ್ಲೇಖ ಕೆಲ್ಲೂರು ಶಾಸನದಲ್ಲಿ ಕಂಡುಬರುತ್ತದೆ.

"ಹಾಲಬಾವಿ"[೫೨] ಹೈಹಯ ವಂಶದ ಮಹಾಮಂಡಳೇಶ್ವರ ಅಲ್ಲಹುಲಿದೇವರಸ, ಮಹಾಜನರು, ಹಾಗೂ ವಿವಿಧ ವರ್ಗದವರು ಸೇರಿ ಶ್ರೀ ಸಿದ್ಧಸಾತೇಶ್ವರ ದೇವರಿಗೆ ಬಾವಿಯನ್ನು ದಾನ ಕೊಟ್ಟಿದ್ದು ಕೆಲ್ಲೂರಿನ ಶಾಸನದಿಂದ ತಿಳಿದು ಬರುತ್ತದೆ. ಅನುವಂಶಿಕವಾಗಿ ಲೆಂಕರ ಪಡೆ ಸಗರದಲ್ಲಿ ಬಾವಿ ಕಟ್ಟಿಸಿ, ಸೂರ್ಯ ಚಂದ್ರರಿರುವರೆಗೂ ಸ್ಥಿರವಾಗಿ ಇರಲೆಂದು ದೇವರಲ್ಲಿ ಮನವಿ ಮಾಡಿಕೊಂಡು ಕಟ್ಟಿಸಿದ ಬಾವಿ ಹಾರಣಗೇರಿಯಲ್ಲಿದೆ.

## ಅರವಟ್ಟಿಗೆಗಳು–ಸತ್ರಗಳು :

ಪ್ರಾಚೀನ ಕಾಲದಲ್ಲಿ ಇನ್ನೊಂದು ಲೋಕೋಪಯೋಗಿ ಕಾರ್ಯವೆಂದರೆ ಅರವಟ್ಟಿಗೆಗಳು. ದಾರಿ ಹೋಕರಿಗೆ ಬಾಯಾರಿಕೆಯನ್ನು ತಣಿಸಲು ಅರವಟ್ಟಿಗೆಗಳನ್ನು ನಿರ್ಮಿಸುತ್ತಿದ್ದರು. ಸಾಮಾನ್ಯವಾಗಿ ಇವುಗಳನ್ನು ದೇವಾಲಯ, ಮಠ, ಸತ್ರಗಳ ಸಮೀಪದಲ್ಲೆ ನಿರ್ಮಿಸುತ್ತಿದ್ದರು. ಕೇತಿಸೆಟ್ಟಿಯ ಮಗ ಬಮ್ಮಿಸೆಟ್ಟಿ ಶ್ರೀ ಮಯಿಳಮೇಶ್ವರ ದೇವಾಲಯದ ಪೂರ್ವ ಭಾಗದಲ್ಲಿ 'ಅರವಟ್ಟಿಗೆ' ನಿರ್ಮಿಸಿದ್ದನು. ಕುಳಗೇರಿ, ಯಡ್ರಾಮಿ, ಅಂಕಲಗಿ, ಮದ್ದರಕಿ, ಸಗರ, ಸಂಗಮ, ಹಾರಣಗೇರಿ, ಗೋಗಿ, ಏವೂರು, ಮುದನೂರು, ಹಗರಟಗಿ ಹೀಗೆ ಮುಂತಾದ ಕಡೆ ಅರವಟ್ಟಿಗೆಗಳು ನಿರ್ಮಿಸಿದ್ದು ಈ ನಾಡಿನ ಶಾಸನಗಳಿಂದ ತಿಳಿದು ಬರುತ್ತದೆ.

ಪ್ರಾಚೀನ ಕಾಲದಲ್ಲಿ ಅರವಟ್ಟಿಗೆಗಳ ಜೊತೆಗೆ ಸತ್ರಗಳು ಕಂಡು ಬರುತ್ತವೆ. ದೂರದ ಊರಿಂದ ನಡೆದುಕೊಂಡು ಬಂದವರಿಗೆ, ಬಳಲಿಕೆ, ಆಯಾಸ, ದಾಹ, ಹಸಿವು ಆಗುತ್ತಿದ್ದವು. ಇಂತಹವರ ದಣಿವನ್ನು ನೀಗಿಸಲು ಅಲ್ಲಲ್ಲಿ ಸತ್ರಗಳು ಕಂಡು ಬರುತ್ತವೆ. ಒಂದು ರೀತಿಯಲ್ಲಿ ಹೇಳುವುದಾದರೆ, ಅತಿಥಿ ಸತ್ಕಾರದ ವಿಸ್ತೃತ ರೂಪವೇ ಸತ್ರಗಳು ಎನ್ನಬಹುದು. ಈ ಸತ್ರಗಳು ದೇವಾಲಯ ಹಾಗೂ ಮಠಗಳಿಗೆ ಹೊಂದಿಕೊಂಡಿದ್ದವು. ದಾನಗಳಲ್ಲಿ ಶ್ರೇಷ್ಠ ದಾನ ಅನ್ನದಾನ. ಹಾಗಾಗಿ ಈ ನಾಡಿನ ರಾಜರಿಂದ ಹಿಡಿದು ಸಾಮಾನ್ಯರವರೆಗೂ ಸತ್ರಗಳಿಗೆ ದಾನ ಬಿಟ್ಟಿದ್ದು ಶಾಸನಗಳಿಂದ ತಿಳಿದು ಬರುತ್ತದೆ. ಕಲ್ಯಾಣ ಚಾಲುಕ್ಯ ಆರನೇ ವಿಕ್ರಮಾದಿತ್ಯನು ವಿದ್ಯಾಭ್ಯಾಸಕ್ಕಾಗಿ ಬಂದ ವಿದ್ಯಾರ್ಥಿಳಿಗೆ, ತಪೋಧನರಿಗೆ, ದೇವಾಲಯದ ಇನ್ನೂಳಿದ ವರ್ಗದವರಿಗೆ, ಬ್ರಾಹ್ಮಣರಿಗೆ, ಅನಾಥರಿಗೆ, ಅಂಗವಿಕಲರಿಗೆ ಅನ್ನ ಸಂತಪರ್ಣಕ್ಕಾಗಿ ಭೂದಾನ ಕೊಟ್ಟಿದ್ದು ಏವೂರಿನ ಶಾಸನದಿಂದ ತಿಳಿದು ಬರುತ್ತದೆ.

"ಪೊದ್ದವರ್ಗ್ಗಂ ಪರೆಕಾರರ್ಗ್ಗವೊಂದು ಭೋಗಂ
ತಪೋಧನರ್ಕ್ಕಂ ಮಠದಲೋದುವ ವಿದ್ಯಾರ್ತ್ಥಿಗಳ್ಗ
ಮಾಹಾರಕ್ಕಂ ಪ್ರತಿದಿನಕ್ಕವೊಂದು ಭೋಗಮಿಂತು
ತ್ರಿಭೋಗಂ ಮಾಡಿ ಪೆರ್ಬ್ಬಾಳ ೫ ವಭಳಾರರ್ಗ್ಗೆ ರಾಜಧಾನಿ
ಕೆಂಬಾವಿಯ ಮೂಡವೊಲದೋಟ ಸರ್ವ್ವಬಾಧಾ ಪರಿಹಾರಂ
ಮಾಡಿ ಬಿಟ್ಟ ಕೆಯ್ಮತ್ತರ್ ೧೦೦೦ ॥"

ಎಂಬ ಉಲ್ಲೇಖ ಏವೂರು ಶಾಸನದಲ್ಲಿ ಕಂಡುಬರುತ್ತದೆ. ಹೈಹಯ ವಂಶದ ಮಹಾಮಂಡಳೇಶ್ವರ ರೇವರಸನ ಹೆಂಡತಿ ಮಾಳಿಯಬ್ಬರಸಿ, ಇಲ್ಲಿನ ತಪೋಧನರು ಹಾಗೂ "ವಿದ್ಯಾರ್ಥಿಗಳ ಆಹಾರಕ್ಕಾಗಿ ೧೦೦೦ ಮತ್ತರ ಭೂಮಿಯನ್ನು"[೩೩] ದಾನವಾಗಿ ಕೊಟ್ಟಿದ್ದು ಶಾಸನದಿಂದ ತಿಳಿದು ಬರುತ್ತದೆ. ಕಾಸಕ್ಕಬ್ಬೆ ಇಲ್ಲಿನ 'ತಪೋಧನರ ಆಹಾರಕ್ಕಾಗಿ ಭೂದತ್ತಿ' ಕೊಟ್ಟಿದ್ದು ಶಾಸನದಿಂದ ತಿಳಿದು ಬರುತ್ತದೆ.

"ಯಜುಶ್ಯಾಖಾಸಮಾಧ್ಯಾಯಿನಾ ಕಾಟಮಾರ್ಯಭಟ್ಟ ಪೌತ್ರೇಣ
ವೆಣ್ಣಪಾರ್ಯಭಟ್ಟಪುತ್ರೇಣ ಯಜನಯಾಜನಾದಿಷಟ್ಕರ್ಮನಿರತೇನ
ವೇದವೇದಾಂಗ ಪಾರಗೇಣ ದುಗ್ಗಣಾರ್ಯಭಟ್ಟೇನ ವಿನಿರ್ಮಾಪಿತಾಯಾ:
ತ್ರೈಪುರುಷಶಾಲಾಯಾ ಯಜುಶ್ಯಾಖಾಸಬ್ರಹ್ಮಚಾರಿ ವಿದ್ಯಾರ್ಥಿಭ್ಯ ಏಕ
ಶತಸಂಖ್ಯಾ ಪರಿಮಿತೇಭ್ಯೋ ಭೋಜನಾರ್ಥಂ ತಸ್ಮಿನ್ನಾ(ನ್ನಾ) ಮ
ಭೂಮಿಮಧ್ಯೇ ದುಗ್ಗಣಾರ್ಯಭಟ್ಟ ಪ್ರಾರ್ಥನಾಯ ಸರ್ವ್ವಂ ನಮಸ್ಯಂ
ಸರ್ವ್ವಕರ ಪರಿಹಾರಂ ॥"

ಎಂಬ ಉಲ್ಲೇಖ ತಿಂಥಣಿ ಶಾಸನದಲ್ಲಿ ಕಂಡುಬರುತ್ತದೆ. ಕಲ್ಯಾಣ ಚಾಲುಕ್ಯ ಎರಡನೇ ಜಯಸಿಂಹನ ಮಹಾಮಂಡಳೇಶ್ವರ ದುಗ್ಗಣಾರ್ಯ ಭಟ್ಟ "ಬ್ರಾಹ್ಮಣ ವಿದ್ಯಾರ್ಥಿಗಳ ಅಶನಾಚ್ಛಾದನಕ್ಕಾಗಿ ೩೦೦ ನಿವರ್ತನ ಭೂಮಿ"[೩೪] ಯನ್ನು ದಾನವಾಗಿ ಕೊಟ್ಟಿದ್ದು ಶಾಸನದಿಂದ ತಿಳಿದು ಬರುತ್ತದೆ. ಕಪ್ಪದೇವರಸನು ಸತ್ರಕ್ಕಾಗಿ ಹಣ ದಾನ ಮಾಡಿದ ವಿಷಯ ಮುದನೂರು ಶಾಸನದಿಂದ ತಿಳಿದು ಬರುತ್ತದೆ. ಅಹವಮಲ್ಲದೇವರಸ ಇಜೇರಿಯ ತಪೋಧನರಿಗೆ ಸತ್ರವನ್ನು ದಾನವಾಗಿ ಬಿಟ್ಟ ಉಲ್ಲೇಖ ಶಾಸನದಿಂದ ತಿಳಿದು ಬರುತ್ತದೆ. ಕೇತಿಸೆಟ್ಟಿಯ ಮಗ ಬಮ್ಮಿಸೆಟ್ಟಿ ಅನ್ನದಾನ ಮಾಡಿದ್ದು ಕುಳಗೇರಿ ಶಾಸನದಿಂದ ತಿಳಿದು ಬರುತ್ತದೆ. ಕೆಲವೊಂದು ಸತ್ರಗಳು ಮಠದಲ್ಲಿರುವುದರಿಂದ, "ಮಠದಲ್ಲಿಪ್ಪವರ ಗ್ರಾಸಕ್ಕೆ ಮತ್ತರ

ಇಪ್ಪತ್ತು"[illegible] ದಾನವಾಗಿ ಕೊಟ್ಟಿದ್ದು ಆಂದೋಲ ಶಾಸನದಿಂದ ತಿಳಿದು ಬರುತ್ತದೆ. ಹೀಗೆ ಅನೇಕ ಸತ್ರಗಳು, ಮದ್ರಿಕಿ, ಸಂಗಮ, ಅರಳಗುಂಡಗಿ, ಏವೂರು, ಅಂಕಲಗಿ, ಹಗರಟಗಿ, ಹಾರಣಗೇರಿ, ಸಗರ, ಯಡ್ರಾಮಿ, ಮುದನೂರು, ಗೋಗಿ ಮುಂತಾದ ಕಡೆ ಸತ್ರಗಳಿಗಾಗಿ ದಾನಕೊಟ್ಟಿದ್ದು ಈ ನಾಡಿನ ಶಾಸನದಿಂದ ತಿಳಿದು ಬರುತ್ತದೆ.

## ಅಗ್ಗಿಷ್ಟಿಗೆ :

ಬೆಂಕಿಯನ್ನು ಹೊತ್ತಿಸಲು (ಪುಟುವಿಗಾಗಿ) ಬೆಂಕಿಯನ್ನು ಕೊಡುವ ಸಲುವಾಗಿ ನಿರ್ಮಿತವಾದವುಗಳೇ ಅಗ್ಗಿಷ್ಟಿಗೆ. ಕೆಲವೊಂದು ಊರು, ದೇವಾಲಯ, ಮಠಗಳಲ್ಲಿ ಬ್ರಾಹ್ಮಣರ ಮನೆಯಲ್ಲಿ ಬೆಂಕಿ ಆರದಂತೆ, ಸದಾ ಉರಿಯುವಂತೆ ನೋಡಿಕೊಳ್ಳಲು ಊರಿನ ಜನರು ದಾನ-ದತ್ತಿಗಳನ್ನು ಬಿಟ್ಟುಕೊಡುತ್ತಿದ್ದರು. ಹೀಗಾಗಿ ಒಂದು ಮನೆಯಿಂದ, ಇನ್ನೊಂದು ಮನೆಗೆ ಬೆಂಕಿ ಹೋಗುತ್ತಿತ್ತು. ಹಾಗಾಗಿ ಸದಾ ಉರಿಯುತ್ತಿದ್ದ ಬೆಂಕಿಯೇ ಅಗ್ಗಿಷ್ಟಿಗೆ ಎನ್ನಬಹುದು.

"ಶ್ರೀಮನ್ಮಹಾಮಂಡಳೇಶ್ವರಂ ಲಕ್ಷ್ಮರಸನ ಕುಮಾರ
ಕಪ್ಪದೇವರಸರು । ಅವರ ದುರ್ಗದಾಳೊಡೆಯ ನಾಯಕ
ಪ್ರಮುಖ ಕರಣಂಗಳುಂ ಮಹಾಜನಂಗಳೈನೂರ್ವರುಂ
ಸಮಸ್ತರ ವಪ್ಪಗಳಿಂದ ದೇವರ ಬ್ರಹ್ಮಪುರಿಯ ಸತ್ರದ
ಅಗ್ಗಿಷ್ಟಿಗೆಯಕ್ಕೆ ಬಿಟ್ಟ ವ್ರಿತ್ತಿ ವಕ್ಕಲದೆರೆಯಲೊಂದರೆವೀಸಮಂ
ಅಂನ್ಯಾಯ ಕಾಹು ಕಾಣಿಕೆಯೊಳಗಾಗಿ ಯೇನು ಬಂದಡಂ ವೂರೊಡೆಯ
ಪ್ರಮುಖ ಮಹಾಜನಂಗಳುಂ ಸಮಸ್ತ ಪ್ರಜೆಗಳುಂ ಕೊಡುವರು ॥"

ಎಂಬ ಉಲ್ಲೇಖ ಮುದನೂರು ಶಾಸನದಲ್ಲಿ ಕಂಡು ಬರುತ್ತದೆ. ಕಲ್ಯಾಣ ಚಾಲುಕ್ಯ ಆರನೇ ವಿಕ್ರಮಾದಿತ್ಯನ ಮಹಾ ಮಂಡಳೇಶ್ವರ ಕಪ್ಪದೇವರಸನು "ಬ್ರಹ್ಮಪುರಿಯ ಸತ್ರದ ಅಗ್ಗಿಷ್ಟಿಗೆಯಕ್ಕೆ ಬಿಟ್ಟ ವ್ರಿತ್ತಿ ವಕ್ಕಲದೆರೆಯಲ್ಲಿ ಅರೆವೀಸ, ಕಾಹು, ಕಾಣಿಕೆಗಳನ್ನು ವ್ರಿತ್ತಿಯಾಗಿ ಬಿಟ್ಟಿದ್ದಾನೆ".[illegible]

"ಓಂ ಸ್ವಸ್ತಿ ಶ್ರೀಮದ್ದಣ್ಡನಾಯಕರ ಮಗಳ್ ಮುದ್ದಲದೇವಿ
ಯಕ್ಕಂಗಳ್ ಹಾಗ ಹಾಗ ವ್ರಿದ್ಧಿಯಿಂ ಶಿವಪುರದ ಅಶೇಷ
ಮಹಾಜನಂಗಳ ಕೆಯ್ಯಲು ಕೊಟ್ಟ ಗದ್ಯಾಣವಾರು ಈ ಪೊಂನ
ವೃದ್ಧಿಯಿಂ ಅಗ್ನಿಷ್ಠೆಯಂ ಮಹಾಜನಂ ನಡಸುವರು ॥"

ಎಂಬ ಉಲ್ಲೇಖ ಏವೂರು ಶಾಸನದಲ್ಲಿ ಕಂಡುಬರುತ್ತದೆ. ಮುದ್ದಲದೇವಿ ಶಿವಪುರ ಎಂಬ ಅಗ್ರಹಾರದ ಮಹಾಜನಗಳ ಕೈಯಲ್ಲಿ ಆರು ಗದ್ಯಾಣಗಳನ್ನು ಕೊಟ್ಟಳೆಂದೂ, ಅವರು ಆ ಹಣದ ಬಡ್ಡಿಯಿಂದ "ಅಗ್ಗಿಷ್ಠೆ"[೩೭] ಯನ್ನು ನಡೆಸುವರೆಂದು ಏವೂರು ಶಾಸನದಿಂದ ತಿಳಿದು ಬರುತ್ತದೆ. ಅಗ್ಗಿಷ್ಟಿಗೆಗಳು ಹೆಚ್ಚಾಗಿ ಅಗ್ರಹಾರಗಳಲ್ಲಿ, ಮಠಗಳಲ್ಲಿ, ದೇವಾಲಯಗಳಲ್ಲಿ ಸ್ಥಾಪಿಸಿ ಅವುಗಳನ್ನು ನೋಡಿಕೊಳ್ಳಲು ದಾನ-ದತ್ತಿ ಕೊಟ್ಟಿರುವುದು ಈ ನಾಡಿನ ಶಾಸನಗಳಿಂದ ತಿಳಿದು ಬರುತ್ತದೆ.

## ಸಾರ್ವಜನಿಕ ಕಟ್ಟೆಗಳು :

ಸಗರನಾಡಿನ ಜನ ಒಂದೆಡೆ ಸೇರಿ, ಕುಳಿತುಕೊಳ್ಳಲು ಗಿಡಗಳನ್ನು ನೆಟ್ಟಿ, ಅವುಗಳ ಸುತ್ತ ಕಟ್ಟೆಗಳನ್ನು ಕಟ್ಟುತ್ತಿದ್ದರು,

"ಶ್ರೀ ರಾಮೇಶ್ವರ ಗದ್ದೆಯಿಂ ಅನಂತರಂ ಬಡಗಲು
ಮೂಡಲು ಕೋಲಲು ದೇವರಿಗೆ ಬಿಟ್ಟ ಗದ್ದೆ ಕಂಮ ೪೫೦ ।
ಅದರ ಬಳಿಯ ಹಾರನೆಲನೊಳಗಾಗಿ ಬಬ್ಬುಲೆಯ ಕಟ್ಟೆಯಲು
ಶ್ರೀರಾಮೇಶ್ವರದೇವರ ಮಾನ್ಯದ ಗದ್ದೆಯಿಂ ಮೂಡಲು
ಆ ಕಟ್ಟೆಯ ಕಾಲಿಂದಂ ಪಡುವಲು ಗದ್ದೆ ಹಾಗವೊಂದು ॥"

ಎಂಬ ಉಲ್ಲೇಖ ಮೂದನೂರನಲ್ಲಿ ಕಂಡುಬರುತ್ತದೆ. ಇಂತಹ ಕಟ್ಟೆಗಳ ಉಲ್ಲೇಖ ಈ ನಾಡಿನ ಶಾಸನದಲ್ಲಿ ಉಲ್ಲೇಖಗೊಂಡಿದೆ. ಒಬ್ಬುಲೆ ಕಟ್ಟೆ,

"ಶ್ರೀಮದುತ್ತರೇಶ್ವರ ದೇವರ್ಗ್ಗೆ ತೆಂಕ ಪೊಲದಲು ರಾಮೇಶ್ವರದೇವರ
ಮಾನ್ಯದ ಕೆಯ್ಯಿಂ ಪಡುವಲು ಬಿಟ್ಟ ಕೆಯ್ಮತ್ತರ್ ೧೦ ॥ ಊರೊಡೆಯ
ಪ್ರಮುಖ ಮಹಾಜನಂಗಳ್ ಅರಸಿಗೆ ತಲ್ಸಂದಿಯಾಗಿ ಬಿಟ್ಟ
ಕೆಯ್ಮತ್ತರ್ ೧೦ ॥ ಅನ್ತು ಮತ್ತರ್ ೨೦ ॥ ಹಾರುವಣ ಕಟ್ಟೆಯ
ಊರೊಡೆಯರ ಮಾನ್ಯದ ಗದ್ದೆಯಿಂ ಬಡಗಲು ಬಿಟ್ಟ ಗದ್ದೆ ಮತ್ತರ್ ॥"

ಎಂಬ ಉಲ್ಲೇಖ ಮುದನೂರು ಶಾಸನದಲ್ಲಿ ಕಂಡುಬರುತ್ತದೆ. ಹಾರುವಣ ಕಟ್ಟೆ, ಮೂಡಲು ಕಟ್ಟೆ, ಹಾಳಕಟ್ಟೆಗಳ ಉಲ್ಲೇಖ ಮುದನೂರು, ಏವೂರು, ಹಗರಟಗಿ, ಯಡ್ರಾಮಿ ಶಾಸನದಲ್ಲಿ ಕಂಡು ಬರುತ್ತವೆ. ಕಟ್ಟೆಗಳನ್ನು ಯಾರು ಕಟ್ಟಿದರು ಎಂಬುದು ಶಾಸನದಲ್ಲಿ ಸ್ಪಷ್ಟವಾಗಿ ತಿಳಿದು ಬರುವುದಿಲ್ಲ.

## ದಾರಿಗಳು–ಕೇರಿಗಳು :

ಅಂದು ಗ್ರಾಮಗಳನ್ನು ಕೇರಿಗಳಾಗಿ ವಿಂಗಡಿಸುತ್ತಿದ್ದರು. ಅಲ್ಲದೆ ದಾರಿಗಳು ಕೂಡ ದಾನ–ದತ್ತಿಗಳಾಗಿ ನೀಡಿದ್ದು ಶಾಸನಗಳಿಂದ ತಿಳಿದು ಬರುತ್ತದೆ.

ಶ್ರೀರಾಮೇಶ್ವರದೇವರ ಕೆಯ್ಯಿಂ ಪಡುವಲು
ಅಗ್ಗಿಣಿಯ ದಾರಿಯಿಂ ಮೂಡಲು ಕೆಯ್ಮತ್ತರು
ಹದಿನೆಂಟು ॥"

ಎಂಬ ಉಲ್ಲೇಖ ಮುದನೂರು ಶಾಸನದಲ್ಲಿ ಕಂಡುಬರುತ್ತದೆ. ಅಗ್ಗಿಣಿಯ ದಾರಿ, ಎಳಗೆಯ ದಾರಿಯಂ,

"ಶ್ರೀ ಲಕ್ಷ್ಮಣೇಶ್ವರ ದೇವರ ಅಂಗಭೋಗ ನೈವೇದ್ಯಕ್ಕೆ
ಅಲ್ಲಿಯ ಸ್ಥಾನಿಕ ಬಲ್ಲಜೀಯರಿಗೆ ಕರಡಿಕಲ್ಲ ದಾರಿಯಿಂ
ಬಡಗಲು ದೇವರ ಪೂರ್ವ್ವದ ಮಾಂನ್ಯದ ಹತ್ತುಗೆಯ
ಬಡಗಲು ಪೂರ್ವ್ವಬಾಧ ಪರಿಹಾರವಾಗಿ ಧಾರೆಯೆರದು
ಬಿಟ್ಟ ಕೆಯಿ ಮಾಣಿಕೇಶ್ವರದ ಮತ್ತರು ೧೨ ॥"

ಎಂಬ ಉಲ್ಲೇಖ ಮುದನೂರು ಶಾಸನದಲ್ಲಿ ಕಂಡುಬರುತ್ತದೆ.ಕರಡಿಕಲ್ಲು ದಾರಿಯಂ, ಎಂಬ ಉಲ್ಲೇಖ ಮುದನೂರು, ಯಾಳಗಿಯ ಶಾಸನದಲ್ಲಿ ಕಂಡು ಬರುತ್ತವೆ. ಶಾಸನೋಕ್ತ ಕೇರಿಗಳು ಈ ರೀತಿಯಾಗಿ ಉಲ್ಲೇಖಗೊಂಡಿವೆ.

"ಶ್ರೀಮನ್ಮಹಾಮಣ್ಡಳೇಶ್ವರಂ ರೇವರಸರ ಕಯ್ಯಲ್ಕೆ XXX
ವಣಮುಮು ಗೊರವಗೇರಿಯಲುವೆಂಟುಹಿಟ್ಟಿನಲು XXX
ರಾದಿತ್ಯೇಶ್ವರದೇವರ್ಗ್ಗೆ ಧಾರಾಪೂರ್ವ್ವಕಂ ಮಾಡಿ ಕೊಟ್ಟರು ॥"

ಎಂಬ ಉಲ್ಲೇಖ ಯಡ್ರಾಮಿ ಶಾಸನದಲ್ಲಿ ಕಂಡುಬರುತ್ತದೆ. ಗೋರವಗೇರಿ, ಬಡಗಣಕೇರಿ,

"ಶ್ರೀ ಲಕ್ಷ್ಮಣೇಶ್ವರ ದೇವರಂಗಭೋಗ ನೈವೇದ್ಯಕ್ಕೆ
ಆ ದೇವರ ಕೇರಿಯರುವಣಾವಂ ಸರ್ವ್ವಬಾಧಾ
ಪರಿಹಾರವಾಗಿ ಆ ಚಂದ್ರಾರ್ಕ್ಕ ತಾರಂಬರಂ ನ
ಡೆವಂತಾಗಿ ಧಾರೆಯೆರದು ಬಿಟ್ಟರು ॥"

ಎಂಬ ಉಲ್ಲೇಖ ಮುದನೂರು ಶಾಸನದಿಂದ ತಿಳಿದುಬರುತ್ತದೆ. ದೇವರಕೇರಿ, ಕುರುಬಗೇರಿ, ಬರಿಯಳಕೇರಿ, ಬ್ರಹ್ಮಪುರಿ, ಮಾಹಿಷ್ಪತಿಪುರ, ಉಭಯಪುರಿ, ಹಬ್ಬೆಗೆ ಈ ರೀತಿ ಕೇರಿಗಳು ಬ್ರಹ್ಮೇಶ್ವರ ದೇವರಿಗೆ ದೇವರ ಕೇರಿ ದಾನ ಬಿಟ್ಟಿದ್ದು ತಿಳಿದು ಬರುತ್ತದೆ. ಯಡ್ರಾಮಿ, ಮುದನೂರು, ಏವೂರು, ಹಗರಟಗಿ ಮುಂತಾದ ಗ್ರಾಮಗಳಲ್ಲಿ ಕೇರಿಗಳ ಉಲ್ಲೇಖ ಕಂಡು ಬರುತ್ತವೆ.

ಸಗರನಾಡಿನ ಶಾಸನಗಳಿಂದ ಅಂದಿನ ಸಾಮಾಜಿಕ ವ್ಯವಸ್ಥೆಯನ್ನು ಕಟ್ಟಿಕೊಡಬಹುದು. ಸಮಾಜದಲ್ಲಿ ನಾಲ್ಕು ವರ್ಣಗಳು ಕಂಡು ಬಂದರು ಅಪ್ರತ್ಯಕ್ಷವಾಗಿ ಪರಸ್ಪರ ಸಹಕಾರ ಮನೋಭಾವನೆ ಇತ್ತೆಂದು ತಿಳಿದು ಬರುತ್ತದೆ ಸಾಮಾಜಿಕ ಸ್ತರವಿನ್ಯಾಸದಲ್ಲಿ ಮೇಲಿದ್ದ ಬ್ರಾಹ್ಮಣರು ಎಲ್ಲ ರೀತಿಯ ಸೌಲಭ್ಯಗಳನ್ನು ಪಡೆದುಕೊಂಡಿದ್ದರು. ಆಯಾ ವೃತ್ತಿಗನುಗುಣವಾಗಿ ಎಲ್ಲರೂ ಸಮಾಜದಲ್ಲಿ ಸಮಾನತೆಯಿಂದ ಇದದ್ದು ತಿಳಿದು ಬರುತ್ತದೆ. ಸಾಮಾಜಿಕ ಹಾಗೂ ಧಾರ್ಮಿಕ ಕಾರ್ಯಗಳಲ್ಲಿ ಸ್ತ್ರೀ-ಪುರುಷರು ಯಾವುದೇ ಭೇದ-ಭಾವ ಎನ್ನದೇ ಎಲ್ಲರೂ ಪಾಲ್ಗೊಳ್ಳುತ್ತಿದದ್ದು ಶಾಸನಗಳಿಂದ ತಿಳಿದು ಬರುತ್ತದೆ. ಒಟ್ಟಾರೆ ಈ ನಾಡಿನ ಶಾಸನಗಳನ್ನು ಗಮನಿಸಿದಾಗ, ಇಲ್ಲಿನ ಜನ ಮಾನವೀಯ ಮೌಲ್ಯಗಳಿಂದ ಕೂಡಿದ ಸಾಮಾಜಿಕ ವ್ಯವಸ್ಥೆ ಇತ್ತೆಂಬುದು ತಿಳಿದು ಬರುತ್ತದೆ.

# ಟಿಪ್ಪಣಿಗಳು

೧. ಇತಿಹಾಸ ದರ್ಶನ, ಸಂ.೮, ಮೋತದಾರ ಡಿ.ವಿಠಲ, ಕರ್ನಾಟಕ ಇತಿಹಾಸ ಆಕಾಡೆಮಿ, ಬೆಂಗಳೂರು, ೧೯೯೩, ಪು.ಸಂ.೧೪.

೨. ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ.೧೮೧.

೩. ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ.೧೪೭.

೪. ಬಾದಾಮಿ: ಪತ್ತಾರ ಶೀಲಾಕಾಂತ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ, ೨೦೦೬, ಪು.ಸಂ.೬೧.

೫. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೨೭೨.

೬. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೩೨೯.

೭. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೩೯೯.

೮. ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ.೧೪೯.

೯. ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ.೧೭೬.

೧೦.ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೧೭೬.

೧೧.ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೪೪೦.

೧೨. ಪಾಂಚಾಳ ವೃತ್ತಿ ಪದಕೋಶ : ಪಾಂಡುರಂಗ ಬಾಬು ಡಿ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ, ೨೦೦೦, ಪು.ಸಂ.೦೨.

೧೩. ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ.೩೮.

೧೪. ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ.೩೯.

೧೫. ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ.೧೪೨.

೧೬. ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ.೧೭೩.

೧೭. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೨೯೮.

೧೮. ತರ್ದವಾಡಿ ನಾಡು ಒಂದು ಅಧ್ಯಯನ : ಕೊಪ್ಪಾ ಎಸ್.ಕೆ, ಪ್ರತಿಭಾ ಪ್ರಕಾಶನ, ಇಂಡಿ, ೧೯೯೦,ಪು.ಸಂ.೧೫೯.

೧೯. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೩೨೭.

೨೦. ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ.೭೦.

೨೧. ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ.೨೦೩.

೨೨. ತರ್ದವಾಡಿ ನಾಡು ಒಂದು ಅಧ್ಯಯನ : ಕೊಪ್ಪಾ ಎಸ್.ಕೆ, ಪ್ರತಿಭಾ ಪ್ರಕಾಶನ, ಇಂಡಿ, ೧೯೯೦,ಪು.ಸಂ.೧೬೭.

೨೩. ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ : ಎಲಿಗಾರ ಚೆನ್ನಕ್ಕ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೦, ಪು.ಸಂ.೪೭.

೨೪. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೪೪೮.

೨೫. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೩೭೯.

೨೬. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೪೫೩.

೨೭. ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ.೧೭೪.

೨೮. ತರ್ದವಾಡಿ ನಾಡು ಒಂದು ಅಧ್ಯಯನ : ಕೊಪ್ಪಾ ಎಸ್.ಕೆ.ಪ್ರತಿಭಾ ಪ್ರಕಾಶನ, ಇಂಡಿ, ೧೯೯೦,ಪು.ಸಂ.೧೬೮.

೨೯. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೩೩೭.

೩೦. ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ : ಎಲಿಗಾರ ಚೆನ್ನಕ್ಕ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೦, ಪು.ಸಂ.೨೩೩.

೩೧. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೩೩೪.

೩೨. ಹೈದರಾಬಾದು ಕರ್ನಾಟಕ ಭಾಗದ ಕನ್ನಡ ಶಿಲಾ ಶಾಸನಗಳು : ಶಿವಾನಂದ ವಿ, ಬನಾರಸ ಹಿಂದೂ ವಿಶ್ವವಿದ್ಯಾಲಯ, ವಾರಣಾಸಿ, ೧೯೯೨, ಪು.ಸಂ.೧೩೮.

೩೩. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೨೭೩.

೩೪. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೨೭೪.

೩೫. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ; ಹುಬ್ಬಳ್ಳಿ, ೧೯೯೬, ಪು.ಸಂ.೩೩೭.

೩೬. ತರ್ದವಾಡಿ ನಾಡು ಒಂದು ಅಧ್ಯಯನ : ಕೊಪ್ಪಾ ಎಸ್.ಕೆ, ಪ್ರತಿಭಾ ಪ್ರಕಾಶನ, ಇಂಡಿ, ೧೯೯೦,ಪು.ಸಂ.೧೬೪.

೩೭. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೨೭೨.

೩೮. Epigraphia Indica : Vol XII, P.No.287.

೩೯. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೪೪೮.

೪೦.ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೩೮೨

೪೧. ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ.೨೩.

೪೨. ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ.೨೭.

೪೩. ತರ್ದವಾಡಿ ನಾಡು ಒಂದು ಅಧ್ಯಯನ : ಕೊಪ್ಪಾ ಎಸ್.ಕೆ, ಪ್ರತಿಭಾ ಪ್ರಕಾಶನ, ಇಂಡಿ, ೧೯೯೦,ಪು.ಸಂ.೧೭೦.

೪೪. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ : ಚಿದಾನಂದ ಮೂರ್ತಿ. ಎಂ, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೦೨, ಪು.ಸಂ.೨೧೩.

೪೫. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ ಹುಬ್ಬಳ್ಳಿ, ೧೯೯೬, ಪು.ಸಂ.೪೫೩

೪೬. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ ಹುಬ್ಬಳ್ಳಿ, ೧೯೯೬, ಪು.ಸಂ.೪೧೦.

೪೭. ಹೈದರಾಬಾದು ಕರ್ನಾಟಕ ಭಾಗದ ಕನ್ನಡ ಶಿಲಾ ಶಾಸನಗಳು : ಶಿವಾನಂದ ವಿ, ಬನಾರಸ ಹಿಂದೂ ವಿಶ್ವವಿದ್ಯಾಲಯ, ವಾರಣಾಸಿ, ೧೯೯೨, ಪು.ಸಂ.೪೦.

೪೮. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೩೭೦.

೪೯. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೩೬೬.

೫೦. ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ.೧೧೩.

೫೧. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೪೧೬.

೫೨. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೩೨೯.

೫೩. ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ.೬೮.

೫೪. ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ.೮೨.

೫೫. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೨೮೨.

೫೬. ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ.೧೩೯.

೫೭. Epigraphia Indica : Vol XII, P.No.273.

# ಅಧ್ಯಾಯ–೫

## ಆರ್ಥಿಕ ವ್ಯವಸ್ಥೆ

೫.೧ ವ್ಯವಸಾಯ ಪದ್ಧತಿ

೫.೨. ಉತ್ಪಾದನೆ – ಕೈಗಾರಿಕೆಗಳು

೫.೩. ವರ್ತಕರು – ಸಂಘಗಳು

೫.೪. ಆರ್ಥಿಕ ಸೌಲಭ್ಯ

೫.೫. ತೆರಿಗೆ – ಸುಂಕ

## ಪ್ರಸ್ತಾವನೆ :

ಪ್ರಾಚೀನ ಕಾಲದ ಆರ್ಥಿಕ ವ್ಯವಸ್ಥೆಯನ್ನು ತಿಳಿಯಲು ನಮಗೆ ಶಾಸನಗಳು ಹೆಚ್ಚಿನ ರೀತಿಯಲ್ಲಿ ಸಹಾಯಕವಾಗಿವೆ. ಚತುರ್ವಿಧ ಪುರುಷಾರ್ಥಗಳಲ್ಲಿ ಅರ್ಥಕ್ಕೆ ಎರಡನೇ ಸ್ಥಾನವಿದ್ದರೂ, ಸಮಾಜದಲ್ಲಿ ಅದಕ್ಕೆ ಮೊದಲಿನೆಯ ಸ್ಥಾನ ಲಭಿಸುತ್ತದೆ. ಪುರಾತನ ಕಾಲದಿಂದಲೂ ಅರ್ಥಕ್ಕೆ ಬಹಳ ಪ್ರಾಮುಖ್ಯತೆ ಕೊಡಲಾಗುತ್ತದೆ. ಆರ್ಥಿಕವಾಗಿ ನಮ್ಮ ನಾಡು ಸಂಪದ್ಭರಿತವಾಗಿದೆ. ಇಲ್ಲಿ ಆರ್ಥಿಕತೆಗೆ ಹೆಚ್ಚಿನ ಬೆಲೆ ಇದ್ದಿರುವುದು ತಿಳಿದುಬರುತ್ತದೆ. ಭಾರತ ಒಂದು ಸಂಪದ್ಭರಿತವಾದ ರಾಷ್ಟ್ರ. ಆದರೆ ಭಾರತೀಯರು ಮಾತ್ರ ಬಡವರು. ಬಹುತೇಕ ಜನರ ಉದ್ಯೋಗ ವ್ಯವಸಾಯ. ವ್ಯವಸಾಯವೇ ಪ್ರಧಾನವಾದ ರಾಷ್ಟ್ರ ನಮ್ಮದು. ಭೂಮಿ ಹಾಗೂ ಕೃಷಿ ಚಟುವಟಿಕೆಯಲ್ಲಿ  ಕಾರ್ಯ ಸಾಧನೆ ಚೆನ್ನಾಗಿದ್ದರೆ ಮಾತ್ರ ಜನರು ಸಮೃದ್ಧಿಯಿಂದ, ಸಂತೃಪ್ತಿಯಿಂದ ಜೀವನ ಸಾಗಿಸುತ್ತಾರೆ, ಸುಖಕರವಾಗಿರುತ್ತಾರೆ ಎಂಬುದು ತಿಳಿದು ಬರುತ್ತದೆ. ಫಲವತ್ತಾದ ಭೂಮಿಯಲ್ಲಿ ರೈತರು ತಮ್ಮ ಉಪಜೀವನ ನಡೆಯಿಸಿಕೊಂಡು ಬಂದಿರುವುದು ನಾಗರಿಕತೆಗಳಿಂದ ತಿಳಿದು ಬರುತ್ತದೆ. ಅಂದರೆ ಮೊದಲು ಜೀವನಕ್ಕೆ ಸಾಕಾಗುವಷ್ಟು  ಆರ್ಥಿಕತೆ ಇದ್ದಾಗ ಮನುಷ್ಯ ಸಂಸಾರ, ಸುಖ, ಶಾಂತಿ, ನೆಮ್ಮದಿಯಿಂದ ಬಾಳುತ್ತಿರುವುದು ಕಂಡು ಬರುತ್ತದೆ. ಮನುಷ್ಯ ತಾನು ತೃಪ್ತನಾದಾಗ, ವ್ಯಾಪಾರ, ವ್ಯವಹಾರದಲ್ಲಿ ತೊಡಗಿಸಿಕೊಳ್ಳುವುದರ ಮೂಲಕ ಆರ್ಥಿಕವಾಗಿ ಪ್ರಗತಿಸಾಧಿಸಿರುವುದನ್ನು ಆಯಾ ರಾಜರ ಕಾರ್ಯದಲ್ಲಿ ಹೇಗೆ ಆರ್ಥಿಕ ಪರಿಸ್ಥಿತಿ ನಿಭಾಯಿಸುತ್ತಿದ್ದರು ಎಂಬುದನ್ನು ಶಾಸನಗಳ ಅಧ್ಯಯನಕ್ಕೆ ತೊಡಗಿದಾಗ ಮಾತ್ರ ತಿಳಿದು ಬರುತ್ತದೆ.

## ೫.೧. ವ್ಯವಸಾಯ ಪದ್ಧತಿ :

ಪ್ರಾಚೀನ ಕಾಲದಿಂದಲೂ ಈ ನಾಡಿನ ಪ್ರಮುಖ ಉದ್ಯೋಗ ವ್ಯವಸಾಯ. ವ್ಯವಸಾಯವೇ ಈ ನಾಡಿನ ಅರ್ಥ ವ್ಯವಸ್ಥೆಯ ಜೀವನಾಡಿ. ಇಲ್ಲಿನ ಜನರ ಮುಖ್ಯ ಕಸುಬೆ ವ್ಯವಸಾಯವಾಗಿತ್ತು. ಇದರ ಜೊತೆಗೆ ವ್ಯಾಪಾರ, ಉದ್ಯೋಗ, ಕೈಗಾರಿಕೆಗಳನ್ನು ಮಾಡುತ್ತಿದ್ದರಿಂದ ಆರ್ಥಿಕ ಅಭಿವೃದ್ಧಿ ಪಥದತ್ತ ಸಾತದೆ. ಆದ್ದರಿಂದ ಸಂಚಾರಿ ಜೀವಿಯಾಗಿದ್ದ ಮಾನವ ಒಂದೆಡೆ ನೆಲೆ ನಿಲ್ಲಲಾರಂಭಿಸಿದ. ಇದರಿಂದ ವ್ಯವಸಾಯ, ವ್ಯಾಪಾರ, ಉದ್ಯೋಗ ಮಾರ್ಗಗಳನ್ನು ಕಂಡುಕೊಂಡು ಅಭಿವೃದ್ಧಿ ಪಥದತ್ತ ನಡೆಯ ತೊಡಗಿದರು. ಕೃಷಿ

ಪ್ರಧಾನವಾದ ಈ ನಾಡಿನ ರೈತರು ಬೆಳೆಯುತ್ತಿದ್ದ ಬೆಳೆಗಳ ಬಗ್ಗೆ ಶಾಸನಗಳಿಂದ ತಿಳಿದು ಬರುತ್ತದೆ. ವ್ಯವಸಾಯಕ್ಕೆ ಯೋಗ್ಯವಾದ ಭೂಮಿಯನ್ನು 'ಕೆಯ್'[೧] ಎಂದು ಕರೆಯುತ್ತಿದ್ದರು. ವ್ಯವಸಾಯ ಅಥವಾ ಖುಷ್ಕಿ ಬೆಳೆಯ ಭೂಮಿಯನ್ನು ಹೊಲ ಮತ್ತು 'ಕೆಯ' ಎಂಬ ಶಬ್ದಗಳು ಸಮಾನ ಅರ್ಥವನ್ನು ಕೊಡುತ್ತವೆ. ಈ ನಾಡಿನಲ್ಲಿ ಭತ್ತದ ಗದ್ದೆ ಮತ್ತು ಕಬ್ಬು ಬೆಳೆಯುವುದು ಶಾಸನಗಳಿಂದ ತಿಳಿದು ಬರುತ್ತದೆ.

ರೈತ ಈ ನಾಡಿನ ಬೆನ್ನೆಲುಬು. ಆತ ಬದುಕಿದರೆ ಮಾತ್ರ ಲೋಕ ಬದುಕುತ್ತದೆ. ವ್ಯವಸಾಯವೇ ಆತನ ಪ್ರಮುಖ ಉದ್ಯೋಗ. ವ್ಯವಸಾಯಕ್ಕಾಗಿ ಕೆರೆ, ಕಾಲುವೆ, ಬಾವಿ ನೀರಿನ ಸೌಲ್ಯಭ ಹೊಂದಿರುವ ನಾಡಾಗಿದೆ. ಬೆಳೆಯುತ್ತಿರುವ ಬೆಳೆಗಳನ್ನು ನೋಡಿದಾಗ, ಇಲ್ಲಿ ರೈತರು ಅಡಿಕೆ, ಎಲೆ, ಭತ್ತ, ಮೆಣಸು, ಅರಶಿನ, ಇಂಗು, ಜೀರಿಗೆ, ಕಬ್ಬು ಜೋಳ, ಹುಣಸೆ, ಕಡಲೆ, ಶುಂಠಿ, ಅಲ್ಲಾ, ಸಾಸಿವೆ, ಸೆಣಬು, ಏಲಕ್ಕಿ ಮುಂತಾದ ಬೆಳೆಗಳನ್ನು ಬೆಳೆಯುತ್ತಿದ್ದರು, ಎಂಬುದು ಈ ನಾಡಿನ ಅಂಕಲಗಿ, ಮುದನೂರು, ಕುಳಗೇರಿ ಶಾಸನಗಳಿಂದ ತಿಳಿದುಬರುತ್ತದೆ. ರೈತರು ಈ ಬೆಳೆಗಳನ್ನು ಬೆಳೆಯುವದರೊಂದಿಗೆ ಆರ್ಥಿಕವಾಗಿ ಸುಧಾರಿಸಿಕೊಂಡಿದ್ದರು.

ಯಡ್ರಾಮಿ ಶಾಸನದಲ್ಲಿ ಹೂದೋಟದ ಬಗ್ಗೆ ತಿಳಿದುಬರುತ್ತದೆ. ದೇವಾಲಯಗಳಿಗೆ ವೃತ್ತಿಯಾಗಿ ಬಿಟ್ಟ ತೋಟಗಳಲ್ಲಿ ದೇವರ ಪೂಜೆಗೆ ಹೂಗಳನ್ನು ಬೆಳೆಯಲಾಗುತ್ತಿತ್ತು. ಕೆಲವು ಸಲ ದೇವರ ಹೂದೋಟಕ್ಕೆಂದೇ ಭೂಮಿ ಬಿಟ್ಟ ಉಲ್ಲೇಖಗಳಿವೆ. ಇನ್ನೂ ಕೆಲವು ಸಲ ದೇವರಿಗೆ ಹೂದೋಟವನ್ನೆ ದಾನವಾಗಿ ಬಿಟ್ಟ ಉಲ್ಲೇಖ ಯಡ್ರಾಮಿ ಶಾಸನದಿಂದ ತಿಳಿದು ಬರುತ್ತದೆ.

## ಭೂ ಪ್ರಕಾರಗಳು :

ಭೂಮಿಯನ್ನು ಎರಡು ರೀತಿಯಲ್ಲಿ ವಿಂಗಡಿಸಲಾಗಿದೆ. ಸಾಗುವಳಿ ಜಮೀನನ್ನು ದೇವಮಾತೃಕ ಮತ್ತು ನದಿಮಾತೃಕಗಳೆಂದು ವಿಂಗಡಿಸಬಹುದು. ಕೇವಲ "ಮಳೆಯ ನೀರನ್ನೆ ಆಶ್ರಯಿಸಿ ಬೆಳೆಯುವ ಹೊಲಗಳು ದೇವ ಮಾತೃಕಗಳು. ನದಿ, ಕೆರೆ ಮುಂತಾದವುಗಳನ್ನು ಆಶ್ರಯಿಸಿರುವ ಹೊಲಗಳು ನದಿ ಮಾತೃಕಗಳು"[೨] ದೇವಮಾತೃಕದಲ್ಲಿ ಹೊಲ, ಗದ್ದೆಗಳನ್ನು ಸೇರಿಸಬಹುದು. ಸಗರ ನಾಡಿನ ಶಾಸನಗಳಲ್ಲಿ ಹೊಲಗಳನ್ನು ಗದ್ದೆ, ಗರ್ದೆ ಎಂದು ಕರೆಯಲಾಗಿದೆ.

ಮಳೆಯ ನೀರನ್ನು ತಡೆಹಿಡಿಯುವ ಅನುಕೂಲ ಹೊಂದಿದ ಗದ್ದೆ ಸಗರ ನಾಡಿನ ಶಾಸನಗಳಲ್ಲಿ ಕಂಡು ಬರುತ್ತವೆ. ಗದ್ದೆಯಲ್ಲಿಯೇ ಬಾವಿ ಇರುವ ಉಲ್ಲೇಖಗಳಿವೆ. ಸಂಜೆ ವೇಳೆ ಬಾವಿ, ಹೆಸರ ಬಾವಿ, ಜನ್ನದ ಬಾವಿ, ಯಾಚರಸ ಬಾವಿ, ಗಾಮುಣ್ಣನ ಬಾವಿಗಳ ಉಲ್ಲೇಖ ಯಾಳಗಿ, ಮುದನೂರ, ಯಡ್ರಾಮಿ, ಮದ್ರಿಕಿ ಶಾಸನದಿಂದ ತಿಳಿದು ಬರುತ್ತದೆ.

"XX ವೂರಿಂ ಮೂಡಣೆಡೆಯ ಇರಿಜೇರದ
ಬಟ್ಟೆಯಿಂ ಬಡಗಣ ಸೀಮೆಯ ಕಾಳಿಂ
ಪಡುವಲಾ ಬಟ್ಟೆಯಿನ್ತೇಕ ಮಾಣಿಕೇಶ್ವರದ
ಕೋಲಲಳೆದು ಕೊಣ್ಡು ಬಿಟ್ಟ ಕರಿಯ ಕೆಯ್ಯುಂ
ಮತ್ತ ೩೦ ||"

ಎಂಬ ಉಲ್ಲೇಖ ಕ್ರಿ..ಶ.೧೦೬೯ರ ಅರಳಗುಂಡಗಿ ಶಾಸನದಿಂದ ತಿಳಿದುಬರುತ್ತದೆ.

ಮಣ್ಣಿನ ಗುಣವನ್ನು ಆಶ್ರಯಿಸಿ ಹೊಲಗಳನ್ನು ಎರೆ ಅಥವಾ ಕರಿಯ ಕೆಯ್ಯಂ (ಕರಿ ಮಣ್ಣಿನ ಭೂಮಿ)

"ಶ್ರೀXX ಣ್ಡಿತರ್ಗ್ಗೆ ಧಾರಾಪೂರ್ವ್ವಕದಿಂ
ಬೊಬದ ಕುಳಿಯಕೆಯ್ಯೊಳ್
೧೫೦ ಕಿಸುಕಾಡು ||"

ಎಂಬ ಉಲ್ಲೇಖ ಏವೂರು ಶಾಸನದಿಂದ ತಿಳಿದುಬರುತ್ತದೆ.

ಕಿಸುಕಾಡು (ಕೆಂಗಲು ಅಥವಾ ಕೆಂಪು ಮಣ್ಣಿನ ಭೂಮಿ)

"ಶ್ರೀ ವಿಕ್ರಮವರ್ಷದ ೯ನೆಯ ಕ್ರೋಧಿ
ಸಂವತ್ಸರದ ಭಾದ್ರಪದ ಶುದ್ಧ ೧೨ಸೋ
ಮವಾರದಂದು ಆ ಸ್ತಾನದಾಚಾಯ್ಯರು
ಅ(ಮೃತ) ರಾಸಿಪಂಡಿತರ್ಗ್ಗೆ ಸರ್ವ್ವನಮಸ್ಯವಾಗಿ
ಧಾರಾಪೂರ್ವ್ವಕಂ ಮಾಡಿ ಕೊಟ್ಟರು
ಮೊರಡಿ ಮತ್ತರು ೧೦೦ ||"

ಎಂಬ ಉಲ್ಲೇಖ ಕ್ರಿ.ಶ.೧೦೮೫ರ ಹಾವಿನಾಳ ಶಾಸನದಿಂದ ತಿಳಿದುಬರುತ್ತದೆ.

ಮೊರಡಿ ಮತ್ತರು (ಎತ್ತರದ ಗರಸು ಭೂಮಿಯನ್ನು ಸೂಚಿಸುತ್ತದೆ) ಎಂಬ ಉಲ್ಲೇಖ ಅರಳಗುಂಡಿಗಿ, ಏವೂರು, ಹಾವಿನಾಳ ರಾಜನಕೋಳೂರ ಮುಂತಾದ ಶಾಸನಗಳಿಂದ, ತಿಳಿದು ಬರುತ್ತದೆ. ಈ ರೀತಿ ಭೂಮಿಗಳನ್ನು ವಿಭಾಗ ಮಾಡಬಹುದು.

## ನೀರಾವರಿ :

ಕೃಷಿ ಉತ್ಪಾದನೆಗೆ ನೀರಾವರಿ ಅತಿ ಅವಶ್ಯಕ. ನೀರಾವರಿ ಮುಖ್ಯವಾಗಿ ನದಿ, ಕೆರೆ, ಬಾವಿಗಳನ್ನು ಅವಲಂಬಿಸಿದ್ದವು. ಸಗರನಾಡಿನ ರಾಜರು, ಮಹಾಮಂಡಲೇಶ್ವರರು, ಅಧಿಕಾರಿಗಳು, ಗ್ರಾಮದ ಜನರು ಕೆರೆ, ಬಾವಿಗಳನ್ನು ಕಟ್ಟಿಸುವುದು ಪುಣ್ಯದ ಕಾರ್ಯವೆಂದು ನಂಬಿದ್ದರು. ಅವುಗಳನ್ನು ನಾಶಗೊಳಿಸಿದರೆ, ಪಾಪದ ಕಾರ್ಯ ಎಂಬ ಅರಿವು ಅವರಿಗಿತ್ತು.

"ಗಂಗಾಸಾಗರಯಮುನಾ ಸಂಗಮದೊಳೆ
ವಾರಣಾಸಿ ಗಯೆಯೆಂಬೀ ತೀರ್ಥಂಗಳೊಳಾತ್ಮ
ಕಲಂ ದ್ವಿಜಪುಂಗವರಾ ಗೋಕುಳ
ಮನಳಿದನಿನ್ತಿದನಳಿದ ॥"

ಎಂಬ ಉಲ್ಲೇಖ ಕ್ರಿ.ಶ. ೧೧೧೬ರ ಬೊಮ್ಮನಹಳ್ಳಿ ಶಾಸನದಿಂದ ತಿಳಿದುಬರುತ್ತದೆ. ಗಂಗಾ, ಯಮುನಾ,

"XXಸು(ಶು)ದ್ಧ ಚತುರ್ಥ್ಯಂ ಮಂಗಲವಾರೇ
ಉತ್ತರಾಯಣ ಸಂಕ್ರಾಂತೌ ಮಹಾಪರ್ವ್ವಣಿ
ಭೈಮರಥೀನದ್ಯುತ್ತರ ತೀರ ಸಮೀಪ ಸ್ಥಿತ
ಘಲುಗುಡುಂಗೆರೆಗ್ರಾಮ ಸಮಾವಾಸಿತನಿಜವಿಜಯ
ಸ್ಕಂಧಾವಾರೇ ಸ್ವಾತ್ಮನ ಶ್ರೇಯೋ ನಿಮಿತ್ತಂ
ಎಡದೊರೆ ವಿಷಯ ಪ್ರತಿವ (ಬ)ದ್ಧ ಸಗರ
ತ್ರಿಶತಮಧ್ಯವರ್ತ್ತಿನಿ ಕೃಷ್ಣವೇಣ್ಣಾನದ್ಯುತ್ತರ
ತೀರೋಪಾಶ್ರಿತೇ ತಿನ್ತಿಣಿಸಿರಿವರ ॥"

ಎಂಬ ಉಲ್ಲೇಖ ಕ್ರಿ.ಶ.೧೧೧೭ರ ತಿಂಥಣಿ ಶಾಸನದಲ್ಲಿ ಕಂಡುಬರುತ್ತದೆ.

ಕೃಷ್ಣವೆಣ್ಣಾ, ಭೀಮರಥಿ ಎಂಬ ನದಿಗಳ ಉಲ್ಲೇಖಗಳಿವೆ. ಈ ಭಾಗದ ಫಲವತ್ತಾದ ಕಪ್ಪು ಭೂಮಿ ಕರ್ನಾಟಕದ ಇನ್ನಾವ ಭಾಗದಲ್ಲೂ ಕಂಡು ಬರುವುದಿಲ್ಲ. ಅಂತೆಯೇ

"ಶ್ರೀ ರಾಮೇಶ್ವರ ದೇವರಂಗಭೋಗ ನಿವೇದ್ಯಕ್ಕೆ
ಬಿಟ್ಟ ಧರ್ಮ್ಮಮೆಂತೆಂದಡೆ ಹೊ(ವ್ಪೊ)ಂಗೆ ಬಂದು
ಮಾರಿದ ಭತ್ತದಲು ಹೊಂಗೆ ಬಳ್ಳವೊಂದು
ನುಂಣ್ಬತ ಮಾನವೆರಡು ಸಟ್ಟುಗ ಜೋಳ ॥"

ಎಂಬ ಉಲ್ಲೇಖ ಕ್ರಿ.ಶ.೧೦೯೯ರ ಮುದನೂರು ಶಾಸನದಿಂದ ತಿಳಿದುಬರುತ್ತದೆ. ಜೋಳ, ಕಬ್ಬು, ಭತ್ತ ಈ ನಾಡಿನಲ್ಲಿ ಹೆಚ್ಚಾಗಿ ಬೆಳೆಯುತ್ತಿದ್ದರೆಂಬುದು ಎಡೆಯಪುರ, ಬೊಮ್ಮನಹಳ್ಳಿ ತಿಂಥಣಿ, ಮುಂತಾದ ಶಾಸನಗಳಿಂದ ತಿಳಿದು ಬರುತ್ತದೆ. ಆದರೆ ಈ ಬೆಳೆಗಳಿಗೆ ನದಿಗಳ ನೀರನ್ನು ವ್ಯವಸಾಯಕ್ಕೆ ಬಳಸುತ್ತಿದ್ದರು ಎಂಬುದಕ್ಕೆ ಯಾವುದೇ ಶಾಸನಾಧಾರಗಳಿಲ್ಲ. ಕೆರೆ-ಕಟ್ಟೆಗಳನ್ನು ತೋಡಿಸುವುದು ಆ ಕಾಲದ ಜನರ ಮತ್ತೊಂದು ಆದರ್ಶವಾಗಿತ್ತು. ಅವರ ಫಲವಾಗಿ ಸಗರ ನಾಡಿನ ಉದ್ದಗಲಕ್ಕೂ ಅನೇಕ ಕೆರೆ-ಕಟ್ಟೆಗಳು ಇದ್ದುದಾಗಿ ಶಾಸನಗಳಿಂದ ತಿಳಿದು ಬರುತ್ತದೆ. ಕೆರೆಗಳ ಇತಿಹಾಸ ಕರ್ನಾಟಕದಲ್ಲಿ ಆದಿ ಕದಂಬರ ಕಾಲದಿಂದ ಪ್ರಾರಂಭವಾಗುತ್ತದೆ. ರಾಜರು, ಅಧಿಕಾರಿಗಳು, ಕೆರೆ ಕಟ್ಟಿಸಿದ ಉಲ್ಲೇಖಗಳಿವೆ. ಬಸವನಕೆರೆ, ಬೋವರಕೆರೆ,

"ಶ್ರೀರಾಮನಾಥದೇವರಲ್ಲಿ ತಮ್ಮೊಳೇಕಸ್ತರಾಗಿ
ಸಿಹ್ವಾಸನಾಧಿಪತಿಗಳಾಗಿ ಕುಳಿದಲ್ಲಿ ಸಗರ
ಸಂಕನಕೆರೆ ಮೇರೆ ಹೆಬ್ಬಟ್ಟೆಗಾರ ಎಂಟು ॥"

ಎಂಬ ಉಲ್ಲೇಖ ಕ್ರಿ.ಶ.೧೨೯ರ ಹಗರಟಗಿ ಶಾಸನದಿಂದ ತಿಳಿದುಬರುತ್ತದೆ. ಸಂಕನ ಕೆರೆ,

"XX ಈಸಪೇಶ್ವರ ದೇವರ ಪೊಲದಿಂ
ತೆಂಕಲ ಮೂವತ್ತಯ್ದು ಗೇಣ ದಾನವಿನೋದನ
ಘಳೆಯೊಳ್ ಬಿಟ್ಟ ಮತ್ತರಯ್ವತ್ತು ಅಲ್ಲಿ ಆ
ಘಳೆಯೊಳ್ ಅಣ್ಣ ಮಗಾವುಣ್ಣನ ಕೆರೆಯ ಕೆಳಗೆ ॥"

ಎಂಬ ಉಲ್ಲೇಖ ಏವೂರ ಶಾಸನದಿಂದ ತಿಳಿದುಬರುತ್ತದೆ. ಅಣ್ಣಾಗಾವುಣ್ಡನ ಕೆರೆ, ಮೀಹದ ಕೆರೆ, ಮೊಟ್ಟಲ ಕೆರೆ, ಸಂಗನ ಕೆರೆ, ಊರುಂಬ ಕೆರೆ, ಮುಂತಾದವುಗಳ ಉಲ್ಲೇಖ ಬೈಚಬಾಳ, ಏವೂರ ಯಡ್ರಾಮಿ, ಕುಳಗೇರಿ, ಯಾತನೂರು ಶಾಸನದಿಂದ ತಿಳಿದು ಬರುತ್ತದೆ. ಕೆರೆಯ ಸಂರಕ್ಷಣೆಗಾಗಿ ಊರಿನ ಜನರು, ಪ್ರಭುಗಳು, ಅಧಿಕಾರಿಗಳು, ದಂಡನಾಯಕರು, ಸೆಟ್ಟಿಗಳು ಕೆರೆಯನ್ನು ದಾನವಾಗಿ ಕೊಟ್ಟ ಉಲ್ಲೇಖ ಏವೂರ ಶಾಸನದಿಂದ ತಿಳಿದು ಬರುತ್ತದೆ.

"ಸ್ವಸ್ತಿ ಶ್ರೀಮಚ್ಚಾಳುಕ್ಯ ವಿಕ್ರಮವರ್ಷದ
೧೩ನೆಯ ಧಾ XXಸಂವತ್ಸರದ ಉತ್ತರಾಯಣ
ಸಂಕ್ರಮಣ ಸೋಮಗ್ರಹಣ ನಿಮಿತ್ತಂ
ರುದ್ರೇಶ್ವರದೇವರ್ಗ್ಗೆ ಇರೆಯೂರು ಗೌಣ್ಡು XX
ಮನೆಯಕೆರೆಯನೂರ ಧರ್ಮ್ಮಮಾಗಿ ಬಿಟ್ಟರಿನ್ತೀ
ಧರ್ಮ್ಮಮ ॥"

ಎಂಬ ಉಲ್ಲೇಖ ಕ್ರಿ.ಶ.೧೦೮೮ರ ಕುಳಗೇರಿ ಶಾಸನದಿಂದ ತಿಳಿದುಬರುತ್ತದೆ. "ಇರೆಯೂರು ಗೌಡ ಕೆರೆಯನ್ನು ದಾನ ಕೊಟ್ಟಿದ್ದು"[೩] "ದೇವರಿಗಾಗಿ ಕಟ್ಟಿಸಿದ ಕೆರೆ"[೪] ಕೆರೆಯುಂ ಕಟ್ಟಿಸು, ಬಾವಿಯುಂ ಸವಿಸು, ದೇವಾಗಾರಂ ಮಾಡಿಸು ಎಂಬ ಉಲ್ಲೇಖ ಸಗರ ಶಾಸನದಿಂದ ತಿಳಿದು ಬರುತ್ತದೆ. ಕೆಲ ಕೆರೆಗಳು ತೆರಿಗೆಯಿಂದಲೂ ಮುಕ್ತಿಯನ್ನು ಪಡೆದಿದ್ದವು. "ಹೊಕ್ಕಣೆ ಕೆರೆ"[೫] ಹಂಪಕವಿ ಮಹಾದೇವನು ಕೆರೆಯನ್ನು ತೆರಿಗೆಯಿಂದ ಮುಕ್ತಗೊಳಿಸಿ, ರೈತರಿಗೆ ಅನುಕೂಲ ಮಾಡಿಕೊಟ್ಟಿದ್ದು ತಿಳಿದು ಬರುತ್ತದೆ.

ಇಲ್ಲಿನ ಕೆರೆಗಳು ನೈಸರ್ಗಿಕ ಜಲಾಶಯದಿಂದ ಕೂಡಿದ್ದು, ಈ ನಾಡಿನ ವ್ಯಕ್ತಿಗಳು ತಮ್ಮ ಹೆಸರಿನ ಮೇಲೆ ಕೆರೆಗಳನ್ನು ಕಟ್ಟಿಸಿದ್ದು, ದೇವರಿಗಾಗಿ ಮತ್ತು ಹೊಲಗಳಾಗಿ ಕೆರೆಗಳು ಬಿಟ್ಟಿದ್ದು ಕಂಡು ಬರುತ್ತವೆ. ಕೆರೆಗಳ ಹೆಸರನ್ನು ಬಿಟ್ಟರೆ, ನೀರಿನ ಪ್ರಮಾಣ, ಉದ್ದಳತೆ ನೀರಾವರಿ ಉಪಯೋಗದ ವಿಧಾನಗಳ ಬಗ್ಗೆ ಶಾಸನಗಳಲ್ಲಿ ಯಾವ ಉಲ್ಲೇಖ ಕಂಡು ಬರುವುದಿಲ್ಲ. ಕೆರೆಗಳ ಜೊತೆ ಕೆಲ ಕಟ್ಟೆಗಳಲ್ಲೂ ಕೃಷಿ, ನೀರಾವರಿ ಇತ್ತೆಂಬುದು ತಿಳಿದು ಬರುತ್ತದೆ.

"XX ಶ್ರೀ ರಾಮೇಶ್ವರ ಗದ್ದೆಯಿಂ ಅನಂತರಂ
ಬಡಗಲು ಮೂಡಲು ಕೋಲಲು ದೇವರಿಗೆ
ಬಿಟ್ಟ ಗದ್ದೆ ಕಂಮ ೪೫೦ । ಅದರ ಬಳಿಯ
ಹಾರನೆಲನೊಳಗಾಗಿ ಬಬ್ಬುಲೆಯ ಕಟ್ಟೆಯಲು
ಶ್ರೀ ರಾಮೇಶ್ವರ ದೇವರ ॥"

ಎಂಬ ಉಲ್ಲೇಖ ಕ್ರಿ.ಶ.೧೯೯೯ರ ಮುದನೂರು ಶಾಸನದಿಂದ ತಿಳಿದುಬರುತ್ತದೆ. ಬಬ್ಬುಲೆ ಕಟ್ಟೆ

"XX ಅರಸಿಗೆ ತಲ್ಸಂದಿಯಾಗಿ ಬಿಟ್ಟ ಕೆಯ್ಮತ್ತರ್ ೧೦
ಅನ್ತು ಮತ್ತರ್ ೨೦ । ಹಾರುವಣ ಕಟ್ಟೆಯ ಊರೊಡೆಯರ ॥"

ಎಂಬ ಉಲ್ಲೇಖ ಮುದನೂರು ಶಾಸನದಿಂದ ತಿಳಿದುಬರುತ್ತದೆ. ಹಾರುವಣ ಕಟ್ಟೆಗಳ ಉಲ್ಲೇಖ ಮುದನೂರ ಶಾಸನದಿಂದ ತಿಳಿದು ಬರುತ್ತದೆ. ಹೀಗೆ ಕೆರೆಗಳಿಗೆ ಧನ ಸಹಾಯ, ಭೂಮಿದಾನ ಕೊಟ್ಟಿದ್ದು ಗಮನಿಸಿದರೆ, ಕೆರೆಗಳು ಈ ನಾಡಿನಲ್ಲಿ ಪ್ರಾಮುಖ್ಯತೆ ಪಡೆದಿದ್ದವು ಎಂಬುವುದು ತಿಳಿದು ಬರುತ್ತದೆ.

ಸಗರ ನಾಡಿನ ಕೆರೆ–ಕಟ್ಟೆಗಳಿಗೆ ಜೀವನಾಡಿಯಾದ ಹಳ್ಳ–ಕೊಳ್ಳಗಳು ಸಹ ಜನರ ಜೀವನದಲ್ಲಿ ಪ್ರಾಮುಖ್ಯತೆ ಪಡೆದಿದ್ದವು. ಅವುಗಳು ಈ ನಾಡಿನ ಶಾಸನಗಳಲ್ಲಿ ಉಲ್ಲೇಖಗೊಂಡಿವೆ. ಇಲ್ಲಿನ ಜನರು ಹಳ್ಳದ ನೀರನ್ನು ಬಳಸುತ್ತಿದ್ದರು. ಭೂಮಿಗೆ ನಿಜವಾದ ಒಡೆಯ ರೈತನೇ ಹೊರತು ರಾಜನಲ್ಲ. ಹಾಗಾಗಿ ಸಗರ ನಾಡಿನ ಶಾಸನಗಳನ್ನು ಗಮನಿಸಿದಾಗ ನೂರಕ್ಕೆ ತೊಂಬತ್ತರಷ್ಟು ಶಾಸನಗಳು ದಾನಕ್ಕೆ ಸಂಬಂಧಿಸಿದ್ದಾಗಿವೆ. ಜನ ಸಾಮಾನ್ಯರಿಂದ ಹಿಡಿದು ರಾಜನವರೆಗೂ ಎಲ್ಲರೂ ದಾನಕ್ಕಾಗಿ ಕೆರೆ–ಕಟ್ಟೆ–ಬಾವಿ, ಹಳ್ಳ–ಕೊಳ್ಳ–ತೊರೆ, ಭೂಮಿಗಳನ್ನು ದಾನವಾಗಿ ಕೊಟ್ಟಿದ್ದಾರೆ. ಇದರಿಂದ ಇವರು ಸ್ವತಃಭೂ ಒಡೆತನ ಪಡೆದಿದ್ದರು. ಎಂಬುದು ತಿಳಿದು ಬರುತ್ತದೆ. ಭೂಮಿಯನ್ನು ದಾನವಾಗಿ ಕೊಡುವಾಗ ಸೀಮೆ, ಅಳತೆಯ ಹೆಸರುಗಳು ಶಾಸನಗಳಲ್ಲಿ ಉಲ್ಲೇಖಗೊಂಡಿವೆ. ಒಮ್ಮೆ ದಾನವಾಗಿ ಬಿಟ್ಟ ಭೂಮಿಯ ಮೇಲೆ ಯಾರ ಅಧಿಕಾರ ಇರುತ್ತಿರಲಿಲ್ಲ ಇದರಿಂದ ಮೋಸಮಾಡಿ ಪುನಃ ವಶಪಡಿಸಿಕೊಳ್ಳುವುದು ಇರಲಿಲ್ಲ. ಏಕೆಂದರೆ ಶಾಸನದ ಕೊನೆ ಭಾಗ ಶಾಪಾಶಯಕ್ಕೆ ಸಂಬಂಧಪಟ್ಟದ್ದಾಗಿದೆ. ಹಾಗಾಗಿ ಯಾರು ಅದನ್ನು ಮೋಸ ಮಾಡಿ ದೋಚುವಂತ್ತಿರಲಿಲ್ಲ. ರೈತ ತನ್ನ ಜಮೀನನ್ನು ಮಾರುವ ಮತ್ತು ದತ್ತಿ ಬಿಡುವ

ಅಧಿಕಾರವಿತ್ತು. ಕೆಲ ಸಲ ಒಕ್ಕಲು ಸುಂಕ, ಒಕ್ಕಲು, ಒಕ್ಕಲುದೆರೆ ಎಂಬ ಉಲ್ಲೇಖ ಏವೂರು, ಹೆಮ್ಮಡಗಿ ಶಾಸನದಿಂದ ತಿಳಿದು ಬರುತ್ತದೆ. ಸ್ವತಃ ಭೂಮಿಯುಳ್ಳ ರೈತರು ತೆರಿಗೆಯನ್ನು ಭರಿಸುತ್ತಿದ್ದರು.

## ಪಶುಸಂಗೋಪನೆ :

ರೈತರು ಕೃಷಿ ಮಾಡುವಾಗ ಅನೇಕ ದನಕರುಗಳನ್ನು ಪಳಗಿಸಿಕೊಳ್ಳುತ್ತಿದ್ದರು. ಪಶುಸಂಗೋಪನೆಯಿಂದ ಹಾಲು, ಮೊಸರು, ತುಪ್ಪಗಳ ಉತ್ಪಾದನೆ ಮಾಡುತ್ತಿದ್ದರು. ಹಾಗಾಗಿ ಆರ್ಥಿಕ ಲಾಭವು ಕೂಡ ದೊರಕುತ್ತಿತ್ತು. ಸಾಗುವಳಿ ಮಾಡುವಾಗ ಎತ್ತುಗಳನ್ನು ಬಳಸುತ್ತಿದ್ದರು. ಸಾರಿಗೆ ಸಂಚಾರಕ್ಕಾಗಿ ದನಕರುಗಳನ್ನು ಪಳಗಿಸಿಕೊಳ್ಳುತ್ತಿದ್ದರು. ಇವು ಶಾಸನಗಳಲ್ಲಿ ಉಲ್ಲೇಖಗೊಂಡಿವೆ. ಕವಿಲೆ, (ಆಕಳು) ಸ್ವಾನ (ನಾಯಿ) ಗಾರ್ದಭ (ಕತ್ತೆ) ಕುದುರೆ, ಎತ್ತು, ಕತ್ತೆ, ಕೋಣ ಮುಂತಾದ ಪ್ರಾಣಿಗಳು ಕೇಶಿರಾಜ ಕೊಂಡಗುಳಿ, ಮುದನೂರ, ಮದ್ರಿಕಿ ಶಾಸನದಿಂದ ತಿಳಿದು ಬರುತ್ತದೆ. ತುರುಗೊಳಿಗೆ ಸಂಬಂಧಿಸಿದ ಶಿಲ್ಪವಿರುವ ವೀರಗಲ್ಲುಗಳು ಈ ನಾಡಿನಲ್ಲಿ ದೊರೆತದ್ದು ತೀರ ವಿರಳ. ಬೈಚಬಾಳ, ಕಕ್ಕೇರಿ, ಕೆಂಬಾವಿ, ಮುದನೂರುಗಳಲ್ಲಿ ಮಾತ್ರ ತುರುಗಳಿಗೆ ಸಂಬಂಧಿಸಿದ ಶಿಲ್ಪರುವ ವೀರಗಲ್ಲುಗಳು ದೊರೆತಿವೆ. ಗೋಹತ್ಯೆ ಮಾಡುವುದು ಹಾಗೂ ಗೋವುಗಳನ್ನು ಅಪಹರಿಸುವುದು ಮಹಾ ಪಾಪ ಎಂಬುದು ಶಾಸನದ ಕೊನೆ ಭಾಗ ಶಾಪಾಶಯದಿಂದ ತಿಳಿದು ಬರುತ್ತದೆ.

> ''ಯೆಡೆಯಪುರದ ಮಲ್ಲಿಕಾರ್ಜ್ಜುನದೇವರ
> ನಾಗXXಣದೇವರ ಅಂಗಭೋಗ ರಂಗಭೋಗ
> ಖಂಡಸ್ಫುಟಿತ ಜೀರ್ಣ್ನೋದ್ಧಾರಕ್ಕಂ ಗೋಚಾರ
> ಭೂಮಿಯಾಗಿ ಪXX ಬಿಟ್ಟ ಕೆಯಿ ಪುರದೊಳಗಾಗಿ
> ಮುಂಜನಕೋಲ ಮ XX ರಯೀ ಧರ್ಮ್ಮವಂ ॥''

ಎಂಬ ಉಲ್ಲೇಖ ಕ್ರಿ.ಶ.೧೨೦೬ರ ಎಡೆಯಪುರ ಶಾಸನದ ತಿಳಿದುಬರುತ್ತದೆ. ದನಕರುಗಳಿಗೆ ಮೇಯಲು "ಗೋಚಾರ ಭೂಮಿಯಾಗಿ ಗೋಮಾಳವನ್ನು ಕಾಯ್ದಿಡುತ್ತಿದ್ದರು".[೬] "ಎತ್ತಿನೊಕ್ಕ"[೭]

"ಶ್ರೀ ಮನ್ಮಹಾಸಾಮಂತಂ ಹಂಡೆಯ ನಾಯಕನುಂ

ಹೆರ್ಗ್ಗಡೆ ಬಂಮ್ಮೆಯ ನಾಯಕನುಂ ಮಂಡಗೆಯ

ಸೆಟ್ಟಿಯ ಎತ್ತಿನೊಕ್ಕ ೧ ರ ಕಾಹುಕಾಣಿಕೆ ಸೇಸೆ

ಬಿಲ್ಕೊಡೆ ಮೂಲೆ ನಾಡೋಪಾದಿ ಗ್ರಾಸವೊಳಗಾಗಿ

ಬಿಟ್ಟ ಗ ೩೦೦ ಅರಲು ಸಲ್ವಂತಾಗಿ ಧಾರೆಯೆರೆದು ಕೊಟ್ಟರು ॥"

ಎಂಬ ಉಲ್ಲೇಖ ಕ್ರಿ.ಶ.೧೧೨೯ರ ಮುದನೂರು ಶಾಸನದಿಂದ ತಿಳಿದುಬರುತ್ತದೆ. ಎತ್ತಿನೊಕ್ಕ ಎಂಬುದು ಎತ್ತುಗಳ ಮೇಲಿನ ತೆರಿಗೆ. ಅವುಗಳ ಮೇಲೂ ಕೂಡ ತೆರಿಗೆಯನ್ನು ವಿಧಿಸುತ್ತಿದ್ದರು. ಎಮ್ಮೆಗಳನ್ನು ಸಹ ಸಾಕುತ್ತಿದ್ದರು. ಎಮ್ಮೆಗಳಿಗಾಗಿ ಕೀಲಾರವಾಗಿ (ಗೋಶಾಲೆ) ಇದ್ದವು ಎಂಬುದು ಸಂಗಮ ಶಾಸನದಿಂದ ತಿಳಿದು ಬರುತ್ತದೆ. ಸಾಕು ಪ್ರಾಣಿಗಳ ಮೇಲೂ ಸಹ ತೆರಿಗೆ ಭರಿಸುತ್ತಿದ್ದರು ಎಂಬುದು ಹಲವಾರು ಶಾಸನಗಳಿಂದ ತಿಳಿದು ಬರುತ್ತದೆ.

### ೫.೨. ಉತ್ಪಾದನೆ – ಕೈಗಾರಿಕೆಗಳು:

ಅರ್ಥ ವ್ಯವಸ್ಥೆಯಲ್ಲಿ ಭೂಮಿಗೆ ಎಷ್ಟು ಪ್ರಾಧ್ಯಾನತೆ ಇದೆಯೋ, ಅಷ್ಟೇ ಕೈಗಾರಿಕೆಗಳಿಗೂ ಪ್ರಾಧ್ಯಾನತೆ ಇದೆ. ಕೈಗಾರಿಕೆಗಳು ಕೂಡ ಆರ್ಥಿಕ ಅಭಿವೃದ್ಧಿಗೆ ಪೂರಕವಾಗಿದ್ದವು. ಕಸದಿಂದ ರಸ ಎನ್ನುವ ಹಾಗೆ ಭೂಮಿಯಲ್ಲಿನ ಕಚ್ಚಾ ವಸ್ತುಗಳೆ ಕೈಗಾರಿಕೆಯ ಮೂಲವಾಗಿದ್ದರಿಂದ, ಉತ್ಪಾದನೆ ಹೆಚ್ಚಾಗುತ್ತಿದ್ದವು. ಹಾಗಾಗಿ ಇವು ಒಂದನ್ನು ಬಿಟ್ಟು ಮತ್ತೊಂದಿಲ್ಲ. ಉತ್ಪಾದನೆ ಹೆಚ್ಚಿದಂತೆ ಬೇಡಿಕೆ ಹೆಚ್ಚಾಗುತ್ತಿತ್ತು.

### ಎಣ್ಣೆ ತಯಾರಿಕೆ :

ಪ್ರತಿಯೊಬ್ಬ ವ್ಯಕ್ತಿಗೆ ನೀರು ಎಷ್ಟು ಮುಖ್ಯವೋ ಆಹಾರಕ್ಕೆ ಎಣ್ಣೆಯು, ಅಷ್ಟೆ ಮುಖ್ಯ. ದಿನ ನಿತ್ಯದ ಬಳಕೆಗೆ ಎಣ್ಣೆ ಅವಶ್ಯಕವಾಗಿದ್ದರಿಂದ ಕೈಗಾರಿಕೆಗಳಲ್ಲಿ ಎಣ್ಣೆ ಉತ್ಪಾದನೆಯೂ ಅಷ್ಟೇ ಮುಖ್ಯವಾಗಿದೆ. ದೇವರ ನಂದಾ ದೀಪಕ್ಕಾಗಿಯೂ ಕೂಡ ಇದನ್ನು ಬಳಸಲಾಗುತ್ತಿತ್ತು. ಎಣ್ಣೆ ತೆಗೆಯುವ ವೃತ್ತಿಯವರನ್ನು ಸಗರ ಶಾಸನದಲ್ಲಿ ತೆಲ್ಲಿಗ, ಗಾಣಿಗ ಎಂದು ಕರೆದಿರುವದು ತಿಳಿದು ಬರುತ್ತದೆ. ಇವರು ದೇವರ ನಂದಾ ದೀಪಕ್ಕಾಗಿ ಎಣ್ಣೆಯನ್ನು ದಾನ

ಕೊಡುವ ಸಂದರ್ಭದಲ್ಲಿ ಕಂಡು ಬರುತ್ತಾರೆ. ಇವರು ಸಮಾಜದಲ್ಲಿ ತಮ್ಮದೇ ಆದ ಸಂಘಗಳನ್ನು ಕಟ್ಟಿಕೊಂಡು ಮಹತ್ವದ ಸ್ಥಾನ ಪಡೆದಿದ್ದರು.

ಸಗರ ನಾಡಿನ ಅನೇಕ ಗ್ರಾಮಗಳಲ್ಲಿ ಎಣ್ಣೆಗಾಣಗಳಿದದ್ದು ಕಂಡು ಬರುತ್ತವೆ. ರಾಜನಕೋಳೂರು, ಅಂಕಲಗಿ, ಹಗರಟಗಿ, ಕಕ್ಕೇರಿ, ಕನ್ನೆಳ್ಳಿ, ಹೆಮ್ಮಡಗಿ, ಮುದನೂರ, ಯಾಳಗಿ, ಕುಳಗೇರಿ, ತಳಬಿಡಿ, ಹೊತಗಲ್, ಸಗರ, ಯಡ್ರಾಮಿ, ತುಮಕೂರು, ಇಜೇರಿ ಮುಂತಾದ ಕಡೆ ಇವರ ಉಲ್ಲೇಖವಿದೆ. ದೇವರ ನಂದಾ ದೀಪಕ್ಕಾಗಿ ಎಣ್ಣೆಯ ಗಾಣವನ್ನು ಕೆಂಬಾವಿಯ ತೆಲ್ಲಿಗ ಕೇಶಿಯಣ್ಣ ಕಲ್ಲುಗಾಣ ಮಾಡಿಸಿಕೊಟ್ಟ ಉಲ್ಲೇಖ ಮುದನೂರ ಶಾಸನದಿಂದ ತಿಳಿದು ಬರುತ್ತದೆ. ಎಣ್ಣೆಯ ಗಾಣದ ಅಂಗಡಿಗಳು ಇದ್ದವು, ಗಾಣಿಗರು ಎಣ್ಣೆಯನ್ನು ಅಳೆದು ಕೊಡುವ ಪದ್ಧತಿಯು ಇತ್ತು. ಅಳತೆಯನ್ನು ಸೊಂಟಿಗೆವೊಂದು, ಸೊಂಟಿಗೆಯಣ್ಣೆ ಮೂಲಕ ಅಳೆಯುತ್ತಿದ್ದರು. ಇದರಿಂದ ಹಣದ ಗಳಿಕೆ ಉತ್ತಮ ಪಡಿಸಿಕೊಂಡಿದ್ದರು. ಇವರು ಸರಕಾರಕ್ಕೆ ತೆರಿಗೆಯನ್ನು ಸಹ ಸಂದಾಯ ಮಾಡುತ್ತಿದ್ದರು.

**ಬೆಲ್ಲ–ಸಕ್ಕರೆ ತಯಾರಿಕೆ :**

ದಿನ ನಿತ್ಯದ ಆಹಾರಗಳಲ್ಲಿ ಬೆಲ್ಲ–ಸಕ್ಕರೆಯ ಅವಶ್ಯಕತೆಯು ಅಷ್ಟೇ ಪ್ರಮುಖವಾಗಿದೆ. ಅಂತೆಯೇ ಸಗರ ನಾಡಿನ ಶಾಸನಗಳಲ್ಲಿ ಬೆಲ್ಲ–ಸಕ್ಕರೆ ಮಾರಾಟ ಮಾಡುತ್ತಿದುದ್ದು ಶಾಸನಗಳಿಂದ ತಿಳಿದು ಬರುತ್ತದೆ. ಅಂಕಲಗಿ, ಯಡ್ರಾಮಿ, ಹಗರಟಗಿ, ಮುದನೂರುಗಳಲ್ಲಿ ಬೆಲ್ಲ–ಸಕ್ಕರೆಗಳಿಗಾಗಿ ಈ ನಾಡಿನಲ್ಲಿ ಕಬ್ಬು ಬೆಳೆಯುತ್ತಿದ್ದ ಉಲ್ಲೇಖ ಕಂಡು ಬರುತ್ತದೆ. ಆದರೆ ಇವುಗಳ ಉತ್ಪಾದನಾ ವಿಧಾನ ಇತ್ಯಾದಿಗಳ ಬಗ್ಗೆ ಮಾಹಿತಿ ಸ್ಪಷ್ಟವಾಗಿ ತಿಳಿದು ಬಂದಿಲ್ಲವಾದರೂ ಕೂಡ, ಬೆಲ್ಲ–ಸಕ್ಕರೆಗಳನ್ನು ಸಹ ಸ್ಥಳೀಯವಾಗಿಯೇ ತಯಾರು ಮಾಡುತ್ತಿದ್ದರೆಂದು ಹೇಳಬಹುದು.

**ಉಪ್ಪು ತಯಾರಿಕೆ :**

ಕರ್ನಾಟಕದ ಕೆಲ ಹಳ್ಳಿಗಳಲ್ಲಿ ಉಪ್ಪನ್ನು ತಯಾರಿಸುತ್ತಿದರು. ಜೀವನಾಂಶಕ್ಕೆ ಉಪ್ಪು ಅತೀ ಅವಶ್ಯಕ. ಉಪ್ಪನ್ನು ತಯಾರಿಸುವ ಜನಾಂಗವನ್ನು ಉಪ್ಪಾರರು ಎಂದು ಕರೆಯುತ್ತಾರೆ. ಮಾರಾಟದ ವಸ್ತುಗಳ ಪಟ್ಟಿಯಲ್ಲಿ ಉಪ್ಪನ್ನು ಸಹ ಹೆಸರಿಸಿವೆ.

"ಶ್ರೀಮತು ಪರx ಚಂದಿಮರಸನಾxxx

xxಯ್ಯಣ ಮಡಿಸಿದ ಶ್ರೀಮತು ಮಲ್ಲಿಕಾರ್ಜುನದೇವ

ಸ್ವಸ್ತಿ ಶ್ರೀಮತು ಚಳುಕ್ಯ ವಿಕ್ರಮ ವರಿಸದ ೫೦ನೆಯ

ವಿಸ್ವ (ವಸು) ಸಂವತ್ಸರದ ಮಗದ ಪುಣ್ಣಮೆ ಸೋಮಗ್ರಹಣಂ

ಸೋಮುವರದಂದು ವೆಸ ಶ್ರೀಮತು ಲಕ್ಕಣೇಸರದೇವರ

ಲೋಕಯ ಕೆರೆಯ ಪಿಂದೆ ತೋಟ ಮತ್ತರ ೧

ಅನ್ತು ಬರವರಸರ ಪುತ್ರxಯ ಷಷ್ಟಿನಿಕರಸ ಮಗ

ಳು ಚೆಬರಸಿಗೆ ಉಪಿನಕೆರೆಯಲಿ ಉಪ್ಪು ಕೊಣ್ಡಲಿ

ಒಬಳ ಕೊಟ್ಟಲಿ ಒಬಳ ಚಂದಿಗೌಡನು ಲೆಂಚಗೌಡನು

ಬಂಮಗೌಡನು ಏಹವಲು ಗೌಡನ ತತಗತನುಂ

ಬಿಟ್ಟಗಳು ಬಿಟ್ಟ ಧಮ ||"

ಎಂಬ ಉಲ್ಲೇಖ ಕ್ರಿ.ಶ.೧೧೨೬ರ ಹಗರಟಗಿ ಶಾಸನದಿಂದ ತಿಳಿದುಬರುತ್ತದೆ. ಈ ನಾಡಿನ ಶಾಸನಗಳಲ್ಲಿ ಉಪ್ಪು ಮತ್ತು ಅದರ ಮಾರಾಟದ ಮೇಲಿದ್ದ ತೆರಿಗೆಯನ್ನು ದಾಖಲಿಸಿವೆ. ಹಗರಟಗಿಯಲ್ಲಿ ಉಪ್ಪನ್ನು ತಯಾರಿಸುವ ಉಪ್ಪಿನ ಕೆರೆ ಇತ್ತು.

## ವಾಣಿಜ್ಯ ಕೇಂದ್ರಗಳು :

ವಾಣಿಜ್ಯವು ವೃತ್ತಿ ಕೈಗಾರಿಕೆಗಳ ಉತ್ಪಾದನೆಯನ್ನು ವಿತರಿಸುವ ಪ್ರಮುಖ ಮಾಧ್ಯಮವಾಗಿದೆ. ಸಾಮಾನ್ಯವಾಗಿ ರಾಜಧಾನಿ ಕಂಪಣದ ಮುಖ್ಯ ಸ್ಥಳ, ಪಟ್ಟಣಗಳು ವ್ಯಾಪಾರಿ ಕೇಂದ್ರಗಳಾಗಿರುತ್ತಿದ್ದವು. ಈ ವಾಣಿಜ್ಯ ಕೇಂದ್ರಗಳಲ್ಲಿ ವಸ್ತುಗಳ ಮಾರಾಟ ಹಾಗೂ ತೆರಿಗೆಯನ್ನು ವಿಧಿಸುತ್ತಿದ್ದರು. ಸಗರ ನಾಡಿನ ಪ್ರಮುಖ ವಾಣಿಜ್ಯ ಕೇಂದ್ರಗಳೆಂದರೆ ಶಿರವಾಳ, ಸಗರ, ಏವೂರು ಮುದನೂರು, ಯಡ್ರಾಮಿ, ಕುಳಗೇರಿ, ಕಕ್ಕೇರಿ. ಕೊಂಡಗುಳಿ, ಹಗರಟಗಿ, ಹೆಮ್ಮಡಗಿ ಮೊದಲಾದ ಗ್ರಾಮ ಪಟ್ಟಣಗಳು ಪ್ರಮುಖ ವ್ಯಾಪಾರಿ ನೆಲೆಗಳಾಗಿದ್ದವೆಂದು ಶಾಸನಗಳಿಂದ ತಿಳಿದುಬರುತ್ತದೆ. ಅಂಕಲಗಿಯಲ್ಲಿ ಎರಡು ಮಾರುಕಟ್ಟೆಗಳಿದ್ದವು.

"ಶಂಕರ ಭಟ್ಟೋಪಾಧ್ಯಯರಿರ್ಗ್ಗೆ
ಕುಡುಲವರ್ಪ್ಪಡೆದಗ್ರಹಾರವಂಕುಲಗೆಯಲು
ಶ್ರೀ ಶಂಕರದೇವವರ್ಮೊದಲಾಗಿ ತ್ರಿಮೂರ್ತಿ ದೇವರ
ದೇವಾಲ್ಯಂಗಳ ಮಾಡಿ ಆ ದೇವರಂಗಭೋಗಕ್ಕ (೦)
ನಿವೇದ್ಯಕಂ ಪೂಜಾರಿಗಳಿಗಂ ಪಾತ್ರಪಾವುಳಕ್ಕ (೦)
ಊರಿಂ ಮೂಡಣಪೊಲದ ದಶವನ್ಧದ ಗುಡ್ಡಮಾನ್ಯದ
ಕೆಯೊಳಗೆ ಮಾಣೀಕೇಶ್ವರದ ಕೋಲಲ್ಕೊಟ್ಟ
ಮತ್ತರಿನ್ನೂಅಂಕದೊಳಂ ಮತ್ತ ೨೦೦ ತೋಟ ವಾ
ಕೋಲಮತ್ತರೆರಡು ಗಾಣ ನಾಲ್ಕು ಊರೊಳಗೆ ಮಾರಿದ
ಭತ್ತಕಂ ಕೊಳಗದಾಯಂ ಪೊಂಗೆ ವೀಸವ ಎರಡುವರೆ
ಲೆಕ್ಕದಿಂ ತಿರುವರು ಪೊರಗಣ ಭತ್ತ ಮಾರಿದೆಡೆ ॥"

ಎಂಬ ಉಲ್ಲೇಖ ಕ್ರಿ.ಶ.೧೦೭೭ರ ಅಂಕಲಗಿ ಶಾಸನದಿಂದ ತಿಳಿದುಬರುತ್ತದೆ. "ಊರೊಳಗೆ ಮತ್ತು ಪೊರಗಣ"[೮] ಇವುಗಳ ಮೇಲು ಸಹ ತೆರಿಗೆ ಇತ್ತು. ಊರೊಳಗಿನ ಸುಂಕವನ್ನು ಎರಡುವರೆ ಲೆಕ್ಕದಿಂ ಇದ್ದರೆ, ಪೊರಗಣ ಸಂತೆಯಲ್ಲಿ ಒಂದರ ಲೆಕ್ಕದಿಂತೆರುತ್ತಿದ್ದರೆಂಬ ಉಲ್ಲೇಖ ಕಂಡು ಬರುತ್ತದೆ.

ಗ್ರಾಮಗಳಲ್ಲಿ ಸಂತೆ ನಡೆಯವುದು ಅಂದಿನಿಂದ ಇಂದಿನವರೆಗೂ ನಡೆದಕೊಂಡು ಬಂದಿದೆ. ವಾರಕ್ಕೊಮ್ಮೆ ಸಂತೆ ನಡೆಯುತ್ತಿತ್ತು. ಸಂತೆಯಲ್ಲಿಯೂ ಸುಂಕ ವಸೂಲಿ ಮಾಡುತ್ತಿದ್ದರು. ಸಂತೆವಣ ಸುಂಕ ಎಂಬ ಉಲ್ಲೇಖ ಯಡ್ರಾಮಿ ಶಾಸನದಿಂದ ತಿಳಿದು ಬರುತ್ತದೆ. ಸಂತೆ ವಾರಕ್ಕೊಮ್ಮೆ ನಡೆದರೆ, ಊರೊಳಗೆ ಪ್ರತಿನಿತ್ಯ ವ್ಯವಹಾರಕ್ಕಾಗಿ ಅಂಗಡಿಗಳು ಇರುತ್ತಿದ್ದವು. ನಂದಾದೀವಿಗೆಗಾಗಿ ಕೊಟ್ಟ ಸಂತೆಯ ಆಯವೂ ಸೆಟ್ಟಿಯೊಬ್ಬನಿಗೆ ನೀಡಿದ ವೃತ್ತಿಯ ಉಲ್ಲೇಖವಿದೆ. ಮುದನೂರಿನಲ್ಲಿ ಹದಿನೈದು ಅಂಗಡಿಗಳು, ವೆಯನ ಗುಂಟೆಯಲ್ಲಿ ದೇವರ ಮುನ್ದಣ ಅಂಗಡಿ, ಶಿರವಾಳದಲ್ಲಿ ರಾಜರಾಣಿಯರ ಮಳಿಗೆಗಳು. ಇದ್ದದ್ದು ಕಂಡುಬರುತ್ತದೆ. ಅಂಗಡಿಯಲ್ಲಿ ಸೆಟ್ಟಿ ಕುಳಿತು ವ್ಯಾಪಾರ ಮಾಡುತ್ತಿದ್ದರೆ, ಸಣ್ಣ-ಪುಟ್ಟ ವ್ಯಾಪಾರಿಗಳು ಸರಕನ್ನು ತಮ್ಮ ತಲೆಯ ಮೇಲೆ ಹೊತ್ತುಕೊಂಡು ಹೋಗಿ ವ್ಯಾಪಾರ ಮಾಡುತ್ತಿದ್ದರು. ನಾಡಿನಾದ್ಯಂತ ಸಂತೆ-ಪೇಟೆಗಳಿಗೆ ವ್ಯಾಪಾರಿಗಳೂ ಬರುತ್ತಿದ್ದರು. ಮಾರಾಟಕ್ಕಾಗಿ ಜೋಳ, ಭತ್ತ, ಬೆಲ್ಲ, ಸಕ್ಕರೆ, ಉಪ್ಪು, ಎಲೆ, ಅಡಕೆ, ಹೂ, ಹಣ್ಣು-ಹಂಪಲು, ಮೆಣಸು, ಅರಶಿನ, ಶುಂಠಿ, ಜೀರಿಗೆ, ಸಾಸವಿಗಳನ್ನು ಹೊತ್ತುಕೊಂಡು ಬಂದು

ಮಾರುತ್ತಿದ್ದರು. ಸರಕುಗಳನ್ನು ಕತ್ತೆ, ಕೋಣ, ಎತ್ತುಗಳ ಮೇಲೆ ಹೇರಿಕೊಂಡು ಬಂದು ವ್ಯಾಪಾರ ಮಾಡುತ್ತಿದ್ದರು.

## ೫.೩. ವರ್ತಕರು – ಸಂಘಗಳು :

ವ್ಯಾಪಾರವನ್ನೇ ವೃತ್ತಿಯಾಗಿಸಿಕೊಂಡವರು ವರ್ತಕರು, ಅರ್ಥ ವ್ಯವಸ್ಥೆಯ ಮೇಲ್ವಿಚಾರಣೆ ರಾಜನದಾದರೂ, ಅರ್ಥದ ಮೂಲ ವ್ಯಾಪಾರಿಗಳ ನಿಯಂತ್ರಣದಲ್ಲಿತ್ತು. ವಿವಿಧ ಪಂಗಡದ ವರ್ತಕರಿದ್ದರು. ಅವರಲ್ಲಿ ಬಣಂಜಿಗ, ಸೆಟ್ಟಿಯರು, ಮುಂಮುರಿದಂಡರು, ವಡ್ಡ ವ್ಯವಹಾರಿ, ಗವರೆ–ಗಾತ್ರಿಗರು, ಉಭಯನಾನಾದೇಶಿಗಳು ಮೊದಲಾದವರ ಉಲ್ಲೇಖ ಈ ನಾಡಿನ ಶಾಸನಗಳಲ್ಲಿ ಕಂಡುಬರುತ್ತದೆ.

## ಬಣಂಜಿಗರು – ಬಳಂಜುಗಳೈಯ್ನೂರ್ವರು :

ಬಣಂಜಿಗರು ಪ್ರಾಚೀನ ಕರ್ನಾಟಕದಲ್ಲಿ ಅತ್ಯಂತ ಪ್ರಭಾವಶಾಲಿಗಳಾಗಿದ್ದರು. "ಶ್ರೇಷ್ಠಿನ್, ವಣಿಜ ಸಂಸ್ಕೃತ ಪದಗಳ ಕನ್ನಡ ರೂಪ ಬಣಿಂಜಿಗ"[೯] ನಾಡಿನ ಇತರ ವೃತ್ತಿ ಸೂಚಕಗಳಾದ ಕಂಬಾರ, ಕುಂಬಾರ, ಸಮಗಾರ, ಹಟಗಾರ ಇವುಗಳಂತೆ, ಬಣಂಜಿಗ ಎಂದರೆ ವ್ಯಾಪಾರಿ. ಈ ನಾಡಿನ ಶಾಸನಗಳಲ್ಲಿ ಇವರನ್ನು ಬೀರವಣಿಗ, ತಳದ ಬಣಿಂಜಿಗರು ಎಂಬ ಉಲ್ಲೇಖ ಶಿರವಾಳ ಶಾಸನದಿಂದ ತಿಳಿದು ಬರುತ್ತದೆ. ಬಣಂಜಿಗ ಎಂಬ ವರ್ತಕ ಶಬ್ದಕ್ಕೆ ಸಮಾನಾರ್ಥವಾದದ್ದು ವೀರ ಬಣಂಜಿಗ. "ವೀರ ಎಂಬುದು ಹನ್ನೆರಡನೇ ಶತಮಾನದ ಶಿವಶರಣರ ವಚನಗಳಲ್ಲಿ"[೧೦] ಉಲ್ಲೇಖಗೊಂಡಿದೆ. ಇಲ್ಲಿ ಬಣಜಿಗ, ಬಣಂಜು, "ವಣಿಕ–ಸಂಸ್ಕೃತ ಶಬ್ದದ ತದ್ಭವ ರೂಪ ವಣಿಕ, ವಾಣಿ, ವಣಿಜ, ಬಣಂಜು, ಬಣಂಜಿಗ ಆಗಿ ಪರವರ್ತಿತವಾಗಿವೆ".[೧೧] ಈ ವಣಿಕ ಭಾಷಾ ಅಪಭ್ರಂಶಗೊಂಡು ವಣಿ, ವಾಣಿ ಎಂದಾಗಿದೆ. ಇಂದಿಗೂ ಮಹಾರಾಷ್ಟ್ರದ ಕೆಲ ಅಡ್ಡ ಹೆಸರು ವಾಣಿ ಎಂದಿವೆ.

ಇವರು ವ್ಯಾಪಾರ ವೃತ್ತಿಯನ್ನೆ ತಮ್ಮ ಜೀವನೋಪಾಯದ ಸಾಧನವನ್ನಾಗಿಸಿ ಕೊಂಡವರು. ಇವರು ಸರಕುಗಳನ್ನು ತಲೆಯ ಮೇಲೆ, ಎತ್ತು, ಕತ್ತೆ, ಕೋಣಗಳ ಮೇಲೆ ಹೊತ್ತುಕೊಂಡು ಸಂತೆ–ಪೇಟೆ, ಪಟ್ಟಣಗಳಿಗೆ ಹೋಗಿ ವ್ಯಾಪಾರ ಮಾಡುತ್ತಿದ್ದರು. ಸರಕುಗಳನ್ನು ಹೇರುತ್ತಿದ್ದರಿಂದ ಹೇರುವ ಬಣಂಜಿಗ ಎಂಬ ಉಲ್ಲೇಖ ಶಾಸನಗಳಲ್ಲಿ ಕಂಡು ಬರುತ್ತದೆ. ವಡಗೇರಾ, ಮಳ್ಳಿ, ಮಲ್ಲಾ, ಕುಳಗೇರಿ, ಕೊಳಕೂರು, ಯಡ್ರಾಮಿ, ಇಜೇರಿ,

ಕೊಂಡಗುಳಿ, ಸುಂಬಡ, ಆಂದೋಲ, ಗಂವ್ಹಾರ, ಮಾಗಣಗೇರಿ, ಇಟಗಿ, ಹುಣಸಗಿ, ಕೆಂಬಾವಿ, ಮಾಲಗತ್ತಿ, ಭೀಮರಾಯನ ಗುಡಿ, ಅಣಬಿ ಮುಂತಾದ ಕಡೆಗಳಲ್ಲಿ ಈ ವ್ಯಾಪಾರಿ ವರ್ತಕ ಬಣಂಜಿಗರು ಇರುತ್ತಿದ್ದರು ಎಂಬುದು ತಿಳಿದುಬರುತ್ತದೆ.

> "XXXದೇವರ ಕೇರಿಯೊಳಗಣ ಗಾಣವೊಂದು ಅಂಗಡಿ(ವೂ)
> ರೊಡೆಯ ಪ್ರಮುಖ ಆಶೇಶ (ಷ) ಮಹಾಜನಂಗಳುಂ
> ನಖರಂಗಳುಂ ಬಣಜವ್ಯೆನೂರ್ವ್ವರುಂ ॥"

ಎಂಬ ಉಲ್ಲೇಖ ಕ್ರಿ.ಶ. ೧೦೯೯ರ ಮುದನೂರು ಶಾಸನದಲ್ಲಿ ಕಂಡುಬರುತ್ತದೆ. ಇವರು ತಮ್ಮದೇ ಆದ ವ್ಯಾಪಾರಿ ಸಂಘಗಳನ್ನು ಕಟ್ಟಿಕೊಂಡಿದ್ದರು. ಎಂಬುದಕ್ಕೆ "ಬಳಂಜವಯ್ನೂರ್ವ್ವರು"[೧೨] ಎಂಬ ಉಲ್ಲೇಖ ಕುಳಗೇರಿ ಶಾಸನದಿಂದ ತಿಳಿದುಬರುತ್ತದೆ. ಬಣಂಜಿಗರು ಸ್ವಗ್ರಾಮದಲ್ಲಿ ವ್ಯಾಪಾರ ವೃತ್ತಿಯನ್ನು ಕೈಗೊಂಡಿದ್ದರಿಂದಲೋ ಅಥವಾ ಅನ್ಯ ಗ್ರಾಮದವರಿಗಿಂತ ಭಿನ್ನವಾಗಿದ್ದರೋ ಏನೋ, ಆದರೆ ತಳದ (ಸ್ಥಳದ) ವಿಶೇಷತೆಯಿಂದ ಇವರನ್ನು ಗುರುತಿಸಬಹುದು.

## ಸೆಟ್ಟಿಯರು – ಸೆಟ್ಟಿಗುತ್ತರು :

ಕರ್ನಾಟಕದ ವರ್ತಕ ಪ್ರಕಾರಗಳಲ್ಲಿ ಸೆಟ್ಟಿಗುತ್ತವು ಒಂದು. ಸೆಟ್ಟಿಗುತ್ತದ ಪೂರ್ವಪದ ಸೆಟ್ಟಿ. ವರ್ತಕ ಎಂಬ ಅರ್ಥವಿದೆ. "ಉತ್ತರ ಪದ ಗುತ್ತ. ಕನ್ನಡ ನಾಮಪದ ಗುತ್ತಿ. ಎತ್ತರವಾದ ಸ್ಥಳ ಎಂಬರ್ಥದಲ್ಲಿ ಬಳಕೆಗೊಳ್ಳುತ್ತದೆ".[೧೩] ಗುತ್ತ ಎಂದರೆ ಶ್ರೇಷ್ಠ, ಹಿರಿಯ ಎಂದರ್ಥ. ಹಾಗಾಗಿ ಸೆಟ್ಟಿಗುತ್ತರು ಹಿರಿಯ ಹಾಗೂ ಶ್ರೇಷ್ಠ ವರ್ತಕರಾಗಿದ್ದರು. ಸ್ಥಳೀಯರಾದ ಈ ವರ್ತಕ ಸೆಟ್ಟಿಯರನ್ನು ತಳದ–(ಸ್ಥಳದ) ಸೆಟ್ಟಿಗುತ್ತರೆಂದು ಕರೆಯಲಾಗಿದೆ. ಸಗರ ನಾಡಿನ ಶಾಸನಗಳಲ್ಲಿ ಬಬ್ಬರಸೆಟ್ಟಿ, ಹೊಂಬಿಸೆಟ್ಟಿ, ಸೋವಿಸೆಟ್ಟಿ, ಲೋಕಿಸೆಟ್ಟಿ, ಕತ್ತಮಸೆಟ್ಟಿ, ಏಚಿಸೆಟ್ಟಿ, ಕೇಸವಸೆಟ್ಟಿ, ಸಂಕರಸೆಟ್ಟಿ, ಪಿಟ್ಟಿಸೆಟ್ಟಿ, ಅಪ್ಪಮಸೆಟ್ಟಿ, ಮಹಾಂತಿಸೆಟ್ಟಿ, ಕೇತಿಸೆಟ್ಟಿ, ಮಲ್ಲಿಸೆಟ್ಟಿ ಇಂತಹ ಮುಂತಾದ ಸೆಟ್ಟಿಗಳ ಉಲ್ಲೇಖ ಶಾಸನಗಳಿಂದ ತಿಳಿದು ಬರುತ್ತದೆ. "ಸೆಟ್ಟಿಗುತ್ತರು"[೧೪]

“ಎಂಟುನಾಡ ಪದಿನರುವರು ಮೂವತ್ತಾ
ರುಬೀಡುಂ ನಾನಾದೇಶಿ ಭೂತಗವರಿಗಾತ್ರಿಗರುಂ
ಮಂಕಕಾರರುಂ ಬೀರರುಂ ಬಾರಿಕರುಂ ಗವುಡುಗಳುಂ
ಗವುಡಶ್ವಾಮಿಗಳ್ । ಸೆಟ್ಟಿಯರು ಸೆಟ್ಟಿಗುತ್ತರು ॥”

ಎಂಬ ಉಲ್ಲೇಖ ಕ್ರಿ.ಶ. ೧೧೨೫ರ ಕುಳಗೇರಿ ಶಾಸನದಲ್ಲಿ ಕಂಡುಬರಯತ್ತದೆ. ಬಮ್ಮಯ್ಯ ಸೆಟ್ಟಿಗುತ್ತ, “ಸಾಯಿರಬಾಯ ಬಂಮಿಸೆಟ್ಟಿ, ಚಂದಿಸೆಟ್ಟಿ, ದೇವಣಸೆಟ್ಟಿ, ತೊನಸೆಯ ದೇವಿಸೆಟ್ಟಿ, ತಂಬುಲಿಗ ಜೋಗಿಸೆಟ್ಟಿ, ದಾಸಿಸೆಟ್ಟಿ ಶಾಸನೋಕ್ತ ಸೆಟ್ಟಿಯರ”[೧೫] ಉಲ್ಲೇಖವಿದೆ. ಬಳೆ ವ್ಯಾಪಾರ ಮಾಡುವ ಕಾಜಗಾರ ಸೆಟ್ಟಿ, ಗ್ರಾಮದಲ್ಲಿ ಸರ್ವ ಅಧಿಕಾರವನ್ನು ಹೊಂದಿದ ಪಾರಿಸೆಟ್ಟಿಯ ಉಲ್ಲೇಖವು ಕಂಡು ಬರುತ್ತದೆ. ಇವರು ತಮ್ಮದೇ ಆದ ಕುಲದೇವರುಗಳನ್ನು ಹೊಂದಿದ್ದರು. ರಾಮೇಶ್ವರ, ಬಾಚೇಶ್ವರ, ಕೇತೇಶ್ವರ ಈ ದೇವರುಗಳಿಗೆ ಕೆಂಬಾವಿ, ಕನ್ನೆಯಹಳ್ಳಿ, ಚೋಳನಹಳ್ಳಿ, ಕಕ್ಕೇರಿ, ಶಿವಪುರ, ಏವೂರ ಸೆಟ್ಟಿಯರು ಗವರೇಶ್ವರ ದೇವರಿಗೆ ದತ್ತಿಕೊಟ್ಟ ಉಲ್ಲೇಖವಿದೆ.

ಸಗರ, ಕುಳಗೇರಿ, ಶಿರಿವಾಳ, ಮುದನೂರ, ರಾಜನಕೋಳೂರು, ಹಗರಟಗಿ, ಏವೂರ, ಎಡೆಯಪುರ ಶಾಸನಗಳಲ್ಲಿ ಆಯಾ ನಾಡಿನ ಸೆಟ್ಟಿಯರನ್ನು ಪ್ರತಿನಿಧಿಸುವ ಸೆಟ್ಟಿಗುತ್ತರ ಉಲ್ಲೇಖ ಶಾಸನಗಳಲ್ಲಿ ಕಂಡು ಬರುತ್ತದೆ. ಇವು ಅವರ ವ್ಯಾಪಾರ ಇಲ್ಲವೆ, ವಾಸಿಸುವ ನೆಲೆಗಳಾಗಿದ್ದವೆಂದು ಹೇಳಬಹುದು. ಸೆಟ್ಟಿಗುತ್ತರು ಸರಕುಗಳನ್ನು ತಲೆಯ ಮೇಲೆ ಹೊತ್ತಿಕೊಂಡು ಗ್ರಾಮ ಪಟ್ಟಣಗಳಿಗೆ ಹೋಗಿ ವ್ಯಾಪಾರ ಮಾಡುತ್ತಿದ್ದರು.

## ನಕರರು :

ಪ್ರಾಚೀನ ಕನ್ನಡ ನಾಡಿನ ವರ್ತಕ ಪ್ರಕಾರಗಳಲ್ಲಿ ನಕರರು ಪ್ರಮುಖ ಪಾತ್ರ ವಹಿಸಿದ್ದರು. “ಶಾಸನಗಳು ಇವರನ್ನು ಅಂಗಡಿ ಸೆಟ್ಟಿಯರೆಂದು ಕರೆದಿರುವುದರಿಂದ ಇವರು ಹೆಚ್ಚಾಗಿ ಪಟ್ಟಣಗಳಲ್ಲಿ ವಾಸವಾಗಿದ್ದರು.”[೧೬]

“XX ದೇವರ ಸತ್ರದ ಮನೆ ೧ ಪೂಜಾರಿಯ ಮನೆ ೧
ದೇವರ ನಂದಾದೀವಿಗೆಗೆ ನಡೆವ ಗಾಣದ ಮನೆ ೧
ಇಂತು ಮನೆ ಮೂರು ಗಾಣ ೧ ನಖರಮುಂ ॥”

ಎಂಬ ಉಲ್ಲೇಖ ಕ್ರಿ.ಶ. ೧೧೦೫ರ ಏವೂರು ಶಾಸನದಿಂದ ತಿಳಿದುಬರುತ್ತದೆ. ಸಗರ, ಏವೂರು, ಮುದನೂರ ಶಿರಿವಾಳ, ಆಂದೋಲಾ ಇವು ನಕರರು ವಾಸಿಸುತ್ತಿದ್ದ, ಇಲ್ಲವೆ ವ್ಯಾಪಾರ ಮಾಡುತ್ತಿದ್ದ ಪಟ್ಟಣಗಳಾಗಿದ್ದವು. ಇವರು ಸಂತೆ ಪೇಟೆಗಳಲ್ಲಿ ಸರಕುಗಳನ್ನು ಖರೀದಿಸಿ, ಅಂಗಡಿ ಹಾಗೂ ಮಳಿಗೆಗಳಲ್ಲಿಟ್ಟು ಮಾರಾಟ ಮಾಡುತ್ತಿದ್ದರು. ನಕರರು "ವರ್ತಕರು ಅಷ್ಟೆ ಅಲ್ಲ, ದೇವಾಲಯವೆಂತಲೂ ಅರ್ಥವಿರುವುದರಿಂದ ಬಹುಶಃ ನಕರಗಳು ದೇವಾಲಯದ ಆಯ, ಬೀಯಗಳಗೆ ಸಂಬಂಧಿಸಿದ ವರ್ತಕ ಸಂಘಗಳಾಗಿವೆ."[೧೭] ಹಗರಟಗಿಯಲ್ಲಿ ನಖರೇಶ್ವರ ದೇವಾಲಯದ ಉಲ್ಲೆಖವಿದೆ. ಬೋಗಾರ ನಖರ ಎಂಬುದು ಇವರ ಪಂಗಡವಾಗಿರಬಹುದು.

## ಮುಮ್ಮುರಿದಂಡ :

ಮುಮ್ಮುರಿದಂಡ ವರ್ತಕರು ಸೈನ್ಯವೆಂಬ ಅಭಿಪ್ರಾಯವನ್ನು ಕೆಲ ವಿದ್ವಾಂಸರು ವ್ಯಕ್ತ ಪಡಿಸಿರುವರಾದರೂ, ಇವರು ಮಧ್ಯಕಾಲಿನ ಕರ್ನಾಟಕದ ಇತಿಹಾಸದಲ್ಲಿ ಪ್ರಮುಖ ವರ್ತಕರು ಎಂಬುದು ತಿಳಿದು ಬರುತ್ತದೆ. "ಮುಮ್ಮುರಿ ಪದಕ್ಕೆ ಕಾಸಿದ ಮಳಲು ಎಂದರ್ಥ".[೧೮] ಈ ಹಿನ್ನಲೆಯಲ್ಲಿ ಮುಮ್ಮುರಿದಂಡವೆಂದರೆ "ಮೂರು ಮುರಿಗೆಯ ದಂಡ, ಕೋಲು"[೧೯] ಎಂದರ್ಥವಾಗುವುದು. ಹಾಗೆ ದಂಡ ಧಾರಣವು ಅವರಿಗೆ ಗೌರವದ ಸೂಚಕವಾಗಿರಬಹುದು ಅಥವಾ ದಾರಿಯಲ್ಲಿ ವ್ಯಾಪಾರಕ್ಕಾಗಿ ಹೊರಟಾಗ ಎದುರಾಗುವ ಕಳ್ಳಕಾಕರಿಂದ ರಕ್ಷಣೆ ಹೊಂದುವುದಕ್ಕಾಗಿ ಅವುಗಳನ್ನು ಹಿಡಿದುಕೊಳ್ಳುತ್ತಿರಬಹುದು. ಇವರು ಅಡಿಕೆ, ಅರಶಿನ, ಮೆಣಸು, ಎಲೆ, ಜೀರಿಗೆಗಳನ್ನು ಮಾರಾಟ ಮಾಡುತ್ತಿದ್ದರು. ಇವರು ಸರಕುಗಳನ್ನು ಎತ್ತು, ಕತ್ತೆ, ಕೋಣಗಳ ಮೇಲೆ ಹೇರಿಕೊಂಡು ಸಂತೆ, ಪೇಟೆಗಳಿಗೆ ಹೋಗಿ ಮಾರಾಟ ಮಾಡುವ ವರ್ತಕರೆಂದು ಹೇಳಬಹುದು ಇದರಿಂದ ಇವರು ಸಂಚರಿಸುವ ವರ್ತಕರಾಗಿದ್ದರೆಂದು ತಿಳಿದು ಬರುತ್ತದೆ.

"ಸ್ವಸ್ತಿ ಮತು ಪ್ರತಿಗಂಡಭೈರವ ಸಗ
ರವೈನೂರ್ಬ್ಬಾಡದ ಯಿಂಮಡಿ ಗಣಪತಿರಡ್ಡಿಯರು
ಏಳಗೆಯ ಮಹಾಪ್ರಭುಗಳು ಅರುವತ್ತೊಕ್ಕಲು
ಮುಂಮುರಿದಂಡಂಗಳು ॥"

ಎಂಬ ಉಲ್ಲೇಖ ಕ್ರಿ.ಶ.೧೨೬೫ರ ಯಾಳಗಿ ಶಾಸನದಲ್ಲಿ ಕಂಡುಬರುತ್ತದೆ. ಕುಳಗೇರಿ, ಕಕ್ಕೇರಿ, ಹಗರಟಗಿ, ಅಂಕಲಗಿ, ಮುದನೂರು, ಯಾಳಗಿ, ರಾಜನಕೋಳೂರು ಮುಂತಾದ ಕಡೆ ಇವರ ಉಲ್ಲೇಖಗಳಿವೆ. ಶಾಸನಗಳಲ್ಲಿ ಮೂವತ್ತಾರು ಬೀಡು, ಮುಮ್ಮುರಿದಂಡಗಳು, ಮುಮ್ಮರಿದಂಡ ಮೂವತ್ತಾರು ಎಂಬ ಉಲ್ಲೇಖ ಶಾಸನದಿಂದ ತಿಳಿದು ಬರುತ್ತದೆ. ಇವು ಈ ಶಾಸನಗಳಿರುವ ಆಯಾ ಗ್ರಾಮಗಳನ್ನೊಳಗೊಂಡ ಬೇರೆ–ಬೇರೆ ಮುವತ್ತಾರು ಗ್ರಾಮಗಳಾಗಿರಹುದು, ಹಾಗಾಗಿ ಇವರು ಈ ಪ್ರದೇಶದಲ್ಲಿ ನೆಲೆಸಿರಬಹುದೆಂದು ಊಹಿಸಬಹುದು.

## ಗವರಿ ಗಾತ್ರಿಗರು :

ಕನ್ನಡ ಶಾಸನಗಳಲ್ಲಿ ವೀಳ್ಯದೆಲೆ ಮಾರಾಟಕ್ಕೆ ಸಂಬಂಧಿಸಿದ ವರ್ತಕರನ್ನು ಗವರಿ–ಗಾತ್ರಿಗ ಎಂದು ಕರೆದಿರುವ ಉಲ್ಲೇಖಗಳಿರುವುದು ಶಾಸನಗಳಿಂದ ತಿಳಿದು ಬರುತ್ತದೆ. ವೀಳ್ಯದೇಲೆಯ ವ್ಯಾಪಾರ ಮಾಡುವವರಿಗೆ ಗವರಿ ಎಂದು ಕರೆಯುತ್ತಾರೆ, "ಎಲೆಯನ್ನು ಹೆಗಲ ಮೇಲೆ ಹೊತ್ತುಕೊಂಡು ಊರಿಂದ ಊರಿಗೆ ಹೋಗಿ ಮಾರಾಟ ಮಾಡುವವರನ್ನು ಹೆಗಲಗವರಿಗಳೆಂದು"[೨೦] ಕರೆಯುತ್ತಾರೆ. ಗಾತ್ರಿಗ ಎಂದರೆ ಒಂದು ಸಾವಿರ ವೀಳೆಯದೆಲೆಗಳುಳ್ಳ ಕಟ್ಟು ಎಂದರ್ಥ. ಇವರು ಕುದುರೆ, ಕತ್ತೆಗಳ ಮೇಲೆ ಎಲೆಯ ಕಟ್ಟನ್ನು ಹೇರಿಕೊಂಡು ಸಂತೆ–ಪಟ್ಟಣಗಳಿಗೆ ಹೋಗಿ ವ್ಯಾಪಾರ ಮಾಡುತ್ತಿದ್ದರು. ಗವರಿಗಳು ಗಾತ್ರಿಗರುಂ, ಭೂತಗವರಿ ಗಾತ್ರಿಗರು, ತಂಬುಲಿಗ ಸಾಸಿರ್ವರು ಎಂಬ ಉಲ್ಲೇಖ ಸಗರ, ಕುಳಗೇರಿ, ಶಿರವಾಳ ಶಾಸನದಿಂದ ತಿಳಿದು ಬರುತ್ತದೆ.

"XX ನಾನಾದೇಷಾಂತರದೆಂಟುನಾಡ

ಪದಿನರುವರು ಗವರಿಗಳುಂ ಗವರೆ ಗಾತ್ರಿಗರುಂ ॥"

ಎಂಬ ಉಲ್ಲೇಖ ಕ್ರಿ.ಶ. ೧೧೪೪ ರ ಹಗರಟಗಿ ಶಾಸನದಲ್ಲಿ ಕಂಡುಬರುತ್ತದೆ. ಹೀಗೆ ವೀಳದೆಲೆ ವರ್ತಕರಲ್ಲಿ ಗವರೆ–ಗಾತ್ರಿಗ ಎಂಬ ಎರಡು ಪಂಗಡಗಳಲ್ಲದೆ, ತಂಬುಲಿಗರು ಎಂಬ ಮೂರನೆ ಪಂಗಡ ಇರುವುದು ಶಾಸನಗಳಿಂದ ತಿಳಿದು ಬರುತ್ತದೆ. ಆದರೆ ಇವರ ಸ್ಥಾನ–ಮಾನದ ಬಗ್ಗೆ ಶಾಸನದಲ್ಲಿ ಸ್ಪಷ್ಟವಾಗಿ ತಿಳಿದು ಬರುವುದಿಲ್ಲ. ವರ್ತಕ ಸಂಘದ ಸದಸ್ಯರ ಬಗ್ಗೆಯು ಸ್ಪಷ್ಟವಾಗಿ ಶಾಸನದಲ್ಲಿ ಉಲ್ಲೇಖಗೊಂಡಿಲ್ಲ. ಆದ್ದರಿಂದ ಗವರೆ–ಗಾತ್ರಿಗರು ವೀಳೆದೆಲೆ ವರ್ತಕರೆಂದು ತಿಳಿದುಬರುತ್ತದೆ. ವೀಳೆದೆಲೆ ವ್ಯಾಪಾರದೊಂದಿಗೆ ದೇವಾಲಯದ

ನಿರ್ಮಾಣ ಕಾರ್ಯವು ಕೂಡ ಮಾಡಿದ್ದಾರೆ. ಇವರು ಗವರೇಶ್ವರ ಎಂಬ ದೇವಾಲಯ ನಿರ್ಮಿಸಿರುವುದು ಹಗರಟಗಿ ಶಾಸನದಿಂದ ತಿಳಿದು ಬರುತ್ತದೆ.

ಗವರಿ–ಗಾತ್ರಿಗ ಎಂಬ ಎರಡು ಪಂಗಡಗಳು ಸಾಮಾಜಿಕ ಸ್ಥಾನಮಾನ, ಸ್ಥಿತಿಗತಿಗಳ ಬಗ್ಗೆ, ಸಾಮ್ಯ ವೈಷಮ್ಯಗಳ ಬಗೆಗೆ ಶಾಸನಗಳು ಸ್ಪಷ್ಟ ಮಾಹಿತಿ ನೀಡುವುದಿಲ್ಲ. ಇವರು ವರ್ತಕ ಸಂಘದ ಸದಸ್ಯರಾಗಿದ್ದರು ಎಂಬುದರ ಬಗ್ಗೆ ಯಾವ ಆಧಾರಗಳೂ ಲಭ್ಯವಾಗಿಲ್ಲ. ಅದುದರಿಂದ ಗವರಿ–ಗಾತ್ರಿಗರನ್ನು ಪ್ರತ್ಯೇಕವಾದ ವೀಳ್ಯದೆಲೆ ವರ್ತಕರೆಂದು ಪರಿಗಣಿಸಲಾಗಿದೆ. ಒಟ್ಟಿನಲ್ಲಿ ವೀಳೆದೆಲೆ ಉತ್ಪಾದನೆ ಹಾಗೂ ಮಾರಾಟದಲ್ಲಿ ಹೆಚ್ಚಿನ ಪ್ರಗತಿಯನ್ನು ಸಾಧಿಸಿ ಈ ನಾಡಿನಾದ್ಯಂತ ಖ್ಯಾತಿ ಪಡೆದಿದ್ದಾರೆ.

> "XXಮುದಿನೀರ ಹದಿನೆಂಟು ಸಾಸಿರ ಮತ್ತರು ಭೂಮಿಯೊಳಗಣ
> ಹೆಜ್ಜುಂಕ ವಡ್ಡರಾವುಳವಂ ವುಪ್ಪರಕ್ಕವಂ ಮಡಿವ
> ಭಂಡಕ್ಕಂ ತಿರುವರು ಶ್ರೀರಾಮೇಸ್ಟರ XX॥"

ವಡ್ಡರಾವುಳ ಎಂಬ ವರ್ತಕರ ಇನ್ನೊಂದು ವರ್ಗವಿದ್ದದು ಮುದನೂರ ಶಾಸನದಿಂದ ತಿಳಿದು ಬರುತ್ತದೆ.

## ನಾನಾದೇಶಿ–ಉಭಯ ನಾನಾದೇಶಿ :

ದೇಶವೆಂದರೆ ಸ್ಥಳ, ಪ್ರದೇಶ ಎಂದು. ಉಭಯ ಎಂದರೆ "ಪಾದಮಾರ್ಗ ಹಾಗೂ ಜಲಮಾರ್ಗವೆಂದು ಅರ್ಥ"[೨೧] ನಾನಾದೇಶಿ ಉಭಯನಾನಾದೇಶಿ ವರ್ತಕರು ಗ್ರಾಮ–ಪಟ್ಟಣಗಳಿಗೆ ಸರಕುಗಳನ್ನು ಹೊತ್ತುಕೊಂಡು ಹೋಗಿ ನಾಡಿನಾದ್ಯಾಂತ ವ್ಯಾಪಾರ ಮಾಡುತ್ತಿದ್ದರು. ಜೊತೆಗೆ ಆಯಾ ಪ್ರದೇಶಗಳಲ್ಲಿ ಬೆಳೆಯುವ ವಸ್ತುಗಳನ್ನು ಖರೀದಿಸುತ್ತಿದ್ದರೆಂಬುದು ಈ ನಾಡಿನ ಶಾಸನಗಳಲ್ಲಿ ಉಲ್ಲೇಖಗೊಂಡಿರುವುದು ತಿಳಿದು ಬರುತ್ತದೆ.

> "ನಾಡುಗಳುಂ ನಖರಂಗಳುಂ ನಾನಾದೇಸಿ
> ಉಭಯನಾನಾದೇಸಿ ಮುಂಮುರಿದಂಡಮುಂ ॥"

ಎಂಬ ಉಲ್ಲೇಖ ಕ್ರಿ.ಶ.೧೧೪೪ ರ ಹಗರಟಗಿ ಶಾಸನದಿಂದ ತಿಳಿದುಬರುತ್ತದೆ. ಮಧ್ಯಕಾಲೀನ ಕರ್ನಾಟಕದಲ್ಲಿ ದೇಶ ಒಂದು ನಾಡಿನ ವ್ಯಾಪ್ತಿಯಲ್ಲಿ ಬಳಕೆಗೊಳ್ಳುವ ಪದವಾಗಿತ್ತು. ಕಾರಣ ಇಲ್ಲಿ ದೇಶಿ ಎಂದರೆ ಆ ನಾಡಿನ ಹಾಗೂ ನಾನಾದೇಶಿ ಎಂದರೆ

ವಿವಿಧ ನಾಡುಗಳ ವರ್ತಕರೆಂದು ಹೇಳಬಹುದು. ಅಂಕಲಗಿ, ಅರಳಗುಂಡಗಿ, ಕೋಳಕೂರು, ಕುಳಗೇರಿ, ಸಗರ, ಏವೂರ, ಹಗರಟಗಿ, ಮುಂತಾದ ಶಾಸನಗಳಲ್ಲಿ ವಿವಿಧ ಬಗೆಯ ವರ್ತಕರು ಉಲ್ಲೇಖಗೊಂಡಿರುವುದನ್ನು ಕಾಣಬಹುದು.

## ವರ್ತಕರ ಸಂಘಗಳು :

### ಅಯ್ಯಾವೊಳೆ ಅಯನೂರ್ವರು

ಪ್ರಾಚೀನ ದಕ್ಷಿಣ ಭಾರತದ ವರ್ತಕ ಶ್ರೇಣಿಗಳಲ್ಲಿ ಅಯ್ಯಾವೊಳೆ ಐನೂರ್ವರು ಎಂಬ ವರ್ತಕ ಸಂಘ ಪ್ರಮುಖವಾದುದು. ಅಯ್ಯಾವೊಳೆ ಎನ್ನುವ ಪ್ರದೇಶಕ್ಕೆ ಐಹೊಳೆ ಎಂದು ಕರೆಯುತ್ತಿದ್ದರು. ಅಂದು ಐಹೊಳೆ ಪ್ರಧಾನ ವಾಣಿಜ್ಯ ಕೇಂದ್ರವಾಗಿತ್ತು, "ಐದನೂರು ಜನ ಬ್ರಾಹ್ಮಣ ಮಹಾಜನರ ಪ್ರಸಿದ್ಧ ಅಗ್ರಹಾರವೂ"[೨೨] ಆಗಿದ್ದಿತು. ಸಗರ ಶಾಸನದಲ್ಲಿ ಇವರನ್ನು ಅಯ್ಯೂರ್ವರ ಸ್ವಾಮಿಗಳುಂ ಎಂದು ಉಲ್ಲೇಖಗೊಂಡಿರುವುದು ತಿಳಿದುಬರುತ್ತದೆ.

ವ್ಯಾಪಾರಿ ಸಂಘದ ಐದನೂರು ಜನ ಮುಖ್ಯಸ್ಥರುಗಳನ್ನೊಳಗೊಂಡ ಸಂಘವಾಗಿತ್ತು, ಈ ವ್ಯಾಪಾರಿ ವರ್ತಕರು ತಮ್ಮದೇ ಆದ ಸಂಘಗಳನ್ನು ಕಟ್ಟಿಕೊಂಡು ರಾಜ್ಯದ ಬೇರೆ-ಬೇರೆ ಕಡೆಗೆ ಹೋಗಿ ವ್ಯಾಪಾರ ಮಾಡುತ್ತಿದ್ದರು.

''ಸ್ವಸ್ತಿ ಸಮಸ್ತ ಭುವನವಿಖ್ಯಾತ ಪಂಚಸತ
ವೀರಶಾಸನ ಲಬ್ಧಾನೇಕ ಗುಣಗಣಾಳಂ
ಕ್ರಿತರಪ್ಪ ಶ್ರೀಮದಯ್ಯಾವೊಳೆಯಯಿ
ನೂರ್ವಸ್ವಾಮಿಗಳು ಮುಖ್ಯ ॥'' ಎಂಬ ಉಲ್ಲೇಖವಿದೆ.

ಸಂಘದಲ್ಲಿ ಐದನೂರು ಜನ ಪ್ರಮುಖರು ಇದ್ದರು. ಇವರನ್ನು ಅಯ್ಯಾವೊಳೆ ಐನೂರ್ವಸ್ವಾಮಿಗಳು ಎಂಬ ಉಲ್ಲೇಖ ಮುದನೂರು ಶಾಸನದಿಂದ ತಿಳಿದು ಬರುತ್ತದೆ. ಅಯ್ಯಾವೊಳೆ ಪುರವರೇಶ್ವರ, ಎರಡರಯಿನೊರ್ವ್ವರು, ಆಯಿನೂರ್ವ್ವರ ಅಯ್ಯಾರ್ವ್ವರ ಸ್ವಾಮಿಗಳುಂ ಎಂಬ ಉಲ್ಲೇಖ ಸಗರ, ಹಗರಟಗಿ, ಎಡೆಯಪುರದ ಶಾಸನದಿಂದ ತಿಳಿದು ಬರುತ್ತದೆ.

"ಸಮಸ್ತ ಭುವನ ವಿಖ್ಯಾತರ್
ಪಂಚಮಹಾಶಬ್ದ ಘೋಷಣರ್ ।
ಶಾಶನಲಬ್ದರ್ ಆಚಾರ ಕಲಿಗಳ್ । ಕಲಹ
ಸಂಪೂರ್ಣ್ನರ್ ಶೌಚವ್ರತದ ಅಣುವನನ್ನರ್ । ಪೊ
ಣರ್ಧೆಡೆ ನಂಜಿನನ್ನರ್ ಪರೆದಡೆ ಮಂಜಿನನ್ನರ್ । ಸ
ಮಸ್ತ ಭಲ್ಲುಂಕೆದಣ್ಡಹಸ್ತರ್ ದಿಶಾಗಜಂಗಳೆ ॥"

ಎಂಬ ಉಲ್ಲೇಖ ಕ್ರಿ.ಶ.೧೦೭೧ರ ಸಗರ ಶಾಸನದಿಂದ ತಿಳಿದುಬರುತ್ತದೆ. ಇವರು ತಮ್ಮದೇ ಆದ ಸಂಕೇತಗಳನ್ನು ಹೊಂದಿದ್ದರು. ಭಲ್ಲಂಕೆದಂಡ ಹಸ್ತರುಂ, ಭಲ್ಲುಂಕೆದಣ್ಡ ಹಸ್ತರ್, ಎಂಬುದಾಗಿತ್ತು.

"ಸ್ವಸ್ತಿ ಸಮಸ್ತ ಭುವನವಿಖ್ಯಾತ ಪಂಚಸತವೀರ
ಸಾಸನಲಬ್ಧಾನೇಕಗುಣಗಣಾಡಂಕ್ರುತ ಸತ್ಯ
ಶುಭಚಾರುಚರಿತ್ರನಯ ವಿನೆಯ ವಿಜ್ಞಾನವೀರ
ರಜಪದೀಧರ್ಮ್ಮ ಪ್ರತಿಪಾಳನ ವಿಸುದ್ಧ ಗುಡ್ಡಧ್ವಜ
ವಿರಾಜಿತಾನೂನ ಜಯಲಕ್ಷ್ಮೀ ನಿವಾಸಿಯೂ ವಕ್ಷಸ್ಥಳ
ಭುಜಬನಳಪರಾಕ್ರಮಾಂಧಾತ ಬಾಸುದೇವ ಖಂಡಳಿ
ಮೂಳ ಭದ್ರವಂಶೋದ್ಧವರುಂ ॥"

ಎಂಬ ಉಲ್ಲೇಖ ಕ್ರಿ.ಶ.೧೧೨೫ರ ಶಾಸನದಿಂದ ತಿಳಿದುಬರುತ್ತದೆ. ವೀರ ಬಳಂಜ ಧರ್ಮದವರಾದ ಇವರು ಬಣಜಯ್ನೆನೂರ್ವರು ಎಂಬುದು ಶೈವ ಧರ್ಮವನ್ನು ಸೂಚಿಸುತ್ತದೆ. ವೀರಬಣಂಜುಧರ್ಮ ಪ್ರತಿಪಾಳನರು, ಬಾಸುದೇವ, ಖಂಡಳಿ ಮೂಳ ಭದ್ರವಂಶೋದ್ಧವರುಂ ಎಂಬುದು ಕುಳಗೇರಿ ಶಾಸನದಿಂದ ತಿಳಿದು ಬರುತ್ತದೆ. ಇಲ್ಲಿನ ಬಾಸುದೇವ, ಮಲ್ಲದೇವ, ಖಂಡಳಿ ಮೂಳಭದ್ರ ವಂಶೋದ್ಧವರೆಂಬುದು, ವಂಶದ ಕುರುಹು ಆಗಿದ್ದರಿಂದ ಇವರು ಪೌರಾಣಿಕ ಪುರುಷ ಪರಾಕ್ರಮ ದೇವತೆಗಳೆಂದು ಬಿ.ಆರ್. ಹಿರೇಮಠರು ಗುರುತಿಸಿದ್ದಾರೆ. ಇವರು ಸ್ವತಂತ್ರರಾಗಿದ್ದು ತಮ್ಮದೇ ಆದ ಪ್ರಶಸ್ತಿಗಳನ್ನು ಹೊಂದಿದ್ದರು. ಗುಡ್ಡಧ್ವಜ ಇವರ ಧ್ವಜದ ಸಂಕೇತವಾಗಿತ್ತು. ಸಗರ ನಾಡಿನ ಕುಳಗೇರಿ, ಸಗರ, ಹಗರಟಗಿ, ಎಡೆಯಪುರಗಳ ಶಾಸನದಲ್ಲಿ ಧ್ವಜದ ಸಂಕೇತಗಳು ಉಲ್ಲೇಖಗೊಂಡಿವೆ. ಈ ಐನೂರ್ವರು ದಾನಕೊಟ್ಟ ವರ್ತಕರಾಗಿದ್ದರು. ಹಾಗಾಗಿ ಐನೂರ್ವರ್ ಎಂದೇ

ಶಾಸನಗಳು ಇವರನ್ನು ಕರೆದಿವೆ. ಅಯ್ಯಾವೊಳೆ ಐನೂರ್ವರು ವ್ಯಾಪಾರವನ್ನು ತಮ್ಮ ಹಿಡಿತದಲ್ಲಿಟ್ಟುಕೊಂಡು ಸಗರ ನಾಡನ್ನು ಅಭಿವೃದ್ಧಿಗೊಳಿಸಿದ್ದರು ಎಂಬುದು ಹಲವಾರು ಶಾಸನಗಳ ಅಧ್ಯಯನದಿಂದ ತಿಳಿದುಬರುತ್ತದೆ.

### ೫.೪. ಆರ್ಥಿಕ ಸೌಲಭ್ಯ :

ಹಣಕಾಸಿನ ವಹಿವಾಟಿನಲ್ಲಿ ವ್ಯವಹಾರ ಬಹಳ ಪ್ರಮುಖವಾಗಿದೆ. ವ್ಯವಹಾರ ಮಾಡುವಾಗ ಸಾಲ ಅನಿವಾರ್ಯವಾದುದರಿಂದ, ಇಲ್ಲದವರು ಉಳ್ಳವರನ್ನು ಆಶ್ರಯಿಸಬೇಕಾಗಿತ್ತು. ಸಾಲದ ಬಗ್ಗೆ ಸಗರ ನಾಡಿನ ಏವೂರು ಶಾಸನದಲ್ಲಿ "ಮಹಾಜನಂಗಳ ಕೆಯ್ಯಲು ಕೊಟ್ಟ ಗದ್ಯಾಣವಾರು ಈ ಪೊಂನ ವೃದ್ಧಿಯಿಂ ಅಗ್ನಿಷ್ಠೆಯಂ ಮಹಾಜನಂ ನಡೆಸುವರು"[೨೩] ದೇವರಿಗೆ ಬಿಟ್ಟ ಸುಂಕ ದತ್ತಿಯ ಹಣವನ್ನು ಸಾಲದ ರೂಪದಲ್ಲಿ ಕೊಡುತ್ತಿದ್ದರು. ಕೆಲ ಸಲ ಬಡ್ಡಿ ಬೆಳೆದಾಗ ಕೊಡಲು ಆಗದೆ ಇರುವಂತಹ ಸಂದರ್ಭದಲ್ಲಿ ಶಾಸನಗಳು ಎಚ್ಚರಿಕೆ ನೀಡಿವೆ. ಇಂತಹ ಉಲ್ಲೇಖ ಈ ನಾಡಿನ ಶಾಸನದಿಂದ ತಿಳಿದು ಬರುತ್ತದೆ.

"ಮುಕ್ಕದೆರು ದೇವಸತನಕೆಯುಮಂ
ಕೊ... ಸನ ಹಗೆಯಿರಯಬಾರದು
ಸಾಲವಂ ಕೊಟ್ಟಾತನಿ ಆಯ ಬಲಿದು
ಕರನು ಬಂದಿಕಾರನು ಯೆನಲಯೀಮರ್ಯ್ಯಾದೆ ||"

ಎಂಬುದು ಎಡೆಯಪುರದ ಶಾಸನದಿಂದ ತಿಳಿದುಬರುತ್ತದೆ.

### ನಾಣ್ಯಗಳು :

ನಾಣ್ಯ ಎನ್ನುವ ಪದ ಕನ್ನಡ ಮತ್ತು ಇತರ ಭಾಷೆಗಳಲ್ಲಿ ಆಡಳಿತದ ಮುದ್ರೆಯೊತ್ತಿ ತಯಾರಿಸಿದ ಚಿನ್ನ, ಬೆಳ್ಳಿ, ತಾಮ್ರ ಮುಂತಾದ ಲೋಹದ ಬಿಲ್ಲೆ ಎನ್ನುವ ಅರ್ಥದಲ್ಲಿ ಬಳಕೆಯಾಗಿರುವುದು ತಿಳಿದುಬರುತ್ತದೆ. ಕನ್ನಡದಲ್ಲಿ ನಾಣಾಯ, ನಾಣೆಯ, ನಾಣೆಯ, ನಾಣ್ಯ ಮುಂತಾದ ರೂಪಗಳಲ್ಲಿ ಕಂಡುಬರುತ್ತದೆ.

ನಾಣ್ಯ ಚಲಾವಣೆ ಪ್ರಾರಂಭವಾಗವುದಕ್ಕಿಂತ ಪೂರ್ವದಲ್ಲಿ ವಸ್ತು ವಿನಿಮಯ ಮಾಡಿಕೊಳ್ಳುವ ಪದ್ಧತಿ ಇತ್ತು. ನಾಣ್ಯ ಚಲಾವಣೆ ಬಂದ ನಂತರ ಆರ್ಥಿಕ

ಅಭಿವೃದ್ಧಿಯಾಯಿತು. ಆದರೆ ಇದರ ನಿರ್ದಿಷ್ಟ ಕಾಲಮಾನ ಗುರುತಿಸವುದು ನಾಣ್ಯ ಶಾಸ್ತ್ರಜ್ಞರಿಗೆ ಅಸಾಧ್ಯವಾಗಿದೆ. ನಾಣ್ಯಗಳನ್ನು ಟಂಕಿಸುತ್ತಿದ್ದ ಸ್ಥಳಗಳನ್ನು "ಕಮ್ಮಟಗಳೆಂದೂ ಅಚ್ಚಿನ ಟಂಕಸಾಲೆಗಳೆಂದೂ"೨೪ ಕರೆಯುತ್ತಿದ್ದರು. ಸಗರ ನಾಡಿನ ವ್ಯಾಪಾರ, ವ್ಯವಹಾರಗಳಲ್ಲಿ ನಾಣ್ಯಗಳು ಹೀಗೆ ಚಲಾವಣೆಯಲ್ಲಿದ್ದದು ಕಂಡುಬರುತ್ತದೆ.

ಗದ್ಯಾಣ, "XXದೇವರ ನಂದಾದೀವಿಗೆಗೆ ಗಾಣ ೧
ದೇವಮಾನ ೧ ಭಣ್ಡ ಸಹಿತ ಹೊಂಗೆ
ಕೊಟ್ಟಲ್ಲಿ ಮಾನ ೧ ಕೊಂಡಲ್ಲಿ ಮಾನ ೧ ॥"

ಎಂಬ ಉಲ್ಲೇಖ ಕ್ರಿ.ಶ. ೧೧೨೮ರ ಕಕ್ಕೇರಿ ಶಾಸನದಿಂದ ತಿಳಿದು ಬರುತ್ತದೆ. ದೇವಮಾನ, ಪಣ, ಹಾಗ, ಪೊಂಗೆ,

"XX ಗುಡಕ್ಕೆ ತೂಕದ ಭಂಣ್ಡ ಪ ೨ ಓಲೆಯ
ಯಳವಗೆ ವಿ ೧ ಹೊರೆಗರ ವೀಸ ॥"

ಎಂಬ ಉಲ್ಲೇಖ ಕುಳಗೇರಿ ಶಾಸನದಿಂದ ತಿಳಿದುಬರುತ್ತದೆ. ವೀಸ, ಕೋಗಿಣಿ, ಕಾಗಿಣಿ, ಹತ್ತಮೊಂಗು, ಹೊಂಗೆ ಬಳ್ಳ, ಸೊಂಟಿಗೆ ಹಾಗ, ಅರೆವೀಸ್, ಪಣಂ, ವೀಸಕಾಣಿ, ವೀಸಕೋವಿಯಂ, ಪಣಿಮಂ, ಮರಿಯ ಕಾಣಿ, ಅರೆಕಾಣಿ, ಮುಂತಾದ ನಾಣ್ಯಗಳು

"XX ಆರು ಗದ್ಯಾಣ ಪೊನ್ನ ಅರುವಣಮಂ ॥"

ಎಂಬ ಉಲ್ಲೇಖ ಶಿರವಾಳ, ಸಗರ, ಕನ್ನೆಳ್ಳಿ, ಏವೂರ, ಅಂಕಲಗಿ, ಯಡ್ರಾಮಿ, ಮುದನೂರು, ಕುಳಗೇರಿ, ಹುಣಸಗಿ, ಹಗರಟಗಿ ಶಾಸನಗಳಲ್ಲಿ ಬಳಕೆಯಾಗಿವೆ.

"XX ಭೋಗೇಶ್ವರ ದೇವರ್ಗ್ಗೆ ನಿವೇದ್ಯಕ್ಕೆ ನಾನಾದೇಸಿಗಳು
ನಡೆವದಕೆಯ ಹೇರಿಂಗವೆತ್ತು ಕತ್ತೆ ಕೋಣ ಸನ್ಥದೆಯರ
ವೀಸವಂ ಕೊಟ್ಟರು ನರುಗಿರಿಯ ಮಳವೆಗೆ ವೀಸಮಂ
ಕೊಟ್ಟರು ದಸರಿಯ ಮಳವಿಗೆ ವೀಸಮಂ ಕೊಟ್ಟರು
ಮಾಡುವರಂ ದೇವನ ಮಳವೆಗೆ ವೀಸಮಂ ಕೊಟ್ಟರು
ತಳದಲು ಕಟ್ಟಿ ಹೊರವಡುವ ಸೀರೆಯ ಮಳವೆಗೆ

ವೀಸಮಂ ಕೊಟ್ಟರು । ಓಲೆಯ ಮಳವೆಗೆ ವೀಸವಂ

ಕೊಟ್ಟರು ನೂಲ ಮಳವೆಗೆ ವೀಸಮಂ ಕೊಟ್ಟರು

ಕಟ್ಟಿ ಹೊರವಡುವ ಹಡವಿನ ಮಳವಿಗೆ ವೀಸಮಂ

ಕೊಟ್ಟರು ಅರಸಿನ ಹೇರಿಂಗೆ ಅರವೀಸಮಂ ಕೊಟ್ಟರು

ಮೆಳಸಿನ ಹೇರಿಂಗೆ ಅರೆವೀಸಮಂ ಕೊಟ್ಟರು

ಸಣಬಿನ ಮಳವೆಗೆ ವೀಸಮಂ ಕೊಟ್ಟರು ॥"

ಎಂಬ ಉಲ್ಲೇಖ ಕ್ರಿ.ಶ.೧೩ನೇ ಶತಮಾನದ ಕುಳಗೇರಿ ಶಾಸನದಿಂದ ತಿಳಿದು ಬರುತ್ತದೆ. ಆಗಿನ ಸಂದರ್ಭದಲ್ಲಿ ಸಗರ ನಾಡಿನಾದ್ಯಾಂತ ಹೆಚ್ಚು ಬಳಕೆಯಲ್ಲಿರುವ ನಾಣ್ಯ ಗದ್ಯಾಣ. ಇದು ಚಿನ್ನದ ನಾಣ್ಯವಾಗಿತ್ತು. ಶ್ರೇಷ್ಠವಾದ ಮತ್ತು ಪ್ರಾಮುಖ್ಯತೆ ಪಡೆದ ನಾಣ್ಯವಾಗಿತ್ತು. ರಾಷ್ಟ್ರಕೂಟ ಮೂರನೇಯ ಕೃಷ್ಣನಿಂದ ಹಿಡಿದು, ಯಾದವ ಸಿಂಘಣನ ಕಾಲದವರೆಗೂ ನಾಣ್ಯಗಳು ಚಲಾವಣೆಯಲ್ಲಿದ್ದವು. ಗದ್ಯಾಣ ಅಥವಾ ಪೊನ್ ಎಂದು ಇದಕ್ಕೆ ಕರೆಯಲಾಗಿದೆ. ಇದರ ತೂಕ ಸುಮಾರು ತೊಂಬತ್ತಾರು ಗ್ರಾಂ. ಎಂದು ಡಾ. ಅಲ್ಟೇಕರ್ ಅವರ ಅಭಿಪ್ರಾಯವಾದರೆ, ಸುಮಾರು ಅರವತ್ತಮೂರು ಗ್ರಾಮ ಎಂದು ಡಾ. ಅಪ್ಪಾದೊರೈ ಅವರು ಅಭಿಪ್ರಾಯ ಪಟ್ಟಿದ್ದಾರೆ. ಇದಕ್ಕೆ ಪೂರಕವಾಗಿ ಈ ನಾಡಿನಲ್ಲಿ ದೊರೆತ ಇತರ ನಾಣ್ಯಗಳೆಂದರೆ ತೀಲವ ಗದ್ಯಾಣ, ಲೊಕ್ಕಿಯಹಣ, ಪಾಗ, ಹಾಗ, ಕಾಣಿ, ಮರೆಯಕಾಣಿ, ಅಡ್ಡ, ಬೇಳೆಗಳ ಉಲ್ಲೇಖ ಕಂಡು ಬರುತ್ತದೆ. ವ್ಯವಹಾರ ಗಣಿತದಲ್ಲಿ ಕಂಡುಬರುವ ಕೋಷ್ಟಕ ಈ ರೀತಿ ಇದೆ.

"೪ ಕಾಣಿ – ೧ ವೀಸ

೫ ವೀಸ–೧ ಹಾಗ

೪ ಹಾಗ –೧ ಪಣ

೧೦ ಪಣ–೧ ಗದ್ಯಾಣ"[೨೫]

ನಾಣ್ಯಗಳ ಬಗ್ಗೆ ಈ ರೀತಿ ತಿಳಿಯಬಹುದು. ಇನ್ನು ಮುಂದುವರೆದಾಗ, ರಾಜಾದಿತ್ಯನ ಲೀಲಾವತಿ ಗಣಿತದಲ್ಲಿ ಈ ರೀತಿ ಇದೆ.

"೧ ವರಹ–೨ ಹೊನ್ನು

೧ ಹೊನ್ನು–೫ ಹಣ

೧ ಹಣ –೨ ಅಡ್ಡ

೨ ಅಡ್ಡ- ೧ ಹಾಗ

೧ ಹಾಗ –೨ ಬೇಳೆ

೧ ಬೇಳೆ –೨ ವೀಸ

೧ ವೀಸ –೨ ಅರೆವೀಸ

೧ ಅರೆವೀಸ- ೨ ಕಾಣಿ

೧ ಕಾಣಿ – ೪ ಗಿದ್ದಾಣ"[೨೬]

ಗದ್ಯಾಣ ಎರಡು ಹೊನ್ನುಗಳಿಗೆ ಸಮಾನವಾದರೆ, ಶಾಸನದಲ್ಲಿ ಉಲ್ಲೇಖಗೊಂಡ ಪೊನ್ ಇದು ಅರ್ಧ ಗದ್ಯಾಣಕ್ಕೆ ಸಮನಾಗಿರಬೇಕು. ನಿಷ್ಕಾ ಎಂಬುದು ಚಿನ್ನದ ನಾಣ್ಯ. ಮಂಗರಾಜನ ನಿಘಂಟುವಿನ ಪ್ರಕಾರ "ಹತ್ತು ಪಣಗಳ ತೂಕಕ್ಕೆ ಒಂದು ನಿಷ್ಕಾ ಸಮಾನ"[೨೭] ಗದ್ಯಾಣ ಎಂಬ ನಾಣ್ಯಕ್ಕೆ ನಿಷ್ಕಾ ಮತ್ತು ಪೊನ್ ಎಂಬ ಹೆಸರುಗಳ ಉಲ್ಲೇಖವಿದೆ. ನಾಣ್ಯಗಳಲ್ಲಿ ವೀಸವೇ ಅತ್ಯಂತ ಕನಿಷ್ಠವಾದದ್ದು.

## ತೂಕ ಮತ್ತು ಅಳತೆಗಳು :

ಪ್ರಾಚೀನ ಕರ್ನಾಟಕದಲ್ಲಿ ಎರಡು ರೀತಿಯಾದ ಹೊಲಗಳನ್ನು ಅಳೆಯುತ್ತಿದ್ದರು, ಒಂದು ಬೀಜದಲ್ಲಿ ಬಿತ್ತಬಹುದಾದ ಬೀಜದ ಪ್ರಮಾಣದ ಮೇಲೆ. ಇನ್ನೊಂದು ಅಳತೆಗೋಲುಗಳಿಂದ ಅಳೆಯುವುದು. ಸಗರ ನಾಡಿನ ಶಾಸನಗಳಲ್ಲಿ ಅಳತೆಗೋಲಗಳ ಉಲ್ಲೇಖ ಹಲವಾರು ಶಾಸನದಿಂದ ತಿಳಿದು ಬರುತ್ತದೆ. ಇಪ್ಪತ್ತೊಂದು ಗೇಣಕೋಲು, ಅಯ್ವತ್ತನಾಲ್ಗೇಣ ಒರಂಟನಕೋಲ, ಹಿರಿಯ ಕೋಲಗಳಿಂದ ಭೂಮಿಯನ್ನು ಅಳತೆ ಮಾಡುತ್ತಿದ್ದರು ಎಂಬುದು ಕೆಲ್ಲೂರು, ಯಾತನೂರು, ಕೊಂಡಗುಳಿ ಶಾಸನದಿಂದ ತಿಳಿದು ಬರುತ್ತದೆ. ಆಯಾ ಪ್ರದೇಶದ ರಾಜರೇ ಅಳತೆಗೋಲುಗಳನ್ನು ನಿರ್ಧರಿಸುತ್ತಿದ್ದರು. ವ್ಯವಹಾರ ಗಣಿತ ಮತ್ತು ಕ್ಷೇತ್ರ ಗಣಿತಗಳ ಕರ್ತೃವಾದ ರಾಜಾದಿತ್ಯನು ಹೊಲಗಳನ್ನು ಅಳೆಯಲು ಗಳೆಗಳನ್ನು ಬಳಸಬೇಕೆಂದು ಹೇಳಿದ್ದಾನೆ. ಒಂದೊಂದು ಊರಿಗೆ ಪ್ರತ್ಯೇಕವಾದ ಗಳೆಗಳು ಕಂಡು ಬರುತ್ತವೆ.

"XXX ಈಸಪೇಶ್ವರದೇವರ ಕೆಯಿಂ ಪಡುವಲು

ಮೂವತ್ತಯ್ದುಗೇಣ ದಾನವಿನೋಧನ ಘಳೆಯಲು

ಬಿಟ್ಟ ಮತ್ತರು ಪಂನೆರಡು ॥"

ಎಂಬ ಉಲ್ಲೇಖ ಕ್ರಿ.ಶ. ೧೧೦೫ರ ಏವೂರು ಶಾಸನದಿಂದ ತಿಳಿದುಬರುತ್ತದೆ. ಮೂವತ್ತಯ್ದುಗೇಣ ದಾನವಿನೊದನ ಘಳೆ, ನಾಲ್ವತ್ತೇರಡು ಗೇಣ ಘಳೆ, ಇಪ್ಪತ್ತೆಂಟು ಸಿಂಗನ ಗರುಡನ ಘಳೆ, ಅಯ್ವತ್ತುಗೇಣ ಅಣ್ಣನಂಕಕಾರಣ ಘಳೆ, ನಾಲ್ವತ್ತಯ್ದು ಗೇಣಘಳೆ, ಮಾಗಿಣಿಗೆರೆಯ ಕೋಲು ಮುಂತಾದವುಗಳ ಉಲ್ಲೇಖ ಏವೂರ, ರಾಜನಕೋಳೂರು, ಅಣಬಿ, ಸಂಗಮ, ವಡಗೇರಿ, ಕುಳಗೇರಿ ಮುಂತಾದ ಶಾಸನಗಳಿಂದ ತಿಳಿದು ಬರುತ್ತದೆ. ಕೆಲ ಅಳತೆಗೋಲುಗಳು ಪ್ರತ್ಯೇಕವಾಗಿದ್ದವು. ದೇವಾಲಯದ ಹೆಸರುಗಳ ಮೇಲೂ ಅಳತೆಗಳಿದ್ದವು. ರಾಮೇಶ್ವರ ತೀರ್ಥದ ಗಡಿಂಬ, ಬೋನ್ತೆಶ್ವರ ಗಡಿಂಬ,

> "XX ಯಿಸಪೇಸ್ವರದೇವರ ಕೆಯ್ಯಿಂ
> ಮೂಡಲು ಬೆಳ್ಳುಂಬಟ್ಟೆಯ ಸೀಮೆಯಿಂ
> ತೆಂಕಲು ಸಿವಪುರದ ದಾರಿಯಿಂ ಪಡುವಲು
> ಹಳ್ಳದಿಂ ಬಡಗಲು ಯಿಂತೆರಡು ಸ್ಥಳದಲು
> ಏಳರಾವೆಯ ತೀರ್ತ್ಥದ ಗಡಿಂಬದ ಒರಂಟನ
> ಮಲ್ಲನ ಘಳೆಯಲು ಬಿಟ್ಟ ಮತ್ತರು ಹತ್ತು ॥"

ಎಂಬ ಉಲ್ಲೇಖ ಕ್ರಿ.ಶ.೧೧೭೯ರ ಏವೂರು ಶಾಸನದಿಂದ ತಿಳಿದುಬರುತ್ತದೆ. ಏಳರಾವೆಯ ತೀರ್ಥದ ಗಡಿಂಬ ಎಂಬ ಉಲ್ಲೇಖ ಶಿರವಾಳ, ಏವೂರ ಶಾಸನದಿಂದ ತಿಳಿದು ಬರುತ್ತದೆ. ಅಳತೆಗಳಿಂದ ಭೂಮಿಯನ್ನು ದಾನವಾಗಿ ಕೊಟ್ಟಿದ್ದು ಕಂಡು ಬರುತ್ತದೆ. ಕೆಲ ಕೋಲುಗಳು ಭೂ ತೆರಿಗೆಯ ಬಗ್ಗೆ ತಿಳಿಸುತ್ತವೆ. ಪಿರಿಯ ಕೋಲ ಹಾಗೂ ಕರಭೂಮಿಗೆ ಕೊಡುವ ಹಿರಿಯ ಗಡಿಂಬದ ಕೋಲ ಈ ರೀತಿಯಾಗಿ ಊರಿಂದ ಊರಿಗೆ ವಿವಿಧ ರೀತಿಯ ಅಳತೆಗೋಲುಗಳ ಉಲ್ಲೇಖ ಕಂಡು ಬರುತ್ತವೆ.

> "ಏಳಗೆಯ ಸೀಮೆಯಿಂ ಮೂಡ ಮೂಲಿಗ
> ದಣ್ಡನಾಯಕ ವಿಯಪಯ್ಯನ ಪೊಲದಿಂತೆಂಕ
> ಮಾಣಿಕೇಶ್ವರದ ಕೋಲಲು ಬಿಟ್ಟ ಮತ್ತರು
> ೩೦೦ ಹಳ್ಳದಿಂ ಪಡುವ ತೋಟ ಮತ್ತರು ೧ ॥"

ಎಂಬ ಉಲ್ಲೇಖ ಕ್ರಿ.ಶ.೧೦೮೮ರ ಇಜೇರಿ ಶಾಸನದಿಂದ ತಿಳಿದುಬರುತ್ತದೆ.

ಮಾಣೀಕೇಶ್ವರದ ಕೋಲು ಸಗರ ನಾಡಿನ ತುಂಬ ಪ್ರಸಿದ್ಧ ಪಡೆದ ಅಳತೆಗೋಲು. ಇದು ಕೊಂಡಗುಳಿ, ಕುಳಗೇರಿ, ಯಡ್ರಾಮಿ, ಮುದನೂರ ಮುಂತಾದ ಶಾಸನಗಳಲ್ಲಿ ಈ ಅಳತೆ ಗೋಲಿನ ಉಲ್ಲೇಖ ಕಂಡು ಬರುತ್ತದೆ.

ಈ ಅಳತೆ ಕೋಲುಗಳ ಸಹಾಯದಿಂದ ಭೂಮಿಯನ್ನು ಕಮ್ಮ ಮತ್ತು ಮತ್ತುರುಗಳಿಂದ ಅಳೆಯುತ್ತಿದ್ದರು. ಇಂದು ಎಕರೆ–ಗುಂಟೆಗಳಿರುವಂತೆ, ಪ್ರಾಚೀನ ಕಾಲದಲ್ಲಿ ಕಮ್ಮಗಳಿದ್ದವು. ಕಮ್ಮ ಎಂದರೆ ಕಂಭ ಎಂದರ್ಥ. ಅಂದರೆ ಉದ್ದವಾದ ಸಾಧನದಿಂದ ಭೂಮಿ ಅಳತೆ ಮಾಡುವುದು. ಕಮ್ಮ ಕಿರಿಯ ಅಳತೆಯ ಪ್ರಮಾಣವಾಗಿದ್ದರೆ, ಮತ್ತರು ಹಿರಿಯ ಪ್ರಮಾಣದ ಅಳತೆಯಾಗಿತ್ತು. ಒಂದು ಮತ್ತರಿಗೆ ೯೦೦ ಕಂಬಗಳಾದರೆ, ಮತ್ತೊಂದು ಶಾಸನದ ಪ್ರಕಾರ ೨೦೦ ಕಂಬಗಳು. ಡಿ.ಸಿ. ಸರಕಾರ ಅವರು ಮತ್ತರಿಗೆ ೧೦೦ ಕಂಬಗಳೆಂದು ತಿಳಿಸಿದ್ದಾರೆ. ಮತ್ತರವನ್ನು ಇಂದಿನ ಎಕರೆಗೆ ಹೋಲಿಸಿದ್ದಾರೆ,

"XXಮಲ್ಲಿಕಾರ್ಜ್ಜುನ ದೇವರ ಕೆಯ

ಪಡುವ ನಾಲ್ವತ್ತು ಗೇಣ ಕೋಲಮತ್ತರ ॥"

ನಾಲ್ವತ್ತುಗೇಣ ಕೋಲು, ಅಯ್ಯತ್ತನಾಲ್ಗೇಣ ಕೋಲು, ಎಂಬ ಅಳತೆಯ ಉಲ್ಲೇಖ ತುಮಕೂರ, ಯಾತನೂರು ಶಾಸನಗಳಲ್ಲಿ ಕಂಡುಬರುತ್ತದೆ. ಇವುಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ ಇಷ್ಟೊಂದು ಭೂಮಿ ದಾನವಾಗಿ ಬಿಟ್ಟಿದ್ದಾರೆ ಎಂದರೆ ಆಶ್ಚರ್ಯವೆನಿಸುತ್ತದೆ. ಹಾಗೂ ಅನುಮಾನಕ್ಕೆ ಎಡೆ ಮಾಡಿ ಕೊಡುತ್ತದೆ.

'ನಿವರ್ತನ' ಎಂಬುದು ಇನ್ನೊಂದು ಭೂಮಿಯ ಅಳತೆಯ ಪ್ರಮಾಣವಾಗಿದೆ. ಇದು ಸಂಸ್ಕೃತ ಶಾಸನಗಳಲ್ಲಿ ಹೆಚ್ಚಾಗಿ ಕಂಡು ಬರುತ್ತದೆ. ಒಂದು ನಿಶ್ಚಿತವಾದ ಸ್ಥಳದಿಂದ ಹೊರಟ ಒಬ್ಬ ವ್ಯಕ್ತಿಗೆ ಒಂದು ನಿಶ್ಚಿತ ಸಮಯದ ಕಾಲಮಾನ ತಿಳಿಸಲಾಗುತ್ತದೆ. ಅಷ್ಟು ಅವಧಿಯಲ್ಲಿ ಇನ್ನೊಂದು ಸ್ಥಳಕ್ಕೆ ಹೋಗಿ ಮತ್ತೆ ಮರಳಿ ಬಂದು ಮೊದಲಿನ ಸ್ಥಾನವನ್ನು ತಲುಪುವ ಭೂಮಿಯ ಪ್ರಮಾಣ ಎಂಬುದು ತಿಳಿದು ಬರುತ್ತದೆ. ಅಂದರೆ ಅಷ್ಟು ಪ್ರಮಾಣದ ಭೂಮಿ ಅಳತೆ ಮಾಡಿಕೊಡುವುದಕ್ಕೆ ನಿವರ್ತನ ಎಂದು ಕರೆಯುತ್ತಾರೆ. ಇದು ಸಂಸ್ಕೃತ ಶಾಸನಗಳಲ್ಲಿ ಹೆಚ್ಚು ಕಂಡು ಬಂದರು, ಕನ್ನಡ ಶಾಸನಗಳಲ್ಲಿ ಮತ್ತರಿಗೆ ಸಮಾನವಾದದ್ದೆಂದು ಹೇಳಬಹುದು.

ಕರ್ನಾಟಕದ ಇನ್ನು ಕೆಲ ಹಳ್ಳಿಗಳಲ್ಲಿ ಕೊಳಗ ಎಂಬ ಅಳತೆ ಕಂಡುಬರುತ್ತದೆ.

"XXಬೊಂಮಿಸೆಟ್ಟಿ ಸಂಕರಸಗೆ ಹೆಗ್ಗಡೆ
ಕೆಯಿಮತ್ತರು ೧೮ ಕೊಳಗದ ಕೆಯಿ ಮತ್ತರು
೮೭ ಕಂ XXಯರುಮನಾನಿವೇಶನ ವೆಸನ
ಎರಡು ಗಾಣ ೧ ಸಲಗೆಯೊಳಿ ಕೊಳಗದೊ ಬ
ಗೆವಣ ಹೆಗ್ಗಡೆ ಕೊಳಗ ಬಮ್ಮಿಸೆಟ್ಟಿಯಲ್ಲಿಂ ಮ
ಗೆಯ ಹೆಗ್ಗಡೆರ ಕೊಳಗ ತತಬದೊಳಗೆ ॥"

ಎಂಬ ಉಲ್ಲೇಖ ಸು.೧೨ನೇ ಶತಮಾನದ ಶಾಸನದಿಂದ ತಿಳಿದುಬರುತ್ತದೆ. ಇದು ನಾಲ್ಕು ಬಳ್ಳಗಳ ಪ್ರಮಾಣಕ್ಕೆ ಸಮವಾಗಿರುತ್ತದೆ. ಬೇರೆ – ಬೇರೆ ಗ್ರಾಮಗಳಿಗೆ ಬೇರೆ–ಬೇರೆ ಹೆಸರುಗಳು ಕಂಡು ಬರುತ್ತವೆ. ಕೊಳಗದಾಯ ಎಂಬ ಉಲ್ಲೇಖ ಕುಳಗೇರಿ ಶಾಸನದಿಂದ ತಿಳಿದುಬರುತ್ತದೆ. ರೈತರು ತಮ್ಮ ಭೂಮಿಯಲ್ಲಿ ಬೆಳೆದ ದವಸ–ದಾನ್ಯಗಳನ್ನು ಕೊಳಗದ ರೂಪದಲ್ಲಿ ದೇವಾಲಯದ ಅರ್ಚಕನಿಗೆ ಕೊಡಬೇಕೆಂದು ಊರಿನ ಗೌಡ ವಿಧಿಸಿದ. ಇದನ್ನು ಎಲ್ಲರೂ ತಪ್ಪದೇ ಪರಿ ಪಾಲನೆ ಮಾಡಬೇಕಿತ್ತು. ಇಂತಹ ಅಳತೆಗಳ ಉಲ್ಲೇಖ ಈ ನಾಡಿನ ಶಾಸನದಿಂದ ತಿಳಿದು ಬರುತ್ತದೆ.

"XXಊರೊಡೆಯ ಕೇತರಸನ ಸಿಂಗ
ಮಾನ್ಯಕ್ಕೆ ಊರಿಂ ಪಡುವವೊಲದೊಳರಕೆರೆಯ
ಸೀಮೆಯಿಂಲವಾದ ಕೈ ನೀದಲಿಗೆಯ
ನಾಲ್ವತ್ತೊಂದು ಗೇಣ ಬಾರ್ಚೆವಿಡಿಳಳೆದು
ಕೊಟ್ಟ ಕೆಯ್ಮತ್ತರು ೧೦೦ ಗಜ ॥"

ಎಂಬ ಉಲ್ಲೇಖ ಕ್ರಿ.ಶ.೧೦೫೫ರ ಕಚಕನೂರ ಶಾಸನದಿಂದ ತಿಳಿದುಬರುತ್ತದೆ. ಮನೆ ಮತ್ತು ಇತರ ನಿವೇಶನಗಳ ಅಳತೆಯನ್ನು ಗೇಣ ಮತ್ತು ಕೆಯ್ಯದಿಂದ ಅಳೆಯುತ್ತಿದ್ದರು ಎಂಬುದನ್ನು

ಯಡ್ರಾಮಿ ಮತ್ತು ಕಚಕನೂರು ಶಾಸನಗಳಿಂದ ತಿಳಿದು ಬರುತ್ತದೆ. ಗಣಿತ ತಜ್ಞ ರಾಜಾದಿತ್ಯನು ಅಳತೆಗೋಲುಗಳ ಬಗ್ಗೆ ಈ ರೀತಿ ತಿಳಿಸಿದ್ದಾನೆ.

"೧೨ ಬೆರಳು — ೧ ಗೇಣು

೨ ಗೇಣು — ೧ ಮೊಳ

೨ ಮೊಳ — ೧ ಹಸ್ತ

೪ ಹಸ್ತ — ೧ ದಂಡ

೨೦೦೦ ದಂಡ — ೧ ಕ್ರೋಶ

೪೦೦೦ ಕ್ರೋಶ — ೧ ಯೋಜನ

ಬಸವಣ್ಣನವರ ವಚನವೊಂದರಲ್ಲಿ ಉಕ್ತವಾದ ಉದ್ದಳತೆಯ ಉಲ್ಲೇಖ ಈ ರೀತಿ ಇದೆ.

೧೨ ಅಂಗುಲ — ೧ ಗೇಣ

೨ ಗೇಣ — ೧ ಮೊಳ

೨ ಮೊಳ — ೧ ಹಸ್ತ

೨ ಹಸ್ತ — ೧ ಮಾರು

೨ ಮಾರು — ೧ ಜಂಪೆ

೭೭೦ ಜಂಪೆ — ೧ ಪದನಾಮ

೨೮೦೦ ಪದಚ್ಛಯ — ೧ ಕೂಗಳತೆ

೪ ಕೂಗಳತೆ — ೧ ಹರದಾರಿ

೪ ಹರದಾರಿ — ೧ ಯೋಜನ"[೨೮]

ಈ ರೀತಿ ವಿವಿಧ ಅಳತೆಗೋಲುಗಳ ಉಲ್ಲೇಖ ತಿಳಿದು ಬರುತ್ತದೆ.

ಅಳತೆ ಮತ್ತು ತೂಕಗಳಲ್ಲಿ ದಿನ ನಿತ್ಯದ ಬಳಕೆಯ ವಸ್ತುಗಳಾದ ಹತ್ತಿ, ಶುಂಠಿ, ಅರಶಿನ ಇವುಗಳನ್ನು ತೂಗಿಕೊಟ್ಟರೆ, ಮೆಣಸು, ಬೆಲ್ಲವನ್ನು ಮಳವೆ ರೂಪದಲ್ಲಿ ಕೊಡುತ್ತಿದ್ದರು. ಮಳವೆ ಎಂದರೆ ಇಂದಿನ ಕಾಲದಲ್ಲಿದ್ದ ಮಣ ಎಂದರ್ಥ.

"ಶ್ರೀ ರಾಮೇಶ್ವರ ದೇವರಂಗಭೋಗ ನಿವೇದ್ಯಕ್ಕೆ
ಬಿಟ್ಟ ಧರ್ಮ್ಮಮೆಂತೆಂದಡೆ ಹೊ(ವ್ರೊ)ಗೆ ಬಂದು
ಮಾರಿದ ಭತ್ತದಲು ಹೊಂಗೆ ಬಳ್ಳವೊಂದು
ನುಂಣ್ಭತ ಮಾನವೆರಡು ಸಟ್ಟುಗ ಜೋಳ ॥"

ಎಂಬ ಉಲ್ಲೇಖ ಕ್ರಿ.ಶ. ೧೦೯೯ ರ ಮುದನೂರು ಶಾಸನದಿಂದ ತಿಳಿದುಬರುತ್ತದೆ. ಭತ್ತ, ಜೀರಿಗೆ, ಅಜವಾನ ಇವುಗಳನ್ನು ಬಳ್ಳ, ಸಟ್ಟಗ,

"XXಬಬ್ಬುಲಿಗಟ್ಟೆಯ ಮೂಡಲ ಕೆಯಿಂ ಮೂಡಣ
ಬೆಳೆಯ ಸೂಳು ಸಹಿತ ಬಿಟ್ಟಗದ್ದೆ ಕಮ್ಮಂ ೪೦೦
ದೇವರ ನಂದಾದೀವಿಗೆಗೆ ಬಿಟ್ಟ ಗಾಣ ೧ ನಖರಂಗಳು
ಅಂಗಡಿಯಲು ಬಿಟ್ಟ ಸೊಂಟಿಗೆ ಜೋಳಮಾನ ೧ ॥"

ಎಂಬ ಉಲ್ಲೇಖ ಕ್ರಿ.ಶ.೧೧೨೯ರ ಮುದನೂರು ಶಾಸನದಿಂದ ತಿಳಿದುಬರುತ್ತದೆ. ಸೊಂಟಿಗೆಯಿಂದ ಅಳೆದು ದಾನ್ಯಗಳನ್ನು ಕೊಡುತ್ತಿದ್ದರು. ಬೇರೆ ಅಳತೆ ಮತ್ತು ತೂಕಗಳನ್ನು ಗಣಿತ ತಜ್ಞ ರಾಜಾದಿತ್ಯನ ವ್ಯವಹಾರ ಗಣಿತದಲ್ಲಿ ಈ ರೀತಿ ಉಲ್ಲೇಖವಿದೆ.

"೧ ಖಂಡುಗ – ೪ ಪಂಚಕ

೧ ಪಂಚಕ – ೫ ಕೊಳಗ

೧ ಕೊಳಗ – ೪ ಬಳ್ಳ

೧ ಬಳ್ಳ – ೪ ಮಾನ

೧ ಮಾನ – ೪ ಸೊಲ್ಲಿಗೆ

೧ ಸೊಲ್ಲಿಗೆ – ೪ ಗಿದ್ದಿಗೆ

೧ ಬಾರ – ೨೦ ತೊಲ

೧ ತೊಲ – ೫ ಬೀಸಗೆ

೧ ಬೀಸಗೆ – ೨೦ ಪಲ

೧ ಪಲ – ೪ ಕರ್ಷ

೧ ಕರ್ಷ – ೪ ಸುವರ್ಣ"[೨೯]

ದ್ರವ್ಯ ಪದಾರ್ಥಗಳಾದ ಎಣ್ಣೆ, ತುಪ್ಪ ಇವುಗಳನ್ನು ಸೊಂಟಿಗೆ ಎಣ್ಣೆ, ಸೊಳಸ ಎಣ್ಣೆ ಎಂಬ ಅಳತೆಗಳಾಗಿದ್ದವು. ತೊಲೆ, ಪಲ, ಖಂಡುಗ ಈ ಅಳತೆಗಳ ಬಗ್ಗೆ ಸ್ಪಷ್ಟವಾಗಿ ಶಾಸನದಿಂದ ತಿಳಿದು ಬರುವುದಿಲ್ಲ. ಪಳಿಗೆ ಇದು ಬಹುಶಃ ನಳಿಗೆ ಮಾಪನಕ್ಕಿಂತ ಸ್ವಲ್ಪ ದೊಡ್ಡ ಗಾತ್ರದ್ದಾಗಿರಬಹುದು. ಇಂತಹ ಅನೇಕ ಅಳತೆ ಮತ್ತು ತೂಕಗಳ ಉಲ್ಲೇಖ ಈ ನಾಡಿನಾದ್ಯಂತ ಹಲವಾರು ಶಾಸನಗಳಲ್ಲಿ ಉಲ್ಲೇಖಗೊಂಡಿರುವುದು ತಿಳಿದುಬರುತ್ತದೆ.

**೫.೫. ತೆರಿಗೆ–ಸುಂಕ :**

ಒಂದು ನಾಡಿನ ಭದ್ರ ಅಡಿಪಾಯಕ್ಕೆ ಅರ್ಥವೇ ಮೂಲ ಕಾರಣವಾಗಿದ್ದರಿಂದ ಭೂ ಕಂದಾಯವೇ ರಾಜ್ಯದ ಆದಾಯವಾಗಿತ್ತು. ಇದರಿಂದ ಆದಾಯ ಹೆಚ್ಚುತ್ತಿತ್ತು. ಕೃಷಿ ಪ್ರಧಾನ ನಾಡಾಗಿದ್ದರಿಂದ ರೈತರು ತೆರಿಗೆಯನ್ನು ಕಟ್ಟಬೇಕಿತ್ತು. ಭೂಮಿಯ ಫಲವತ್ತತ್ತೆಯ ಮೇಲೆ ತೆರಿಗೆ ವಿಧಿಸಲಾಗುತ್ತಿತ್ತು ಎಂಬುದು ಶಾಸನಗಳಿಂದ ತಿಳಿದುಬರುತ್ತದೆ.

**ಆಸ್ತಿ (ಭೂಮಿ, ನಿವೇಶನ, ದನಕರುಗಳು) ತೆರಿಗೆ :**

ಕೃಷಿಯನ್ನು ಹೊಂದಿರುವ ನಾಡಿನಲ್ಲಿ ತೆರಿಗೆ ಅನಿವಾರ್ಯವಾಗಿತ್ತು. ಇದು ವಂಶ ಪರಂಪರ್ಯವು ಆಗಿತ್ತು. ಅಂತೆಯೇ ಈ ನಾಡಿನಲ್ಲಿ ತೆರಿಗೆಗಳ ಉಲ್ಲೇಖಗಳು ಈ ರೀತಿಯಾಗಿ ಕಂಡು ಬರುತ್ತವೆ. ಸಿದ್ಧಾಯ – ಇದು ಮನೆಯ ಮೇಲೆ ಹಾಕುವ ತೆರಿಗೆ ಆಗಿತ್ತು.

> “XXಹಾಳಕಟ್ಟೆಯ ಗದ್ದೆಯ ಉತ್ತಮದರ್ಜೀವಿತ
> ಬಳಿ ಸಹಿತವೊಂದು ಅದರ (ನೀ) ರ ಸೂಳು ಸಹಿತಂ
> ಆ ಗರ್ದ್ದೆಗೆ ಸಿದ್ಧಾಯದೊಳಗೆ ಅವಲಂಬಣವಾಗಿ
> ಇಳಿಯುವ ಗದ್ಯಾಣ ಹದಿನೈಯ್ದು ॥”

ಎಂಬ ಉಲ್ಲೇಖ ಕ್ರಿ.ಶ.೧೧೪೨ರ ಮುದನೂರು ಶಾಸನದಿಂದ ತಿಳಿದುಬರುತ್ತದೆ. ಜೊತೆಗೆ ಭೂಕಂದಾಯವು ಆಗಿತ್ತು. ‘ಸಿದ್ಧಾಯದೊಳಗಣ ಮೊಳಪಾರಿಖಾಯ’ ಎಂಬ ಉಲ್ಲೇಖ ಕಂಡು ಬರುತ್ತದೆ. ‘ಪಾರಿಖಾಯ’ವು ಒಂದು ಭೂ ತೆರೆಗೆಯಾಗಿತ್ತು. ಮುದನೂರು ಶಾಸನದಲ್ಲಿ ಈ ತೆರಿಗೆ ಉಲ್ಲೇಖ ಕಂಡು ಬರುತ್ತದೆ.

ಶಾಸನಗಳಲ್ಲಿ ಕಂಡುಬರುವ ಕರಭೂಮಿ, ಅರುವಣ ಎಂಬ ತೆರಿಗೆಯನ್ನು ದತ್ತಿಯಾಗಿ ಬಿಟ್ಟುಕೊಟ್ಟ ಗದ್ದೆಗೋ, ತೋಟಕ್ಕೋ ಇಷ್ಟು ಅರುವಣವನ್ನು ಕೊಡಬೇಕೆಂದು ನಿಬಂಧಿಸುತ್ತಿದ್ದರು. ಡಾ.ಬಾರ್ನೆಟ್ ಅವರು ಅರುವಣವು ಮಾನ್ಯ ಭೂಮಿಗಳ ಮೇಲಿನ ತೆರಿಗೆ ಎಂದು ಅರ್ಥೈಸುತ್ತಾರೆ.

"XXXಬಿಬೇಸ್ಟರದ ಏಳಗೆಯ ಬಳಿಯಂ
ಮೂಡಲ್ವಯತ್ತು ಮತ್ತ ೫೦ ಕೆಯಂ ಕೇರಿಗೆ
ಆರು ಗದ್ಯಾಣ ಪೊನ್ನ ಅರುವಣಮಂ ‖"

ಎಂಬ ಉಲ್ಲೇಖ ಕುಳಗೇರಿ ಶಾಸನದಲ್ಲಿ ಕಂಡುಬಂದರೆ,

"XXಎಳೆಮೇಲಯ್ವತ್ತರ ಬಳಿಯ ಬಾಡ
ಮುರುವಡಿಯ ಮಂನ್ನೆಯ ಮೇಲಾಳಿಕೆಯು
ಬಾಹಿರ ಸೀಮೆಯೊಳಗಣ ನಿಧಿನಿದಾನ ನಿಕ್ಷೇಪಜಲ
ಪಾಷಾಣಮಾಳಾವ್ರಿಕ್ಷಗುಲುಮಲತಾವಳಿ ಚತುರಾಘಾಟ
ಕಲ್ಲಕಣಿ ಅರುವಣXXದೆರ ಮೂಲೆಗರರುವಣ ‖"

ಎಂಬ ಉಲ್ಲೇಖ ಶಿರವಾಳ ಶಾಸನದಲ್ಲಿ ಕಂಡುಬರುತ್ತದೆ. ಹೀಗೆ ಮೊದಲಾದ ರೂಪಗಳಲ್ಲಿ ಕಂಡುಬರುವ ತೆರಿಗೆ ಪದ್ಧತಿಯಾಗಿ ದತ್ತಿಬಿಟ್ಟ ಭೂಮಿಯಿಂದ ಅರ್ಧ (=ಅರ) ತೆರಿಗೆಯನ್ನು ಹೆಸರಿಗೆ ತೆಗೆದುಕೊಳ್ಳುವ ತೆರಿಗೆ ಪದ್ಧತಿಯಾಗಿದೆ. ಅರುವಣ – ಇದು ಭೂಮಿಯ ಮೇಲೆ ಇದ್ದ ಇನ್ನೊಂದು ತೆರಿಗೆ, ಇದು ನೇಗಿಲು ತೆರಿಗೆಯು ಆಗಿತ್ತು.

ಭೂಮಿಯ ಮೇಲಿನ ತೆರಿಗೆ ಜೊತೆಗೆ ನೇಗಿಲ ತೆರಿಗೆಯು ಇತ್ತು. ಅಂದರೆ ರೈತರು ಉಪಯೋಗಿಸುತ್ತಿದ್ದ ನೇಗಿಲುಗಳ ಸಂಖ್ಯೆಯ ಆಧಾರದ ಮೇಲೆ ತೆರಿಗೆಯನ್ನು ವಿಧಿಸುತ್ತಿದ್ದರು. ಹೆಚ್ಚು ಭೂಮಿ ಹೊಂದಿದ್ದರೆ ಹೆಚ್ಚಿನ ತೆರಿಗೆ ಹೇಗೆ ಇತ್ತೋ, ಹಾಗೆ ಹೆಚ್ಚು ನೇಗಿಲುಗಳು ಹೊಂದಿದ್ದರೆ ಹೆಚ್ಚಿನ ತೆರಿಗೆ ಕೊಡಬೇಕಾಗಿತ್ತು. ಎಂ.ಎಂ. ಕಲಬುರ್ಗಿ ಅವರ ಪ್ರಕಾರ "ಇದು ಕೇವಲ ಹೊಲ, ತೋಟಗಳಿಗೆ ಹಾಕುವ ತೆರಿಗೆಯೂ ಅಲ್ಲ. ಸರಕಾರ ಆಕರಿಸುವುದೂ ಅಲ್ಲ ಎನ್ನುತ್ತ ದೇವರಿಗೆ ಬಿಟ್ಟ ದತ್ತಿ, ಹೊಲ, ಮನೆಗಳನ್ನು ತಾವು ಭೋಗಿಸುವುದಕ್ಕೆ ಪ್ರತಿಯಾಗಿ ಕೊಡುವ ಧನವೇ ಅರುವಣವೆಂದೂ"[೩೦] ತಿಳಿಸಿದ್ದಾರೆ.

ಬಹುಶಃ ಇದರ ತದ್ಭವ ರೂಪವೆ ಅರ್ಪಣ ಎಂದು ಹೇಳಬಹುದು. ಅರುವಣ ಕೇವಲ ಭೂಮಿಗೆ ಮಾತ್ರ ಸಂಬಂಧಿಸಿದ್ದಲ್ಲ, ನಿವೇಶನ ಹೊಲ, ತೋಟ, ಊರುಗಳಿಗೆ ಸಂಬಂಧಿಸಿದೆಂದು ಸ್ಪಷ್ಟವಾಗುತ್ತದೆ.

"XX ದೀಪನೈವೇದ್ಯಾ ಭ್ಯರ್ಚ್ಚನಕ್ಕಂ ಖಂಣ್ಡಸ್ಫುಟಿತ
ಜೀರ್ಣ್ಣೋದ್ಧಾರ XXX ಪೋಧನರ ಚ್ಛಾತ್ರರಶನಾಚ್ಛಾದನಕ್ಕಂ
ಅವರ್ಗ್ಗೆ ವಕ್ಖಾಣಿ XXXಹಣಾದಿ ಪರ್ವ ಹೋಮಬಲಿ
ಕ್ರಿಯಾದಿಗಳ್ಗೆX ಮಯ್ಯನ ದಸವಂದಕೆ ಮತ್ತರು ೨೦ ॥"

ಎಂಬ ಉಲ್ಲೇಖ ಕ್ರಿ.ಶ. ೧೧೧೧ ರ ಯಡ್ರಾಮಿ ಶಾಸನದಲ್ಲಿ ಕಂಡುಬರುತ್ತದೆ. ದಶವಂದ ಈ ತೆರಿಗೆಯು ಭೂ ಕಂದಾಯವನ್ನೇ ಸೂಚಿಸುತ್ತದೆ. "ಉತ್ಪಾದನೆಯ ೧/೧೦ ನೇ ಭಾಗವನ್ನು ಭೂ ನೀರಾವರಿಗೆ ಬಿಡುವ ಕರ ಎನ್ನಲಾಗಿದೆ."[೩೧] ಈ ರೀತಿ ಸಗರ ನಾಡಿನ ಶಾಸನಗಳಲ್ಲಿ ಭೂಮಿಗೆ ಸಂಬಂಧ ಪಟ್ಟ ತೆರಿಗೆ ಚಲಾವಣೆಯಲ್ಲಿದ್ದವು ಎಂಬುದು ಯಡ್ರಾಮಿ ಶಾಸನದಿಂದ ತಿಳಿದು ಬರುತ್ತದೆ.

## ವೃತ್ತಿ – ಕೈಗಾರಿಕೆಗಳ ತೆರಿಗೆ:

ವರ್ತಕರು ತಮ್ಮ ವ್ಯಾಪಾರದ ಜೊತೆಗೆ ಇತರ ವೃತ್ತಿಗಳನ್ನು ಕೈಗೊಂಡಿದ್ದರು. ಅವುಗಳ ಮೇಲು ಸಹ ತೆರಿಗೆ ಇತ್ತು. ಇಂತಹ ಉಲ್ಲೇಖಗಳು ಈ ನಾಡಿನ ಶಾಸನಗಳಲ್ಲಿ ಉಲ್ಲೇಖಗೊಂಡಿವೆ. 'ಗಾಣಾಯ'–ಎಣ್ಣೆಯ ಗಾಣದ ಮೇಲಿನ ತೆರಿಗೆಯಾಗಿತ್ತು.

"XXX೩೦೦ ಅರಲು ಸಲ್ವಂತಾಗಿ ಧಾರೆಯೆರದು ಕೊಟ್ಟರು
ಹಗರಿಟ್ಟಿಗೆ ನಾಡಸೆಟ್ಟಿ ಮೂಲಿಸೆಟ್ಟಿ ಎತ್ತಿನೊಕ್ಕ ೧ ರ
ಸೆಟ್ಟಿದೆರೆಯಂ ಧಾರೆಯೆರದು ಕೊಟ್ಟ ॥"

ಎಂಬ ಉಲ್ಲೇಖ ಕ್ರಿ.ಶ೧೧೨೯ರ ಮುದನೂರು ಶಾಸನದಲ್ಲಿ ಕಂಡುಬರುತ್ತದೆ. ಸೆಟ್ಟಿದೆರೆ, ಸೆಟ್ಟಿಗಳ ಮೇಲಿನ ತೆರಿಗೆಯಾಗಿತ್ತು.

"ಶ್ರೀ ಸ್ವಯಂ ಭುದೇವರಲ್ಲಿಗೆ ವಸ್ದು ದೇವರ
ನಿವೇದ್ಯಕ್ಕಂ ನಸ್ದಾದೀವಿಗೆಗೆವೆಸ್ದು ಎಳರಾಮೆಯ
ತಳಾರಕೆಯ ಮೂಲೆಯಮುಂ ‖"

ಎಂಬ ಉಲ್ಲೇಖ ಯಡ್ರಾಮಿ ಶಾಸನದಲ್ಲಿ ಕಂಡುಬರುತ್ತದೆ. 'ತಳಾರಕೆಯ' – ತಳವಾರನ ಜೀವಿತಕ್ಕಾಗಿ ಕೊಡಬೇಕಾಗಿದ್ದ ತೆರಿಗೆ – ಎನ್ನಬಹುದು. 'ಕೊಳಗದಾಯ' ದಾನ್ಯಗಳ ಮೇಲಿನ ತೆರಿಗೆಯಾಗಿತ್ತು.

"XXXಯಸ್ಯ ಯಸ್ಯ ಯದಾ ಭೂ
ಮಿಸ್ತಸ್ಯ ತಸ್ಯ ತದಾ ಫಲಂ ‖
ಪೂಜಾರಿಗೆ ಮತ್ತ ೬ ಧೂಪ ಜಗಳೆಯ
ಹೊಯ್ವಂಗೆ ಮ ೩ ಮೂಲಗಾರಂಗೆ ಮತ್ತ ೩ ‖"

ಎಂಬ ಉಲ್ಲೇಖ ೧೧ನೇ ಶತಮಾನದ ಆಂದೋಲ ಶಾಸನದಿಂದ ತಿಳಿದುಬರುತ್ತದೆ. 'ಮಾಲಗಾರಂಗೆ' – ಹೂ ಕಟ್ಟುವ ಅಥವಾ ಮಾರುವ ಮಾಲಗಾರರ ಮೇಲೂ ತೆರಿಗೆ ಇತ್ತು. ಇಂತಹ ಉಲ್ಲೇಖಗಳು ಮುದನೂರು, ಯಡ್ರಾಮಿ, ಅಂಕಲಗಿ, ಶಿರವಾಳ ಇಂತಹ ಹಲವಾರು ಶಾಸನಗಳಿಂದ ತಿಳಿದು ಬರುತ್ತವೆ.

**ವ್ಯಾಪಾರ ತೆರಿಗೆ :**

ಸಗರ ನಾಡಿನ ಶಾಸನಗಳಲ್ಲಿ ವ್ಯಾಪಾರದ ಮೇಲೂ ಸಹ ತೆರಿಗೆ ವಿಧಿಸಲಾಗುತ್ತಿತ್ತು. ಶಾಸನಗಳಲ್ಲಿ ಸುಂಕವೆಂದು ಉಲ್ಲೇಖಗೊಂಡಿದ್ದು ಕಂಡು ಬರುತ್ತದೆ. ಮಹಾಜನರು ದೇವಾಲಯದ ಆದಾಯ ಹೆಚ್ಚಿಸುವುದಕ್ಕೆ, ಅಲ್ಲಿರುವ ವಸ್ತುಗಳ ಮೇಲೂ ಸುಂಕ ಅಥವಾ ತೆರಿಗೆಯನ್ನು ವಿಧಿಸುತ್ತಿದ್ದರು. ವಿವಿಧ ರೀತಿಯ ತೆರಿಗೆಗಳ ಅರ್ಥ ಸ್ಪಷ್ಟವಾಗುವುದಿಲ್ಲವಾದರೂ, ಅಂದು ಅವು ಪ್ರಚಲಿತದಲ್ಲಿದ್ದವು. ಅವುಗಳ ಕೆಲ ಉಲ್ಲೇಖ ಈ ರೀತಿ ಕಂಡು ಬರುತ್ತವೆ.

"XXತ್ರಿಭೋಗಾಭ್ಯಂನ್ತರ ಸಿದ್ಧಿಯಂನಳಿದು
ಆಯದಾಯ ಕಿರುಕುಳ ಸXXX
ಸಂನ್ತೆವಣವೊಳಗಾಗಿ ಶ್ರೀ ರಾXXX ॥"
ಎಂಬ ಉಲ್ಲೇಖ ಯಡ್ರಾಮಿ ಶಾಸನದಲ್ಲಿದೆ.

'ಕಿರುಕುಳ' – ಚಿಲ್ಲರೆ ತೆರಿಗೆ ಎಂದರ್ಥ. ಕೆಲ ಸಣ್ಣ–ಸಣ್ಣ ಸುಂಕಗಳ ಗುಂಪಿಗೆ ಕಿರುಕುಳ ಎಂದು ಕರೆಯುತ್ತಾರೆ. ಇದಕ್ಕೆ ಇನ್ನೊಂದು ಅರ್ಥ ಹಿಂಸೆ. ಪ್ರಾಚೀನ ಕಾಲದ ರಾಜರು ಪ್ರಜೆಗಳ ಮೇಲೆ ಒತ್ತಾಯದ ತೆರಿಗೆಯನ್ನು ಹೇರುತ್ತಿದ್ದರು. ಇದರಿಂದ ಕಿರಿಕಿರಿಯಾಗುತ್ತಿತ್ತು. ಹಾಗಾಗಿ ಕಿರುಕುಳ ಎಂದು ಕರೆದಿರಬಹುದು. 'ಪೆರ್ಜುಂಕ' ದೊಡ್ಡ ಸುಂಕ ಎನ್ನಬಹುದಾದರೂ ಪೇರು ಅಥವಾ ಹೇರುಗಳ ಮೇಲೆ ಹಾಕುತ್ತಿದ್ದ ಸುಂಕವೆಂದು ಊಹಿಸಬಹುದು. ಈ ಸುಂಕದ ಜೊತೆ ಹೆರ್ಜುಂಕ ಅಥವಾ ಪೆರ್ಜುಂಕ ಒಂದೇ ಅರ್ಥ ಕಲ್ಪಿಸಿಕೊಡುತ್ತವೆ.

"ಮುದಿನೀರ ಹದಿನೆಂಟುಸಾಸಿರ ಮತ್ತರು
ಭೂಮಿಯೊಳಗಣ ಹೆರ್ಜ್ಜುಂಕ ವಡ್ಡರಾವುಳವಂ
ವುಪ್ಪರಕ್ಕವಂ ಮಡಿವ ಭಂಡಕ್ಕಂ ತಿರುವರು
ಶ್ರೀ ರಾಮೇಸ್ವರ XX ॥"

ಎಂಬ ಉಲ್ಲೇಖ ಕ್ರಿ.ಶ.೧೧೪೬ರ ಮುದನೂರು ಶಾಸನದಲ್ಲಿ ಕಂಡುಬರುತ್ತದೆ.

'ವಡ್ಡರಾವುಳ'– ವ್ಯಾಪಾರ ಸಾಮಗ್ರಿಗಳ ಮೇಲಿನ ತೆರಿಗೆ ಎಂದರ್ಥ. ಈ ತೆರಿಗೆಯ ಬಗ್ಗೆ "ಡಿ.ಸಿ. ಸರಕಾರ ಮತ್ತು ಸಾಲೆತೊರೆ ಅವರು ತೆರಿಗೆ ಎಂಬ ಅಭಿಪ್ರಾಯ ವ್ಯಕ್ತಪಡಿಸಿದ್ದರೆ, ಕೆ.ಎ. ನೀಲಕಂಠ ಶಾಸ್ತ್ರಿ ಹಾಗೂ ಎಸ್.ಎಂ. ಹಿರೇಮಠ ಅವರು ಹಿರಿಯ ರಾಜಕುಲದವರು ಎಂಬ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ತೆರಿಗೆ ನೇರವಾಗಿ ಕೇಂದ್ರ ಸರಕಾರಕ್ಕೆ ಸೇರುತಿತ್ತು."[೩೨] 'ವಡ್ಡರಾವುಳ' ಎಂಬ ಸುಂಕವನ್ನು ವಡ್ಡ ವ್ಯವಹಾರಿಗಳು ಕೊಡುತ್ತಿದ್ದ ಸುಂಕ ಎಂದು ಹೇಳಬಹುದು.

"ಶ್ರೀಮನ್ಯಹಾಸಾಮಂತಂ ಸೆಟ್ಟಿಯ ಎತ್ತಿನೊಕ್ಕ ೧ ರ
ಕಾಹುಕಾಣಿಕೆ ಸೇಸೆ ಬಿಲ್ಕೋಡೆ ಮೂಲೆ ನಾಡೋಪಾದಿ
ಗ್ರಾಸವೊಳಗಾಗಿ ಬಿಟ್ಟ ಗ ೩೦೦ ಅರಲು ಸಲ್ವಂತಾಗಿ
ಧಾರೆಯೆರದು ಕೊಟ್ಟರು ॥"

ಎಂಬ ಉಲ್ಲೇಖ ಕ್ರಿ. ಶ.೧೧೨೪ರ ಮುದನೂರು ಶಾಸನದಿಂದ ತಿಳಿದು ಬರುತ್ತದೆ. 'ಬಿಲ್ಕೋಡೆ' ಪ್ರಾಣಿಗಳ ಮೇಲೆ ಸಾಮಾನುಗಳನ್ನು ಹೇರಿಕೊಂಡು ಬರುತ್ತಿದ್ದರು. ಅವುಗಳ ಮೇಲೂ ಸಹ ಸುಂಕವಿತ್ತು. ಯಡ್ರಾಮಿ, ಮುದನೂರ, ಕುಳಗೇರಿ ಮುಂತಾದವುಗಳ ಉಲ್ಲೇಖ ಶಾಸನದಿಂದ ತಿಳಿದು ಬರುತ್ತದೆ. ಮಾರುವಲ್ಲಿ, ಕೊಳ್ಳುವಲ್ಲಿಯ ಸುಂಕ ಇದಾಗಿರಬಹುದು ಎನಿಸುತ್ತದೆ. ಶಾಸನಗಳಲ್ಲಿ ಕಂಡು ಬರುವ ಕೊಂಡಲ್ಲಿ – ಕೊಟ್ಟಲ್ಲಿ ಪದಗಳು ಗಮನಿಸಿದರೆ ಇದೇ ಅರ್ಥ ಊಹಿಸಬಹುದಾಗಿದೆ. 'ಎತ್ತಿನೊಕ್ಕ'–ಎತ್ತುಗಳ ಮೇಲೆ ಹಾಕುತ್ತಿದ್ದ ತೆರಿಗೆ.

"ಬಾಡದೊರಗೆ ಎತ್ತು ಕತ್ತೆ ಕೋಣ XXX
ಗ್ರಾಮಾನುಗ್ರಾಮದಲು ಅ XXXX
ರವಾಡ ನಾಯಕಬಾಡ ದೇವವಾಡವೆನ್ನದೆ
ಇಂನ್ನೊರ್ವ್ವರಲು ಹೊಸಂತಿಲ ಹಾಗ ॥"

ಎಂಬ ಉಲ್ಲೇಖ ಕ್ರಿ.ಶ.೧೨೧೮ರ ಮುದನೂರು ಶಾಸನದಿಂದ ತಿಳಿದುಬರುತ್ತದೆ. 'ಹೊಸಂತಿಲಹಾಗ' ಹೊಸ್ತಿಲ ತೆರಿಗೆ, 'ಬೀರವಣ'–ವೀರರಿಗೆ ಸಲ್ಲುವ ತೆರಿಗೆ, 'ತಿಪ್ಪೆಸುಂಕ' ಪ್ರಾಣಿಗಳ ಸಗಣಿ ಎಸೆದ ತಿಪ್ಪೆಗಳಿಗೂ ಸಹ ಬೇಡಿಕೆ ಇತ್ತು. ಹಾಗಾಗಿ ತಿಪ್ಪೆಗಳ ಮೇಲೆ ಸುಂಕ ವಿಧಿಸಲಾಗುತ್ತಿತ್ತು. ಇದರಿಂದ ತಿಪ್ಪೆಯ ಮಹತ್ವ ತಿಳಿದು ಬರುತ್ತದೆ. ಇಂತಹ ತೆರಿಗೆಗಳ ಉಲ್ಲೇಖ ಮುದನೂರು ಶಾಸನದಿಂದ ತಿಳಿದು ಬರುತ್ತದೆ.

## ಇತರ ತೆರಿಗೆಗಳು :

ಇತರ ತೆರಿಗೆಗಳು ಈ ನಾಡಿನ ಶಾಸನಗಳಲ್ಲಿ ಉಲ್ಲೇಖಗೊಂಡಿವೆ. ಬಿಟ್ಟಿದೆರೆ, ಹಿಟ್ಟುದೆರೆ, ದಂಡ, ದೋಷ,

"ನಾಯಕಂ ಮಂಡಗೆಯ ರಾಮಿಸೆಟ್ಟಿಯ ಎತ್ತಿನೊಕ್ಕ ೧ ರ
ಕಾಹು ಕಾಣಿಕೆ XXX ಹೆರ್ಜುಕ ಮೂಲೆ ॥"

ಎಂಬ ಉಲ್ಲೇಖ ಮುದನೂರು ಶಾಸನದಿಂದ ತಿಳಿದುಬರುತ್ತದೆ. ಕಾಹು, ಕಾಣಿಕೆ, ಸೇಸೆ ಮುಂತಾದವುಗಳು. 'ಬಿಟ್ಟಿದೆರೆ'–ಪುಕ್ಕಟ್ಟೇ ದುಡಿಯುವವರು ಎಂದರ್ಥ. ತೆರಿಗೆಯನ್ನು

ಕೊಡದೆ ಜನ ಬಿಟ್ಟಿ ಕೆಲಸವನ್ನು ಮಾಡುತ್ತಿದ್ದರೆಂದು ತಿಳಿದು ಬುರತ್ತದೆ. 'ಹಿಟ್ಟುದೆರೆ' ಹಿಟ್ಟುಗಳು ಕೊಡುತ್ತಿದ್ದ ತೆರಿಗೆಯಾಗಿತ್ತು. 'ದಂಡ' ಗ್ರಾಮದಲ್ಲಿ ಯಾರಾದರೂ ತಪ್ಪು ಮಾಡಿದರೆ ಅವರಿಗೂ ಸಹ ದಂಡ ವಿಧಿಸಲಾಗಿತ್ತಿತ್ತು. 'ಕಾಣಿಕೆ' ರಾಜ ಯುದ್ಧದಿಂದ ಪಡೆದ ಕಪ್ಪು ಕಾಣಿಕೆಗಳು ಸಹ ರಾಜ್ಯದ ಆದಾಯಕ್ಕೆ ಸೇರ್ಪಡೆಯಾಗುತ್ತಿತ್ತು. ಇಂತಹ ಹಲವಾರು ತೆರಿಗೆಗಳ ಉಲ್ಲೇಖ ಈ ನಾಡಿನ ಮುದನೂರು ಶಾಸನದಿಂದ ತಿಳಿದುಬರುತ್ತದೆ.

ಈ ನಾಡಿನ ಕೆಲ ಶಾಸನಗಳಲ್ಲಿ ತೆರಿಗೆಯಲ್ಲಿ ವಿನಾಯಿತಿ ಪಡೆದದ್ದು ತಿಳಿದು ಬರುತ್ತದೆ. "ಬ್ರಾಹ್ಮಣರು ತೇಜಸಾಮ್ಯ, ಸರ್ವನಮಸ್ಯ ತ್ರಿಭೋಗಾಭ್ಯಂತರ ಸಿದ್ಧಿ"[೩೩] ಯಿಂದ ಕರಮುಕ್ತಿ ಹೊಂದಿದ್ದರು. ಎಂಬುದು ಏವೂರು ಶಾಸನದಿಂದ ತಿಳಿದುಬರುತ್ತದೆ. ಇವುಗಳ ಜೊತೆ ತೆರಿಗೆ ಸಂಗ್ರಹಣೆ ಮಾಡುವ ಅಧಿಕಾರಿಗಳು ಇದ್ದರು. ಹೆರ್ಜ್ಜುಂಕ ಸುಂಕ ವೆರ್ಗ್ಗಡೆ,

"XXX ಆನದ XXX
ಖರೆ ಅವರವ XX
ಪ್ರಧಾನಂ ಸಗರವೈನೂರುಂ
ಬಾಡದ ಹೆರ್ಜ್ಜುಂಕ ವೆರ್ಗ್ಗಡೆ ದಂಡ
ನಾಯಕಂ ಕಂಚರಸರು ॥"

ಎಂಬ ಉಲ್ಲೇಖ ಕ್ರಿ.ಶ.೧೧೩೯ರ ಏವೂರ ಶಾಸನದಿಂದ ತಿಳಿದುಬರುತ್ತದೆ. ಸಗರ ವೈನೂರುಬಾಡದ ಹೆರ್ಜ್ಜುಂಕ ವೆಗ್ಗಡೆದಂಡನಾಯಕ ಕಂಚರಸ, ಸಗರ ವೈನೂರುಂಬಾಡದ ಸುಂಕವೆಗ್ಗಡೆ ಗಜೆಯಕವರಸ, ಇವರು ತೆರಿಗೆ ಸಂಗ್ರಹಣೆ ಮಾಡಿ ರಾಜ ಅಥವಾ ಅಧಿಕಾರಿಗಳಿಗೆ ಕೊಡುತ್ತಿದ್ದರು. ಇವರು ತೆರಿಗೆಯನ್ನು ಹಣ ಮತ್ತು ದವಸ-ದಾನ್ಯಗಳ ರೂಪದಲ್ಲಿ ಸಂಗ್ರಹಿಸುತ್ತಿದ್ದರು ಎಂಬುದು ಏವೂರು, ಕುಳಗೇರಿ, ಮಲ್ಲಾಬಾದ ಶಾಸನಗಳಿಂದ ತಿಳಿದು ಬರುತ್ತದೆ.

ಒಟ್ಟಿನಲ್ಲಿ ಜನತೆಗೆ ತೆರಿಗೆ ಹೊರಲಾರದಷ್ಟು ಭಾರವಾಗಿದ್ದಿತ್ತು. ತೆರಿಗೆ ಹೆಚ್ಚಾಗಿ ಹಾಕಿದರೆ ಜನರಿಗೆ ಹೊರಲಾಗದ ಹೊರೆಯಾಗಿ ಪರಿಣಮಿಸಬಹುದೆಂದು ಮಹಾಭಾರತವು ಸ್ಪಷ್ಟೋಕ್ತಿಗಳಲ್ಲಿ ಎಚ್ಚರಿಸುತ್ತದೆ. "ದೇಶ ಹಸುವಿದ್ದಂತೆ, ಪ್ರಜೆಗಳು ಕರುಗಳಿದ್ದಂತೆ, ಎಲ್ಲಾ ಹಾಲನ್ನು ಸ್ವಂತಕ್ಕೆ ಕರೆದುಕೊಂಡರೆ ಕರುಗಳು ಬಡವಾಗಿ ಮುಂದೆ ಭಾರವನ್ನು ಹೊರಲು ಅಸಮರ್ಥವಾಗುತ್ತದೆ". ಹಾಲನ್ನು ಕರೆಯಲಿ, ಆದರೆ ಕೆಚ್ಚಲಿಗೆ ನೋವಾಗದಿರಲಿ ಎಂದು ಅರ್ಥಶಾಸ್ತ್ರದ ಬಗ್ಗೆ ಅಭಿಪ್ರಾಯ ವ್ಯಕ್ತಪಡಿಸಲು ಇದೊಂದು ಉದಾಹರಣೆಯಾಗಿದೆ. ಬಳ್ಳಿಗೆ

ನೋವಾಗದಂತೆ, ದುಂಬಿ ಜೇನನ್ನು ಹೀರುವಚಿತೆ, ರಾಜ ಪ್ರಜೆಗಳಿಂದ ತೆರಿಗೆ ವಸೂಲಿ ಮಾಡಬೇಕು.

ಅನಾದಿ ಕಾಲದಿಂದಲೂ ರಾಜ್ಯ ಸುಖಿ ರಾಜ್ಯವಾಗಿದ್ದಿತೆ ? ಜನರು ಸುಃಖದಿಂದ ಇದ್ದರೆ ? ಹಾಗಿದ್ದರೆ ಆರ್ಥಿಕ ವ್ಯವಸ್ಥೆಯು ಅವರ ಸುಃಖವನ್ನು ಹೆಚ್ಚಿಸಲು ಸಾಧ್ಯವಾಗಬಹುದು. ಪ್ರಾರಂಭದಿಂದಲೂ ಅನೇಕ ರಾಜಮನೆತನಗಳು ಆಳಿದ ಈ ನಾಡಿನ ರಾಜ್ಯ ಹಾಗೂ ಜನತೆ ಸುಃಖ-ದುಃಖಗಳನ್ನುಂಡು ನೆನಪಿಸಿಕೊಳ್ಳುವಂತಹ ಶಾಸನಗಳು ಈ ನಾಡಿನಲ್ಲಿ ಕಂಡು ಬರುತ್ತವೆ. ಒಬ್ಬ ರಾಜನ ಕಾಲದಲ್ಲಿ ಒಂದು ಭಾಗದ ಜನರು ಸುಃಖದಿಂದ ಇದ್ದರೆ, ಅದೇ ವೇಳೆಗೆ ಇನ್ನೊಂದೆಡೆ ಜನರು ಕಷ್ಟದಲ್ಲಿ ಸಿಲುಕಿ ಒದ್ದಾಡುತ್ತಿರುತ್ತಾರೆ. ಹಾಗಾಗಿ ಶಾಸನಗಳು ಸುಃಖ-ದುಃಖಗಳನ್ನ ಪರಿಚಯಿಸುವ ಒಂದು ನಾಣ್ಯದ ಎರಡು ಮುಖಗಳಿದ್ದಂತೆ.

ಸುಃಖದ ಕಲ್ಪನೆ ಕಾಲದಿಂದ ಕಾಲಕ್ಕೆ, ದೇಶದಿಂದ ದೇಶಕ್ಕೆ ಭಿನ್ನವಾಗುತ್ತದೆ. ಸಂದರ್ಭನುಸಾರ ದೇಹ ತ್ಯಾಗ ಮಾಡಿದ ವೀರನನ್ನು ಸ್ಮರಿಸಿ, ಗೌರವ ಸಲ್ಲಿಸುತ್ತಿರುವ ಕಾಲವದು. ಆದರೆ ಶಾಸನಗಳು ಉಲ್ಲೇಖಿಸುವ ವಿಷಯಗಳು ದುಃಖಕ್ಕಿಂತಲೂ, ಸುಃಖ-ಶಾಂತಿ, ಸಮೃದ್ಧಿ, ಸಂತೃಪ್ತಿಯ ಜೀವನವನ್ನೇ ಒಳಗೊಂಡಿವೆಯೇ, ಹೊರತು, ದುಃಖದ ಅಥವಾ ಕಷ್ಟದ ಬಗ್ಗೆ ತಿಳಿಸುವ ಶಾಸನಗಳು ತೀರ ವಿರಳ. ಹೀಗಿರುವಾಗ ಆಧುನಿಕ ಅರ್ಥಶಾಸ್ತ್ರ ಸು:ಖದ ಕಲ್ಪನೆಯಿಂದ ಆರ್ಥಿಕ ಮಟ್ಟ ಅಳೆಯುವುದು ತಪ್ಪಾಗುತ್ತದೆ. ಕೆಲವು ಸಲ ಆರ್ಥಿಕಾಭಿವೃದ್ಧಿಯಲ್ಲಿ ಕುಸಿತವು ಕಂಡು ಬರುತ್ತದೆ. ಬರಗಾಲ, ಭೀಕರ ಕ್ಷಾಮ, ಸಾಂಕ್ರಾಮಿಕ ರೋಗಗಳಿಗೆ ರಾಜ್ಯದ ಭಾಗಗಳು ತುತ್ತಾದಾಗ ಆರ್ಥಿಕವಾಗಿ ಸಮಸ್ಯೆಗೆ ಎಡೆಮಾಡುತ್ತವೆ. ಆದ್ದರಿಂದ ಪ್ರಾಚೀನ ಕರ್ನಾಟಕ ಸು:ಖಿ ರಾಜ್ಯದ ಕಲ್ಪನೆ ಕಲ್ಪನೆ ಯಾಗಯೇ ಉಳಿಯುತ್ತದೆ. ಒಟ್ಟಿನಲ್ಲಿ ಪ್ರಾಚೀನ ಕರ್ನಾಟಕದ ಸುಃಖ ಸಮೃದ್ಧಿಯನ್ನು ಪರಿಕಲ್ಪಿಸುವಾಗ ಆ ಕಾಲದ ಜನತೆಯ ಆರ್ಥಿಕ ಮಟ್ಟ ಉತ್ತಮವಾಗಿದ್ದಿತ್ತೆಂಬುದು ಗಮನಾರ್ಹವಾಗಿದೆ.

# ಟಿಪ್ಪಣಿಗಳು

೧. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೩೬.

೨. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ : ಚಿದಾನಂದ ಮೂರ್ತಿ, ಎಂ.ಸಪ್ನ ಬುಕ್ ಹೌಸ್, ಬೆಂಗಳೂರು, ೨೦೦೨, ಪು.ಸಂ.೪೦೪.

೩. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೨೯೨.

೪. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೪೦೧.

೫. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೨೯೭.

೬. ಸುರುಪುರು ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ.೦೩.

೭. ಸುರುಪುರು ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ.೧೪೨.

೮. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೨೭೩.

೯. ಶಾಸನಗಳಲ್ಲಿ ಕರ್ನಾಟಕದ ವರ್ತಕರು : ಹಿರೇಮಠ ಬಿ.ಆರ್.ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೬, ಪು.ಸಂ.೧೨.

೧೦. ಶಾಸನಗಳಲ್ಲಿ ಕರ್ನಾಟಕದ ವರ್ತಕರು : ಹಿರೇಮಠ ಬಿ.ಆರ್, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೬, ಪು.ಸಂ.೧೫.

೧೧. ಆದಿ ಬಣಜಿಗರು ಒಂದು ಅಧ್ಯಯನ : ಜೇವರ್ಗಿ ಮಲ್ಲಿಕಾರ್ಜುನ, ಶ್ರೀ ಶಾರದಾಂಬಿಕಾ ಪ್ರಕಾಶನ, ಶಹಪೂರ, ೨೦೦೩, ಪು.ಸಂ.೪೪.

೧೨. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೪೩೫.

೧೩. ಶಾಸನಗಳಲ್ಲಿ ಕರ್ನಾಟಕದ ವರ್ತಕರು : ಹಿರೇಮಠ ಬಿ.ಆರ್, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೬, ಪು.ಸಂ.೨೯.

೧೪. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೪೩೩.

೧೫. ಸುರುಪುರು ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ.೧೬೧.

೧೬. ಶಾಸನಗಳಲ್ಲಿ ಕರ್ನಾಟಕದ ವರ್ತಕರು : ಹಿರೇಮಠ ಬಿ.ಆರ್, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೬, ಪು.ಸಂ.೩೪.

೧೭. ಹೈದರಾಬಾದು ಕರ್ನಾಟಕ ಭಾಗದ ಕನ್ನಡ ಶಿಲಾ ಶಾಸನಗಳು : ಶಿವಾನಚಿದ. ವಿ, ಬನಾರಸ ಹಿಂದೂ ವಿಶ್ವವಿದ್ಯಾಲಯ, ವಾರಣಾಸಿ, ೧೯೯೨, ಪು.ಸಂ.೩೭.

೧೮. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ : ಚಿದಾನಂದ ಮೂರ್ತಿ, ಎಂ.ಸಪ್ನ ಬುಕ್ ಹೌಸ್, ಬೆಂಗಳೂರು, ೨೦೦೨, ಪು.ಸಂ.೪೨೧.

೧೯. ಶಾಸನಗಳಲ್ಲಿ ಕರ್ನಾಟಕದ ವರ್ತಕರು : ಹಿರೇಮಠ ಬಿ.ಆರ್, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೬, ಪು.ಸಂ.೪೨.

೨೦. ಶಾಸನಗಳಲ್ಲಿ ಕರ್ನಾಟಕದ ವರ್ತಕರು : ಹಿರೇಮಠ ಬಿ.ಆರ್, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೬, ಪು.ಸಂ.೬೦.

೨೧. ಶಾಸನಗಳಲ್ಲಿ ಕರ್ನಾಟಕದ ವರ್ತಕರು : ಹಿರೇಮಠ ಬಿ.ಆರ್, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೬, ಪು.ಸಂ.೬೬.

೨೨. ಶಾಸನಗಳಲ್ಲಿ ಕರ್ನಾಟಕದ ವರ್ತಕರು : ಹಿರೇಮಠ ಬಿ.ಆರ್, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೬, ಪು.ಸಂ.೭೫.

೨೩. ಸುರುಪುರು ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ.೨೭.

೨೪. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ : ಚಿದಾನಂದ ಮೂರ್ತಿ, ಎಂ.ಸಪ್ನ ಬುಕ್ ಹೌಸ್, ಬೆಂಗಳೂರು, ೨೦೦೨, ಪು.ಸಂ.೪೩೨.

೨೫. ಶಾಸನಗಳಲ್ಲಿ ಕರ್ನಾಟಕದ ವರ್ತಕರು : ಹಿರೇಮಠ ಬಿ.ಆರ್, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೬, ಪು.ಸಂ.೧೩೧.

೨೬. ತರ್ದವಾಡಿ ನಾಡು ಒಂದು ಅಧ್ಯಯನ : ಕೊಪ್ಪಾ ಎಸ್.ಕೆ, ಪ್ರತಿಭಾ ಪ್ರಕಾಶನ, ಇಂಡಿ, ೧೯೯೦, ಪು.ಸಂ.೨೨೧.

೨೭. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ : ಚಿದಾನಂದ ಮೂರ್ತಿ, ಎಂ.ಸಪ್ನ ಬುಕ್ ಹೌಸ್, ಬೆಂಗಳೂರು, ೨೦೦೨, ಪು.ಸಂ.೪೩೫.

೨೮. ತರ್ದವಾಡಿ ನಾಡು ಒಂದು ಅಧ್ಯಯನ : ಕೊಪ್ಪಾ ಎಸ್.ಕೆ, ಪ್ರತಿಭಾ ಪ್ರಕಾಶನ, ಇಂಡಿ, ೧೯೯೦, ಪು.ಸಂ.೨೨೪.

೨೯. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ : ಚಿದಾನಂದ ಮೂರ್ತಿ, ಎಂ.ಸಪ್ನ ಬುಕ್ ಹೌಸ್, ಬೆಂಗಳೂರು, ೨೦೦೨, ಪು.ಸಂ.೪೩೯.

೩೦. ತರ್ದವಾಡಿ ನಾಡು ಒಂದು ಅಧ್ಯಯನ : ಕೊಪ್ಪಾ ಎಸ್.ಕೆ, ಪ್ರತಿಭಾ ಪ್ರಕಾಶನ, ಇಂಡಿ, ೧೯೯೦, ಪು.ಸಂ.೨೨೭.

೩೧. ತರ್ದವಾಡಿ ನಾಡು ಒಂದು ಅಧ್ಯಯನ : ಕೊಪ್ಪಾ ಎಸ್.ಕೆ, ಪ್ರತಿಭಾ ಪ್ರಕಾಶನ, ಇಂಡಿ, ೧೯೯೦, ಪು.ಸಂ.೨೨೬.

೩೨. ತರ್ದವಾಡಿ ನಾಡು ಒಂದು ಅಧ್ಯಯನ : ಕೊಪ್ಪಾ ಎಸ್.ಕೆ, ಪ್ರತಿಭಾ ಪ್ರಕಾಶನ, ಇಂಡಿ, ೧೯೯೦, ಪು.ಸಂ.೨೩೦.

೩೩. ಸುರುಪುರು ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ.೨೯.

# ಅಧ್ಯಾಯ–೬

## ಧಾರ್ಮಿಕ ವ್ಯವಸ್ಥೆ

೬.೧. ಬೌದ್ಧ ಧರ್ಮ

೬.೨. ಜೈನ ಧರ್ಮ

೬.೩. ಶೈವ ಧರ್ಮ

೪.೪. ವೈಷ್ಣವ ಧರ್ಮ

೬.೫. ವೀರಶೈವ ಧರ್ಮ

## ಪ್ರಸ್ತಾವನೆ :

ಪ್ರಾಚೀನ ಧರ್ಮಗಳಾದ ಜೈನ, ಬೌದ್ಧ, ಶೈವ ಹಾಗೂ ವೈಷ್ಣವ ಧರ್ಮಗಳು ಎಲ್ಲ ರಾಜರ ಕಾಲದಲ್ಲಿ ಕಂಡು ಬರುವ ಧರ್ಮಗಳಾಗಿವೆ. ಈ ಚತುಸ್ಸಮಯಗಳಲ್ಲಿ ಯಾವುದು ಮೊದಲು, ಯಾವುದು ಅನಂತರ ಎಂದು ಹೇಳುವುದು ತೀರ ಕಷ್ಟಕರವಾಗಿದೆ. ವೈದಿಕ ಸಂಸ್ಕೃತಿಯ ಚರ್ತುವರ್ಣ ಪದ್ಧತಿಗಳು ಕ್ರಮೇಣ ಜಾತಿ ಪದ್ಧತಿಗಳಾಗಿ ಸಮಾಜದಲ್ಲಿ ಬೇರೂರಿದವು. ಕ್ರಿ.ಪೂ. ಆರನೇ ಶತಮಾನದ ವೇಳೆಗೆ ಜೈನ ಧರ್ಮ ಹಾಗೂ ಬೌದ್ಧ ಧರ್ಮಗಳೂ ಉದಯಗೊಂಡವು. ಆದರೆ ಕ್ರಮೇಣ ಈ ಧರ್ಮದ ಮೇಲೆ ಜಾತಿ ಪದ್ಧತಿ ಹಾಗೂ ತತ್ವಗಳು ಕಠಿಣವಾಗಿದ್ದರಿಂದ ಜೈನ ಹಾಗೂ ಬೌದ್ಧ ಧರ್ಮಗಳು ಅವನತಿಯ ಅಂಚಿನೆಡೆಗೆ ಸಾಗಿದವು. ನಂತರ ವೈದಿಕ ಧರ್ಮದ ಪ್ರಭಾವ ಗಾಢವಾಗಿ ಬೀರಿದ್ದರಿಂದ ಹನ್ನೆರಡನೇ ಶತಮಾನದ ಶಿವಶರಣರ ಸಿದ್ಧಾಂತಗಳು ನಾಡಿನಾದ್ಯಂತ ವೈದಿಕ, ಶೈವ ಹಾಗೂ ವೀರಶೈವ ಧರ್ಮಗಳು ಅವಿಷ್ಕಾರಗೊಂಡವು. ಹೀಗಾಗಿ ಈ ಎಲ್ಲ ಧರ್ಮಗಳು ಸಗರನಾಡಿನ ಶಾಸನಗಳ ಆಧಾರದಿಂದ ಧಾರ್ಮಿಕ ವ್ಯವಸ್ಥೆಯನ್ನು ಈ ರೀತಿ ಕಟ್ಟಿಕೊಡಬಹುದು.

### ೬.೧. ಬೌದ್ಧಧರ್ಮ :

ಬೌದ್ಧ ಧರ್ಮದ ಪ್ರಭಾವ ಸಗರನಾಡಿನ ಕೆಲ ಭಾಗಗಳಲ್ಲಿ ಕಂಡು ಬರುತ್ತದೆ. ಜೇವರ್ಗಿ, ಅಣಬಿ, ವಜ್ಜಲ, ಶಿರಿವಾಳಗಳಲ್ಲಿ ಬೌದ್ಧ ಧರ್ಮದ ಸ್ತೂಪಗಳು, ಸ್ತಂಭಗಳು, ಶಿಲಾ ಫಲಕಗಳು ಲಿಪಿ ಸಹಿತ ಹಾಗೂ ಲಿಪಿ ರಹಿತವಾಗಿ ದೊರೆತಿವೆ. 'ಅಣಬಿ' ಫಲಕಗಳನ್ನು ತಯಾರಿಸುವ ಕೇಂದ್ರವಾಗಿತ್ತು. ಎಂದು ತಿಳಿದು ಬರುತ್ತದೆ. ಸ್ತೂಪಗಳು ಕಲ್ಲಿನಿಂದ ಕಟ್ಟಿದ್ದು, ಗುಮ್ಮಟಾಕಾರದ ಮಾದರಿಯಲ್ಲಿ ಇವೆ.

### ೬.೨. ಜೈನಧರ್ಮ :

ಆದಿಮ ಪ್ರಾಚೀನ ಧರ್ಮಗಳ ಪರಂಪರೆಯಲ್ಲಿ ಜೈನ ಧರ್ಮವು ಒಂದು. ಜೈನ ಧರ್ಮದ ಶ್ರಾವಕರನ್ನು 'ಜಿನ' ಎಂದು ಕರೆಯುತ್ತಾರೆ. ಜಿನ ಎಂದರೆ ಗೆದ್ದವ ಎಂದರ್ಥ. ಪಂಚೇಂದ್ರಿಯಗಳ ಮೇಲೆ ನಿಯಂತ್ರಣ ಸಾಧಿಸಿ, ಅರಿಷಡ್ ವರ್ಗಗಳಿಂದ ದೂರವಿದ್ದು

ಜೀವಾತ್ಮ ಪರಮಾತ್ಮನಾಗಲು, ತನ್ನಲ್ಲಿರುವ ಕಲ್ಮಶಗಳನ್ನು ದೂರವಿಟ್ಟು, ಕರ್ಮದಿಂದ ಬಿಡುಗಡೆ ಹೊಂದಲು ಮುಕ್ತಿ ಮಾರ್ಗವನ್ನು ಅನುಸರಿಸುವುದೇ ಜೈನ ಧರ್ಮದ ಉದ್ದೇಶ. ಈ ಧರ್ಮವು ಅಹಿಂಸಾ ತತ್ವಕ್ಕೆ ಹೆಚ್ಚು ಒತ್ತು ಕೊಟ್ಟಿದೆ. ಅಂತೆಯೇ "ನೀನೂ ಬದುಕು, ಇತರರಿಗೂ ಬಾಳುಕೊಡು" ಎಂಬ ಮಾನವೀಯ ಮೌಲ್ಯವನ್ನು ಎತ್ತಿ ತೋರಿಸುತ್ತದೆ. ಭಾವಶುದ್ಧಿ, ನೈತಿಕ ಶುದ್ಧಿಯ ಜೊತೆಗೆ ಜೀವನಾಭಿವೃದ್ಧಿಗೊಳಿಸುವುದೇ ಜೈನ ಧರ್ಮದ ಗುರಿ. ಇಂತಹ ಧ್ಯೇಯ, ಉದ್ದೇಶಗಳನ್ನು ಹೊಂದಿದ ಧರ್ಮ ಇದಾಗಿದೆ. ಬೆಟ್ಟ-ಗುಡ್ಡ, ಗುಹೆ, ಬಂಡೆ, ಕಣಿವೆ, ಕೊಳ್ಳಗಳು ಜೈನ ಧರ್ಮದ ಹೆಸರಿನಿಂದ ಕರೆಯಲ್ಪಟ್ಟಿವೆ. ಇದಕ್ಕೆ ಒಂದು ನಿದರ್ಶನವಾಗಿ ಸಗರನಾಡಿನ ಶಹಾಪೂರ ತಾಲೂಕಿನ ಚಾರಣಗಿರಿ ಎಂಬ ಗ್ರಾಮವನ್ನು ಚಾರಣ ಎಂದು ಕರೆಯುತ್ತಾರೆ. 'ಚಾರಣ' ಎಂದರೆ ಸದಾ ಸಂಚಾರ ಮಾಡುತ್ತಾ, ಧರ್ಮ ಪ್ರಚಾರ ಮಾಡುವುದು. ಜೈನ ಯತಿಗಳು ಇಲ್ಲಿ ವಾಸವಾಗಿದ್ದರಿಂದ ಇದಕ್ಕೆ 'ಚಾರಣಗಿರಿ' ಎಂದು ಜನ ಕರೆಯುತ್ತಾರೆ. ಇಂತಹ ಅನೇಕ ಉದಾಹರಣೆಗಳು ಈ ನಾಡಿನ ಬೆಟ್ಟ ಗುಡ್ಡಗಳಿಂದ ತಿಳಿದು ಬರುತ್ತದೆ. ಗೋಗಿ, ಅಗ್ನಿ, ಏವೂರ, ಮಾಲಗತ್ತಿ, ಗಂವ್ಹಾರ, ಅರಕೇರಿ, ಮಳ್ಳಿ, ಕೆಂಬಾವಿ, ಹಗರಟಗಿ, ಬೊಮ್ಮನಹಳ್ಳಿ, ರಾಜನಕೋಳೂರು, ಹೆಬ್ಬಾಳ ಮುಂತಾದವುಗಳು ಸಗರ ನಾಡಿನ ಜೈನ ಕೇಂದ್ರಗಳಾಗಿದ್ದವು. ಕ್ರಿ.ಶ. ೬-೭ ನೇ ಶತಮಾನದಿಂದಲೂ ಮಾಲಗತ್ತಿ ಜೈನ ಧರ್ಮದ ನೆಲೆಯಾಗಿದ್ದು, ಯಾತ್ರಾ ಸ್ಥಳವು ಆಗಿತ್ತು. ಇಲ್ಲಿ ದೊರೆತ ಅವಶೇಷಗಳಿಂದ ಈ ನಾಡಿನಲ್ಲಿ ಜೈನ ಧರ್ಮ ಹೆಚ್ಚು ಪ್ರಾಮುಖ್ಯತೆ ಪಡೆದುಕೊಂಡಿತು ಎಂಬುದು ತಿಳಿದು ಬರುತ್ತದೆ.

## ಬಸದಿಗಳು :

ಜೈನ ಸನ್ಯಾಸಿಗಳು ವಾಸವಾಗಿರುವ ಸ್ಥಳಗಳನ್ನು ಬಸದಿಗಳು ಅಥವಾ ಜಿನಾಲಯ ಎಂದು ಕರೆಯುತ್ತಾರೆ. ಈ ಬಸದಿಗಳಲ್ಲಿ ಜಿನ ಮುನಿಗಳು ನಾಲ್ಕು ತಿಂಗಳು ಅಂದರೆ ಮಳೆಗಾಲದಲ್ಲಿ ಇಲ್ಲಿ ವಾಸವಿದ್ದು, ನಂತರ ಅವರು ಸಂಚಾರ ಮಾಡುತ್ತಾ ಜೈನ ಧರ್ಮದ ಪ್ರಚಾರದ ಕಾರ್ಯದಲ್ಲಿ ತೊಡಗುತ್ತಿದ್ದರು. ಪಾರ್ಶ್ವನಾಥ ಹಾಗೂ ಮಹಾವೀರ ನಿರ್ವಾಣ ಹೊಂದಿದ ನಂತರ ಅವರ ಮೂರ್ತಿಗಳನ್ನು ಪೂಜೆ ಮಾಡುವ ಪದ್ಧತಿ ಬೆಳೆದು ಬಂದಿದ್ದರಿಂದ ಬಸದಿಗಳನ್ನು ನಿರ್ಮಿಸುವ ಸಂಪ್ರದಾಯ ಬೆಳೆದು ಬಂದಿತು. ಪ್ರಾರಂಭದಲ್ಲಿ ಬಸದಿಗಳನ್ನು ಮರ ಹಾಗೂ ಮಣ್ಣಿನಿಂದ ನಿರ್ಮಿಸುತ್ತಿದ್ದರು. ನಂತರದಲ್ಲಿ ಕಲ್ಲಿನಿಂದ ಕಟ್ಟಲು ಪ್ರಾರಂಭಿಸಿದರು. ದೇವಾಲಯಗಳಂತೆ ಬಸದಿಗಳೂ ಸಾಂಸ್ಕೃತಿಕ ಕೇಂದ್ರಗಳಾಗಿ ಮಾರ್ಪಟ್ಟವು. ಸಗರ ನಾಡಿನಲ್ಲಿ ಜಿನ ಬಸದಿ ಮತ್ತು ಜಿನ ಮೂರ್ತಿಗಳನ್ನು ಪ್ರತಿಷ್ಠಾಪಿಸಿದ್ದು ಕಂಡು

ಬರುತ್ತವೆ. "ಏಕಕೂಟ ಬಸದಿ, ಪಾರ್ಶ್ವನಾಥ ಬಸದಿ"[೧], "ಚಂದ್ರಪ್ರಭ ಬಸದಿ"[೨], ಮುಂತಾದವುಗಳ ಕುರಿತು ಸಗರನಾಡಿನ ಹಲವಾರು ಶಾಸನಗಳಿಂದ ತಿಳಿದು ಬರುತ್ತದೆ. ಸಿರಿಸೆಟ್ಟಿಯ ಮಗ ರಾಮಿಸೆಟ್ಟಿ ಮಾಡಿಸಿದ ಚಂದ್ರನಾಥ ಬಸದಿ ಗೋಗಿಯಲ್ಲಿ ಕಂಡು ಬಂದರೆ, ಪದ್ಮಾಸನ ಹಾಕಿದ ವೃಷಭನಾಥನ ಬಸದಿ ಅಗ್ನಿಯಲ್ಲಿ ಕಂಡು ಬರುತ್ತದೆ. ಬಸದಿಗಳನ್ನು ಕಟ್ಟಿಸುವುದು, ಅಷ್ಟೇ ಅಲ್ಲ ಅವುಗಳಿಗಾಗಿ ದಾನ–ದತ್ತಿ ಕೊಟ್ಟಿದ್ದು ಶಾಸನಗಳಿಂದ ತಿಳಿದು ಬರುತ್ತದೆ. ಕಲ್ಯಾಣ ಚಾಲುಕ್ಯ "ಆರನೇ ವಿಕ್ರಮಾದಿತ್ಯನ ರಾಣಿ ಧಾರಲದೇವಿ ಭೂಮಿದಾನ ಕೊಟ್ಟಿದ್ದು ಬೊಮ್ಮನಹಳ್ಳಿ" ಶಾಸನದಿಂದ ತಿಳಿದು ಬಂದರೆ, ಶಾಂತಿನಾಥ ಬಸದಿಗೆ ನಾಗವರ್ಮ ಸೆಟ್ಟಿ ದತ್ತಿ ಕೊಟ್ಟಿದ್ದು ಏವೂರಿನ ಶಾಸನದಿಂದ ತಿಳಿದು ಬರುತ್ತದೆ. ಇವುಗಳ ಹೊರತಾಗಿ ಸಗರನಾಡಿನಲ್ಲಿ ಯಾವುದೇ ಶಾಸನಗಳಲ್ಲಿ ಬಸದಿಗಳ ನಿರ್ಮಾಣ ಹಾಗೂ ಬಸದಿಗಳಿಗೆ ನೀಡಿದ ದಾನ–ದತ್ತಿಗಳ ಉಲ್ಲೇಖ ಕಂಡು ಬರುವುದಿಲ್ಲ. ದತ್ತಿಯ ಸೀಮಾ ರೇಖೆಗಳನ್ನು ಗುರುತಿಸುವಾಗ "ವಾದವಿಡಿಯ ಬಸದಿ"[೩] ಎಂಬ ಉಲ್ಲೇಖ ಹೆಬ್ಬಾಳ ಶಾಸನದಲ್ಲಿದೆ.

ಬಸದಿಗಳ ಎಡ ಹಾಗೂ ಬಲ ಭಾಗದಲ್ಲಿ ಧರಣೇಂದ್ರ ಯಕ್ಷ, ಶಾಮಯಕ್ಷ, ಮಾತಂಗಯಕ್ಷ, ಸರ್ವಾರ್ಹಣ ಯಕ್ಷ, ಪದ್ಮಾವತಿ ಯಕ್ಷ, ಜ್ವಾಲಾಮಾಲಿನಿ ಯಕ್ಷಿ, ಸಿದ್ಧಾಯಿಕಾ ಯಕ್ಷಿ, ಕೂಷ್ಮಂಡಿನಿ ಯಕ್ಷಿ, ನೇಮಿನಾಥ ಯಕ್ಷಿ, ಹೀಗೆ ಮುಂತಾದ ಯಕ್ಷ–ಯಕ್ಷಿಯರ ಪ್ರತಿಮೆಗಳು ಕಂಡು ಬರುತ್ತವೆ. ಪ್ರತಿಯೊಬ್ಬ ತೀರ್ಥಂಕರನಿಗೂ ಒಬ್ಬೊಬ್ಬ ಯಕ್ಷ–ಯಕ್ಷಣಿಯರು ಇರುತ್ತಿದ್ದರು. ಪ್ರಾರಂಭದಲ್ಲಿ ಇವರನ್ನು ತೀರ್ಥಂಕರರ ಜೊತೆಗೆ ಪೂಜಿಸುತ್ತಿದ್ದರು. ಕ್ರಮೇಣ ಯಕ್ಷಿಯರನ್ನು ಪ್ರತ್ಯೇಕವಾಗಿ ಪೂಜಿಸಲಾರಂಭಿಸಿದರು. ಹಾಗಾಗಿ 'ಯಕ್ಷಿ ಆರಾಧನಾ' (Yaksi Cult) ಎಂದು ಕರೆದಿರಬಹುದು. ರಾಷ್ಟ್ರಕೂಟರಿಂದ ಯಾದವರ ಕಾಲದವರೆಗೂ ಜೈನಧರ್ಮಕ್ಕೆ ಪ್ರೋತ್ಸಾಹ ದೊರೆಕಿತು. ಇಂತಹ ಹಲವಾರು ಶಾಸನಗಳನ್ನು ಕುರಿತು ಅಧ್ಯಯನ ಮಾಡಿದಾಗ ಈ ಧರ್ಮ ಸಗರ ನಾಡಿನಲ್ಲಿ ಉನ್ನತವಾದ ಸ್ಥಾನದಲ್ಲಿತ್ತು ಎಂಬುದು ತಿಳಿದು ಬರುತ್ತದೆ.

## ಸಮಾಧಿ–ಮರಣ ಮತ್ತು ನಿಶಧಿ :

ಜೈನ ಧರ್ಮದವರು ಹುಟ್ಟನ್ನು ಸಂತೋಷದಿಂದ ಸ್ವಾಗತಿಸಿದಂತೆ, ಸಾವನ್ನು ತೆರೆದ ಮನಸ್ಸಿನಿಂದ ಬರ ಮಾಡಿಕೊಳ್ಳುತ್ತಿದ್ದರು. ಸಲ್ಲೇಖನ ವ್ರತದಿಂದ ಸಮಾದಿ–ಮರಣ ಹೊಂದುವುದಕ್ಕೆ ಮೃತ್ಯು ಮಹೋತ್ಸವ ಎಂದು ಕರೆದಿದ್ದಾರೆ. ಪ್ರಾಚೀನ ಕಾಲದಿಂದ ಸಮಾದಿ– ಮರಣ ಹೊಂದುವುದು ಮುಂದುವರೆಸಿಕೊಂಡು ಬಂದಿದ್ದರು. ಇದೊಂದು

ಆದರ್ಶ, ಗೌರವದ ಮರಣವಾಗಿತ್ತು. ಜೀವನದ ಅಂತಿಮ ಹಂತವೇ ಮರಣ. ಜೀವನದಲ್ಲಿ ಮೋಕ್ಷ ಪಡೆಯುವುದೇ ಜೈನ ಧರ್ಮದ ಉದ್ದೇಶ. ಜೀವಿತದ ಕೊನೆ ಹಂತದಲ್ಲಿ ಸಲ್ಲೇಖನ ವ್ರತ ಕೈಗೊಳ್ಳುವುದರ ಮೂಲಕ ದೇಹವನ್ನು ದಂಡಿಸುತ್ತಿದ್ದರು. ಈ ರೀತಿ ಕಂಡು ಬರುವುದು ಜೈನ ಧರ್ಮದಲ್ಲಿ ಮಾತ್ರ. ಅನಾರೋಗ್ಯದಿಂದ ನರಳುತ್ತಿರುವಾಗ, ರೋಗ-ರುಜಿನಗಳು ಬಂದಾಗ, ಮುಂದೆ ಬದುಕಿರಲಾರೆನು ಎಂದು ತಿಳಿದು ಬಂದಾಗ, ಸಲ್ಲೇಖನ ವ್ರತ ಕೈಗೊಳ್ಳುತ್ತಿದ್ದರು. ಈ ರೀತಿ ಆತ್ಮಾರ್ಪಣೆ ಮಾಡಿಕೊಳ್ಳುವುದು ಅವರಿಗೆ ಬಹಳ ಇಷ್ಟವಾದ ಮತ್ತು ಪುಣ್ಯದ ಕಾರ್ಯವೆನಿಸಿತ್ತು. ಸಾರ್ವಜನಿಕರು ಸಹ ಇಂತಹವರ ಮೇಲೆ ಅಪಾರ ಗೌರವ, ಭಕ್ತಿಯನ್ನು ಹೊಂದಿದ್ದರು. ಈ ರೀತಿ ಆತ್ಮಾರ್ಪಾಣೆ ಮಾಡಿಕೊಂಡವರ ಮನದಲ್ಲಿ ನಾವು ಶ್ರೇಷ್ಠವಾದ ಕಾರ್ಯವನ್ನು ಕೈಗೊಂಡಿದ್ದೇವೆ. ನಮ್ಮ ಜನ್ಮ ಸಾರ್ಥಕ ಎಂದೆನಿಸುತ್ತಿತ್ತು. ಆದರೆ ಇವುಗಳ ವಿಧಿ-ವಿಧಾನಗಳ ಬಗ್ಗೆ ಶಾಸನಗಳಿಂದ ಸ್ಪಷ್ಟವಾಗಿ ತಿಳಿದು ಬರುವುದಿಲ್ಲ. ಸಮಾಧಿ-ಮರಣ ವ್ರತವನ್ನು ಸ್ವೀಕರಿಸಿದವನು ಆಹಾರವನ್ನು ತ್ಯಜಿಸಿ, ಸ್ನೇಹ, ಸಂಬಂಧ, ಸಂಘ ವೈರತ್ವವನ್ನು ತ್ಯಜಿಸಿ, ತನ್ನ ಕರ್ಮಗಳ ಬಗ್ಗೆ ಆಲೋಚಿಸಿ, ಪಶ್ಚಾತಾಪ ಪಡುತ್ತಾ, ಪಂಚ ಪರಮೇಷ್ಠಿಗಳನ್ನು ಧ್ಯಾನಿಸುತ್ತಾ, ತಮಗೆ ಸದ್ಗತಿ ದೊರೆಯಲೆಂದು ಬಯಸುತ್ತಾ ಪ್ರಾಣತ್ಯಾಗ ಮಾಡುತ್ತಿದ್ದರು. ಈ ರೀತಿಯ ಪ್ರಾಣತ್ಯಾಗ ಧರ್ಮಕ್ಕಾಗಿ, ಆತ್ಮತೃಪ್ತಿಗಾಗಿ, ತಮ್ಮನ್ನು ಪ್ರೀತಿಸಿದವರು ದೂರವಾದಾಗ ಆ ಅಗಲಿಕೆ ತಡೆಯಲಾರದೆ ವ್ರತವನ್ನು ಸ್ವೀಕರಿಸಿ ಪ್ರಾಣತ್ಯಾಗ ಮಾಡುತ್ತಿದ್ದರು. ಇಂತಹ ಪವಿತ್ರ ತ್ಯಾಗ ಜೈನ ಧರ್ಮದಲ್ಲಿ ಮಾತ್ರ ಕಂಡು ಬರುತ್ತದೆ. ಇಂತಹ ಹಲವಾರು ಶಾಸನಗಳು ಸಗರನಾಡಿನಲ್ಲಿವೆ.

"ಯತಿಸನ್ನತಿಗೆ ವಿನೆಯಪ್ರತತಿಗೆ ಮುನ್ನೂರ್ವ್ವೊಗಳೆನೆ
ಹೆರದೂರ್ಯಯು ಸ್ಥಿತಿಯಂ ಸಮಾಧಿ ವಿಧಿಯ ಜಿತಂ
ಸಪ್ರಚ (ದ?) ಯ ನರೇಂದ್ರ ಕೀರ್ತ್ತಿ ಮುನೀಂದ್ರಂ ॥"[೪]

ಎಂಬ ಉಲ್ಲೇಖ ಕುಳಗೇರಿ ಶಾಸನದಿಂದ ತಿಳಿದು ಬರುತ್ತದೆ. ಈ ಶಾಸನದಲ್ಲಿ ನರೇಂದ್ರ ಮುನಿ ಸಮಾಧಿ ಹೊಂದಿದ್ದು ತಿಳಿದು ಬರುತ್ತದೆ. ಸಮಾಧಿ ಹೊಂದಿದ ಶಾಸನ ಕುಳಗೇರಿಯಲ್ಲಿ ಕಂಡುಬಂದರೆ, ಮರಣ ಹೊಂದಿದ ಶಾಸನ ಹಗರಟಗಿಯಲ್ಲಿ ಕಂಡು ಬರುತ್ತದೆ. ದೇವಚಂದ್ರನೆಂಬ ಜೈನಗುರು ಸನ್ಯಾಸನ ವಿಧಿಯಿಂದ ಮರಣ ಹೊಂದಿದನು. ಈತನ ಪ್ರತಿಮೆಯನ್ನು ಹಗರಟಗಿಯ "ಬಬ್ಬರ ಕಾಳಿಸೆಟ್ಟಿ"[೫] ಮಾಡಿಸಿದ ಉಲ್ಲೇಖ ಹಗರಟಗಿ ಶಾಸನದಿಂದ ತಿಳಿದು ಬರುತ್ತದೆ.

## ನಿಶಧಿ :

ಸನ್ಯಸನ ವಿಧಿಯಿಂದ ಮಡಿದವರ ಸ್ಮಾರಕವಾಗಿ-ವೀರರಿಗೆ ವೀರಗಲ್ಲುಗಳನ್ನು ಸ್ಥಾಪಿಸುತ್ತಿದ್ದಂತೆ-ಕೆಲವು ಸ್ಮಾರಕಗಳನ್ನು ನಿಲ್ಲಿಸುತ್ತಿದ್ದರು. ಇವುಗಳನ್ನು 'ನಿಸಿಧಿಕಲ್ಲು' ಗಳೆಂದು ಕರೆಯುತ್ತಾರೆ. ಇವುಗಳು ಬಸದಿಗಳ ಮುಂದಿನ ಪ್ರತ್ಯೇಕ ಶಿಲಾಫಲಕಗಳಲ್ಲಿ. "ಬಸದಿಯ ಕಂಬಗಳ ಮೇಲೆ, ಊರ ಹೊರಗಿನ ಹೊಲಗಳಲ್ಲಿ ನೆಟ್ಟ ಕಲ್ಲುಗಳಲ್ಲಿ, ಬಂಡೆಗಳ ಮೇಲೆ"[೧] ಕಾಣಿಸಿಕೊಳ್ಳುತ್ತವೆ. ಶಾಸನಗಳಲ್ಲಿ ನಿಶೀಧಿಕಾ, ನಿಶಿದಿ, ನಿಶಿಧಿ, ನಿಶಿಧಿಗೆ ಎಂಬ ಉಲ್ಲೇಖಗಳು ಕಂಡು ಬರುತ್ತವೆ. ಸರಿಯಾದ ರೂಪ, ಸರಿಯಾದ ಅರ್ಥ ಇನ್ನು ಸ್ಪಷ್ಟವಾಗಿ ತಿಳಿದು ಬಂದಿಲ್ಲ. "ಸದ್ ಧಾತುವಿನಿಂದ ಉತ್ಪನ್ನವಾಗುವ ನಿಷತ್ತಿ, ನಿಷಾದಿನ್ ಪದಗಳಿಗೆ ಕುಳಿತುಕೊಳ್ಳುವಿಕೆ, ವಿಶ್ರಮಿಸುವಿಕೆ ಎಂದು ಅರ್ಥ. ಇದರಿಂದ ಹೊರಡುವ ನಿಷೀಧಿಕಾ ಎಂಬುದೇ ಸರಿಯಾದ ರೂಪವೆಂದೂ ವ್ರತದಾರಿ ಕುಳಿತ ಸ್ಥಳದಲ್ಲಿ ಮಾಡಿದ ಗುರುತು"[೨] ಎಂಬುದು ಇದರ ಅರ್ಥವೆಂದು ಕೆಲವರು ಹೇಳುತ್ತಾರೆ. ಇಂತಹ ನಿಷಧಿಗಳ ಉಲ್ಲೇಖ ಸಗರ ನಾಡಿನ ಶಾಸನಗಳಲ್ಲಿ ಕಂಡು ಬರುತ್ತವೆ. "ಮಾಘಣಂದಿ ಸಿದ್ಧಾಂತ ದೇವರ ಶಿಷ್ಯ ಚಂದ್ರದೇವನಂದಿಯ ನಿಷಧಿಕಾ ಸ್ಥಂಭ"[೩]ವನ್ನು ಹೊನಗುಂದದ ಮಹಾಪ್ರಭು ಬಿಸಣಿ ಹನುಮಂತ, ಚೌಧೊರೆಯ ಸೋಜ ನಾಚಯ್ಯ ಮೊದಲಾದವರು ಸೇರಿ ಪ್ರತಿಷ್ಠಾಪನೆ ಮಾಡಿದ್ದು ಕೆಂಭಾವಿ ಶಾಸನದಿಂದ ತಿಳಿದು ಬರುತ್ತದೆ. ಸಮಾಧಿ- ಮರಣ ವಿಧಿಯನ್ನು ಕೇವಲ ಪುರಷರಷ್ಟೆ ಅಲ್ಲದೆ, ಸ್ತ್ರೀಯರು ತೆಗೆದುಕೊಳ್ಳುತ್ತಿದ್ದರು. ಸ್ತ್ರೀಯರು ಜೈನ ಧರ್ಮವನ್ನು ಸ್ವೀಕರಿಸಿ, ಸಲ್ಲೇಖನ ವೃತದಿಂದ ಸಮಾಧಿ-ಮರಣ ಹೊಂದುತ್ತಿದ್ದರು. ಇವರ ಸ್ಮರಣಾರ್ಥವಾಗಿ ನಿಲ್ಲಿಸದ ಶಿಲ್ಪಗಳೇ ನಿಷಿಧಿಗಳು. ಇಂತಹ ಕೆಲ ಉದಾಹರಣೆಗಳು ಸಗರ ನಾಡಿನಲ್ಲಿ ಕಂಡು ಬರುತ್ತವೆ. ಕನಕಸಿರಿಯಬ್ಬೆಯು ಜೈನಯತಿಯಾಗಿ ಸಲ್ಲೇಖನ ವೃತವನ್ನು ಮಾಡಿ, ಸಮಾಧಿ – ಮರಣ ಹೊಂದಿದ್ದಳು. ಇವಳ ಪ್ರತಿಮೆಯನ್ನು "ಗುಡ್ಡ ಮಾದವ ಎಂಬುವವನು ನಿಶಧಿ ಪ್ರತಿಮೆ"[೪] ಮಾಡಿಸಿದ್ದು ಕುಳಗೇರಿ ಶಾಸನದಿಂದ ತಿಳಿದು ಬರುತ್ತದೆ. ಇದೇ ರೀತಿ ಇನ್ನೊರ್ವ ಜೈನ ಯತಿಯಾದ ಸೋಮಸಿರಿಯವ್ವೆಯು ಕೂಡ ಸಲ್ಲೇಖನ ವೃತದಿಂದ ಸಮಾಧಿ-ಮರಣ ಹೊಂದಿದ್ದಳು. ಇವಳ ಸ್ಮರಣಾರ್ಥವಾಗಿ ಭೀಮಾನದಿ ತೀರದಲ್ಲಿ ಫಿರೋಜಾಬಾದ ಹತ್ತಿರ ನಿಶಿಧಿ ಶಿಲ್ಪಿ ಪ್ರತಿಷ್ಠಾಪಿಸಿದ ಉಲ್ಲೇಖ ಕುಳಗೇರಿ ಶಾಸನದಿಂದ ತಿಳಿದು ಬರುತ್ತದೆ.

## ಸಂಘ–ಗಣ–ಗಚ್ಛ–ಅನ್ವಯ :

ಪ್ರಾಚೀನ ಕರ್ನಾಟಕದಲ್ಲಿ ಹೆಚ್ಚು ಪ್ರಸಿದ್ಧಿಯನ್ನು ಪಡೆದಿದ್ದ ಜೈನ ಧರ್ಮದ ದಿಗಂಬರ ಪಂಥ ಸಗರನಾಡಿನಲ್ಲಿ ಪ್ರಚಾರದಲ್ಲಿತ್ತು. ಈ ಪಂಥ ಒಂದೇ ಆಗಿದ್ದರೂ ಅದರಲ್ಲಿ ಸಂಘ–ಗಣ–ಗಚ್ಛ–ಅನ್ವಯ ಎಂಬ ಭೇದಗಳಿದ್ದವು. ಇವುಗಳ ಹುಟ್ಟು ಮತ್ತು ಒಂದರಿಂದ ಇನ್ನೊಂದಕ್ಕಿರುವ ವ್ಯತ್ಯಾಸ ಸ್ಪಷ್ಟವಾಗಿ ತಿಳಿದುಬಂದಿಲ್ಲ. ಗಣ, ಗಚ್ಛಗಳು ಆಯಾ ಪಂಗಡ, ವ್ಯಕ್ತಿ ಹಾಗೂ ವಾಸ ಸ್ಥಳಗಳು ಬೇರೆಯಾಗಿದ್ದವು. ಸಗರನಾಡಿನ "ಮೂಲ ಸಂಘ, ಸರಸ್ವತಿ ಗಚ್ಚ ಬಲಾತ್ಕಾರಗಣ, ಕೊಂಡಕುಂದಾನ್ವಯ ರಾಯರಾಜಗುರು ಮಂಡಲಾಚಾರ್ಯ್ಯ ಶ್ರೀವಾದಿಂದ್ರ ವಿಶಾಲಕೀರ್ತಿಯತಿ ಅಮರಕೀರ್ತಿ, ಭಟ್ಟಾರಕ ಮಾಘಣಂದಿ ಸೈದ್ಧಾಂತಿಕ ಚಂದ್ರದೇವ"[೧೦] ಎಂಬ ಉಲ್ಲೇಖವಿದೆ. ಕೊಂಡ ಕುಂದಾಚಾರ್ಯ ಪರಂಪರೆಯ ಪಿಚ್ಛಾರಗಣ, ದೇಸಿಗಣ ಎಂಬ ಉಲ್ಲೇಖ ಕುಳಗೇರಿ ಶಾಸನದಿಂದ ತಿಳಿದು ಬರುತ್ತದೆ. ಹಗರಟಗಿ ಶಾಸನದಲ್ಲಿ ಗೋಮಿನಿ ಅನ್ವಯದ ಉಲ್ಲೇಖವಿದೆ. ಇವುಗಳಲ್ಲಿ ಕೊಂಡ ಕುಂದಾನ್ವಯ ವ್ಯಕ್ತಿಯಾದರೆ, ಗೋಮಿನಿಗಳು ಸ್ಥಳ ವಾಚಕಗಳಾಗಿವೆ. ಹೀಗೆ ಗಣ–ಗಚ್ಛ–ಅನ್ವಯಗಳ ಉಲ್ಲೇಖ ಕೆಂಬಾವಿ, ಹಗರಟಗಿ, ರಾಜನಕೊಳೂರು ಶಾಸನಗಳಲ್ಲಿ ಕಂಡು ಬರುತ್ತದೆ.

ಪಾರ್ಶ್ವನಾಥ ಹಾಗೂ ಮಹಾವೀರರ ಕಾಲದಲ್ಲಿನ ಗ್ರಂಥಗಳಿಗೆ ನಿರ್ಗ್ರಂಥ ಧರ್ಮ ಎಂದು ಕರೆಯಲಾಗುತ್ತದೆ. ಮಹಾವೀರನು ಜೈನ ಧರ್ಮದ ತತ್ವಗಳನ್ನು ಜನ ಸಮಾನ್ಯರಿಗೆ ತಿಳಿಸಲು 'ಜೈನ ಸಂಘ' ಗಳನ್ನು ಸ್ಥಾಪಿಸಿದನು. ಆರ್ಯಿಕಾ (ಗ್ರಹತ್ಯಾಗಿಗಳು) ಶ್ರಾವಕ – ಶ್ರಾವಿಕಾ (ಗ್ರಹಸ್ಥರು) ಎಂಬ ಎರಡು ವರ್ಗಗಳಿಂದ ಕೂಡಿತ್ತು. ಜೈನ ಧರ್ಮ ಮುಂದೆ ಮಹಾವೀರನ ನಿರ್ಮಾಣದ ನಂತರ 'ಶ್ವೇತಾಂಬರ ಮತ್ತು 'ದಿಗಂಬರ' ಎಂಬ ಎರಡು ಪಂಥಗಳಲ್ಲಿ ವಿಭಜನೆ ಹೊಂದಿತ್ತು. ಶ್ವೇತಾಂಬರ ಪಂಥವು ಉತ್ತರ ಭಾರತದಲ್ಲಿಯೂ, ದಿಗಂಬರ ಪಂಥವು ದಕ್ಷಿಣ ಭಾರತದಲ್ಲಿ ಪ್ರಚಾರದಲ್ಲಿತ್ತು. ದಿಗಂಬರ ಪರಂಪರೆಯಲ್ಲಿ ಅತ್ಯಂತ ಪ್ರಾಚೀನವು ಮೂಲವು ಆದ ಸಂಘವನ್ನು ಮೂಲ ಸಂಘ ಎಂದು ಕರೆಯಲಾಗಿದೆ.

ಜೈನ ಮುನಿಗಳ ವಿವಿಧ ಗುಂಪುಗಳನ್ನು 'ಸಂಘ' ಎಂದು ಕರೆಯಲಾಗಿದೆ. ದ್ರಾವಿಡ ಸಂಘ, ನಂದಿ ಸಂಘ, ಮುಂತಾದ ಸಂಘಗಳು ಕಂಡು ಬರುತ್ತವೆ. ಜೈನ ಧರ್ಮ ಎರಡು ಪಂಥಗಳಾಗಿ ವಿಭಜನೆಯಾದ ನಂತರ ಯಾಪನೀಯ ಎಂಬ ಇನ್ನೊಂದು ಪಂಥ ಜೈನ ಧರ್ಮದಲ್ಲಿ ಕಂಡು ಬರುತ್ತದೆ. ಯಾಪನೀಯ ಸಂಘ ಕ್ರಿ.ಶ. ೩ನೇ ಶತಮಾನದಲ್ಲಿರಬಹುದಾದ ಶ್ವೇತಾಂಬರ ಆಚಾರ್ಯನಾದ ಕಲಶ ಎಂಬುವವನಿಂದ, ಹುಟ್ಟಿತ್ತೆಂದು ತಿಳಿದು ಬರುತ್ತದೆ. ಆದರೆ ಯಾಪನೀಯ ಸಂಘವು ಶ್ವೇತಾಂಬರ, ದಿಗಂಬರ ಎರಡು ಪಂಥಗಳ ಸಮನ್ವಯಕ್ಕೆ ಕಾರಣವಾದ ಒಂದು ಪ್ರತ್ಯೇಕ ಪಂಥ ಎಂದು ವಿದ್ವಾಂಸರು

ತಿಳಿಸಿದ್ದಾರೆ. "ಯಾಪನೀಯ ಜ್ಞಾಪಕ(?)> "ಜಾಮಲಿ-ಆಮಲಿ, ಯಾಪನೀಯ (ಸಂ) ಜಿವನಿಜ್ಜ (ಪಾ)-ಯಮುನೀಯ ಯಾಪನೀಯ"[೧೧] ಈ ಕಾಲದಲ್ಲಿ ಸಂಘ ಪ್ರಸಿದ್ಧಿ ಪಡೆದಿತ್ತು ಎಂಬುದು ಶಾಸನಗಳಿಂದ ತಿಳಿದು ಬರುತ್ತದೆ. "ಇಂಗಳೇಶ್ವರ ಬಳಿ ಹೊಲಿಸೆಟ್ಟಿಯ ಜಿನಾಲಯದಲ್ಲಿ ಮೂಲಸಂಘ ಕೊಂಡಕುಂದಾನ್ವಯ ದೇಸಿಯಗಣ ದೇವ ಭಟ್ಟಾರಕರನ್ನು"[೧೨] ಉಲ್ಲೇಖಿಸುವ ಶಾಸನವಿದೆ. ಕುಳಗೇರಿಯ ಇನ್ನೊಂದು ಶಾಸನ "ಕೊಂಡ ಕುಂದಾನ್ವಯದ ಮೂಲ ಸಂಘದ ದೇಸಿಯಗಣದ ಅಭಯಮತಿಯ ಪ್ರಿಯಶಿಷ್ಯ ಕನಕಸಿರಿಯತಿಯಳನ್ನು"[೧೩] ಉಲ್ಲೇಖಿಸುವ ಶಾಸನವಿದೆ. ಒಟ್ಟಾರೆ ಜೈನಧರ್ಮ ಈ ನಾಡಿನಲ್ಲಿ ಪ್ರಾಮುಖ್ಯತೆ ಪಡೆದದ್ದು ತಿಳಿದು ಬರುತ್ತದೆ. ಸಗರನಾಡಿನಲ್ಲಿ ದೊರೆತ ಶಾಸನಗಳೆಲ್ಲ ಕ್ರಿ.ಶ. ೧೦೪೦ ರ ಅವಧಿಯಲ್ಲಿದ್ದರಿಂದ ಜೈನ ಮತಕ್ಕೆ ಪೆಟ್ಟು ಬಿದ್ದು, ಅವನತಿ ಅಂಚಿನೆಡೆಗೆ ಸಾಗಿತು. ಕಾಲ ಕ್ರಮೇಣ ಶೈವ ಧರ್ಮ ಬೆಳೆಯಿತು.

## ೬.೩ ಶೈವ-ಧರ್ಮ :

ಸಗರ ನಾಡಿನ ಶಾಸನಗಳಲ್ಲಿ ಶೈವಧರ್ಮದ ಕಾಲದಲ್ಲಿ ರಚನೆಗೊಂಡಿರುವ ಶಾಸನಗಳು ಈ ಉಕ್ತಿಯಿಂದಲೇ ಪ್ರಾರಂಭವಾಗಿರುವುದು ಕಂಡು ಬರುತ್ತದೆ. ಪ್ರಾಚೀನ ಕಾಲದಿಂದಲೂ ಅಸ್ತಿತ್ವದಲ್ಲಿರುವ ಧರ್ಮ ಶೈವಧರ್ಮ .

"ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರ ಚಾರವೇ
ತ್ರೈಲೋಕ್ಯ ನಗರಾರಂಭ ಮೂಲಸ್ತಂಭಾಯ ಸಂಭವೇ ॥"

ಇದರ ಅರ್ಥ-"ಯಾರ ಶಿರಸ್ಸಿನಲ್ಲಿ ಚಂದ್ರನು ಮನೋಹರವಾದ ಚಾಮರದಂತಿದ್ದಾನೋ, ಯಾರು ಮೂರು ಲೋಕಗಳಿಗೂ ಆಧಾರ ಸ್ತಂಭದಂತಿದ್ದಾನೋ, ಆ ಶಂಭುವಿಗೆ ನಮಸ್ಕಾರಗಳು."[೧೪] ಎನ್ನುವುದರ ಮೂಲಕ ಶೈವ ಶಾಸನಗಳು ಪ್ರಾರಂಭಗೊಳ್ಳುತ್ತವೆ. ಶೈವ ಧರ್ಮದಲ್ಲಿ ಪಾಶುಪತ ಕಾಳಮುಖರು, ವೀರಶೈವರು ಪ್ರಮುಖರಾಗಿದ್ದರು. ಈ ನಾಡು ಕಾಳಾಮುಖ ಲುಕುಲೀಶ ಪಾಶುಪತಗಳ ಪ್ರಮುಖ ನೆಲೆಯಾಗಿತ್ತು. ಇದಕ್ಕೆ ಕಾರಣ ಇಲ್ಲಿನ ರಾಜಮನೆತನವದವರು, ಅವರ ಮಾಂಡಲಿಕರೂ ಶೈವ ಧರ್ಮದ ಶಾಖೆಗಳಿಗೆ, ಆಶ್ರಯ ನೀಡಿ ಗೌರವಿಸಿ, ಪ್ರೋತ್ಸಾಹಿಸಿದರು. ಮಠ-ಮಾನ್ಯ, ದೇವಾಲಯಗಳನ್ನು ಕಟ್ಟಿಸಿದರು. ಇನ್ನು ಮುಂದುವರೆದು ದಾನ-ದತ್ತಿಗಳನ್ನು ಕೊಟ್ಟಿದ್ದಾರೆ.

ಇದಕ್ಕೆ ಸಾಕ್ಷಿ ಎಂಬಂತೆ ಸಗರನಾಡಿನಾದ್ಯಂತ ಅಧಿಕ ಸಂಖ್ಯೆಯ ಶೈವ ದೇವಾಲಯಗಳು ಕಂಡು ಬರುತ್ತವೆ.

## ಲಕುಲೀಶ–ಪಾಶುಪತ–ಕಾಳಾಮುಖ :

ಲಕುಲೀಶ (ಲಾಕುಳ) ಪಾಶುಪತ, ಕಾಳಾಮುಖ, ಕಾಪಾಲಿಕ ಮುಂತದಾದವು ಶೈವ ಧರ್ಮದ ಪಂಥಗಳಾಗಿವೆ. ಈ ಎಲ್ಲಾ ಪಂಥದ ಅನುಯಾಯಿಗಳು ಶಿವನನ್ನೇ ಅರಾಧಿಸುತ್ತಿದ್ದರು. ಗುರು ಪರಂಪರೆ ಮತ್ತು ಧಾರ್ಮಿಕ ಪದ್ಧತಿಗಳ ಆಧಾರದ ಮೇಲೆ ಈ ಪಂಥಗಳು ಹುಟ್ಟಿಕೊಂಡವು ಎಂದು ಹೇಳಬಹುದಾಗಿದೆ. ಈ ಪಂಥಗಳಲ್ಲಿರುವ ವ್ಯತ್ಯಾಸ ಹೇಳುವುದು ಕಷ್ಟಕರವಾದುದು. ಏಕೆಂದರೆ ಇವರು ತಮ್ಮ ಸಾತ್ವಿಕ ಆಚರಣೆಗಳಿಂದ ಒಂದೇ ಗುಂಪಿಗೆ ಸೇರುತ್ತಾರೆ. ಇಂತಹ ಉಲ್ಲೇಖಗಳು ಸಗರನಾಡಿನ ಶಾಸನದಿಂದ ತಿಳಿದು ಬರುತ್ತದೆ. ಲಾಕುಳ ಸಮಯ ಎಂಬುದು ಶೈವ ಧರ್ಮಕ್ಕಿರುವ ಇನ್ನೊಂದು ಹೆಸರು "ಲಕುಲೀಶ ಎಂಬುದು ಒಬ್ಬ ವ್ಯಕ್ತಿಯನ್ನು ಸೂಚಿಸುತ್ತದೆ. ಶಿವನು ಲಕುಲೀಶನಾಗಿ ಅವತರಿಸಿದ ಕಾಯಾವರೋಹಣವು ಗುಜರಾತಿನ ಕಾರ್ವಾಣ್ ಎಂಬ ಹಳ್ಳಿಯೆಂದು"[೧೫] ಗುರುತಿಸಲಾಗಿದೆ. ನಕ್ಲೇಶ್ವರ (ಲಕುಲೀಶ್ವರ) ಎಂಬ ದೇವಾಲಯವಿದೆ. ಲಕುಲೀಶನ ವಿಗ್ರಹಗಳ ಎರಡೂ ಕೈಯಲ್ಲಿ ಒಂದು ಕಡೆ ಹಣ್ಣು, ಇನ್ನೊಂದು ಕಡೆ ಲಕುಲ (ದಂಡ) ಹಿಡಿದಿರುವ ಶಿಲ್ಪ ಶಿರವಾಳದಲ್ಲಿದೆ. ಹೀಗಾಗಿ ಲಕುಲೀಶ ಮತವು ಸಗರನಾಡಿನಲ್ಲಿ ಪ್ರಾಮುಖ್ಯತೆ ಪಡೆದಿತ್ತು ಎಂಬುದು ತಿಳಿದು ಬರುತ್ತದೆ.

ಪಾಶುಪತವು ಮಹಾಭಾರತದಲ್ಲಿ ಹೇಳಿರುವ ಐದು ಸಿದ್ಧಾಂತಗಳಲ್ಲಿ ಇದು ಒಂದು. ಇದರ ಒಟ್ಟು ಸಾರ ಈ ರೀತಿ ಒಳಗೊಂಡಿದೆ. "ಒಬ್ಬೊಬ್ಬ ಜೀವಿಯೂ ಪಶು, ಅವನನ್ನು ಕಟ್ಟಿ ಹಾಕಿರುವುದು ಪಾಶ. ಜೀವಿಗಳ ಒಡೆಯ ಪಶುಪತಿ. ಪಾಶವನ್ನು ಕತ್ತರಿಸಲು (ಪಶು ಪಾಶ ವಿಮೋಕ್ಷಣ) ಪಶುಪತಿ ಅಥವಾ ಮಹೇಶ್ವರನಿಗೆ ಶರಣು ಹೋಗಬೇಕು. ಪಾಶುಪತ ವ್ರತವನ್ನು ಅಂಗೀಕರಿಸಿ ಆಚರಿಸಬೇಕು."[೧೬] ಪಾಶುಪತದ ಅನುಯಾಯಿಗಳು ಮಹೇಶ್ವರರೆಂದು ಪ್ರಸಿದ್ಧರಾದರು. ಈ ರೀತಿ ಲಕುಲೀಶ–ಪಾಶುಪತರ ಉಲ್ಲೇಖಗಳು ಸಗರನಾಡಿನಲ್ಲಿ ಕಂಡು ಬರುತ್ತವೆ. ಇವರ ಗುರು ರೇವಣಸಿದ್ಧ ಈತನ ವರ್ಣನೆ ಬಹಳ ಸುಮಧುರವಾಗಿ ಈ ರೀತಿ ಮೂಡಿ ಬಂದಿದೆ.

"ತೊರೆ ತುಂಬಿ ಬಂದಡರೆ ತಾ

ಹರಗೋಲಂ ತನ್ನಿವೆನ್ನದಾಜ್ಞಾಬಲದಿಂ ॥

ತೊರೆಯಂ ದಾಂಟುವನಿಂತರೆ

ರರುಪಿನ ತತುಕಾರನೀತ ರೇವಣದೇವಂ ॥"[೧೭]

ಹತ್ತನೇ ಶತಮಾನದ ಬಾಸರ್ವಜ್ಞ ತನ್ನ ಗಣಕಾರಿಕಾ ವ್ಯಾಖ್ಯಾನದಲ್ಲಿ ಸಾಯಣ ಮಾಧವ ತನ್ನ ಸರ್ವದರ್ಶನ ಸಂಗ್ರಹದಲ್ಲಿ ಕಾರ್ಯ, ಕಾರಣ, ಯೋಗ, ವಿಧಿ, ದುಃಖಾಂತ ಎಂಬ ಲಕುಲೀಶ ಪಾಶುಪತರ ಪಂಚ ತತ್ವಗಳನ್ನು ತಿಳಿಸಿದ್ದಾರೆ.

ಕಾಳಾಮುಖರೆಂಬುದೂ ಲಾಕುಳ ಅಥವಾ ಪಾಶುಪಾತರರಿಗಿರುವ ಇನ್ನೊಂದು ಹೆಸರು. ಡಾ. ಆರ್.ಜಿ. ಭಂಡಾರಕರ್ ಅವರು ಕಾಳಾಮುಖರೂ, ಕಾಪಾಲಿಕರೂ ಒಂದೇ ಎಂದು ಹೇಳುತ್ತಾರೆ. ಇದಕ್ಕೆ ಭಿನ್ನವಾಗಿ "ಡಾ॥ ಚಿದಾನಂದ ಮೂರ್ತಿಯವರು ಕಾಪಾಲಿಕರದು ಸಂಪೂರ್ಣವಾಗಿ ವಾಮಾಚಾರಗಳ ಪಂಥವಾದರೆ, ಕಾಳಾಮುಖರದು ಶುದ್ಧ ಸಾತ್ವಿಕಾಚರಣೆಗಳ ಪಂಥ"[೧೮] ಕನ್ನಡದ ಯಾವ ಶಾಸನಗಳಲ್ಲಿಯೂ ಕಾಳಾಮುಖರನ್ನು ಕಾಪಾಲಿಕರೆಂದು ಕರೆದಿಲ್ಲವೆಂಬುದು ಸ್ಪಷ್ಟಪಡಿಸುತ್ತದೆ. ಅಲ್ಲದೆ ಇವರು ಪಾಶುಪತ ಲಾಕುಳ ವರ್ಗಕ್ಕೆ ಸೇರಿದವರೆಂಬುದು ಇನ್ನು ಪುಷ್ಠಿ ನೀಡುತ್ತದೆ. ಕಾಳಾಮುಖರು ಮುಖದ ಮೇಲೆ ಕಪ್ಪು ಗೆರೆಗಳನ್ನು (ಭಸ್ಮ) ಹಚ್ಚಿಕೊಳ್ಳುತ್ತಿದ್ದರಿಂದ ಇವರನ್ನು ಕಾಳಾಮುಖ ಎಂದು ಗುರುತಿಸಲಾಯಿತು.

ಲಕುಲೀಶ-ಪಾಶುಪತ ಮತ್ತು ಕಾಳಾಮುಖ ಎಂಬ ಶೈವ ಪಂಥಗಳನ್ನು ಬೇರೆ-ಬೇರೆ ಎಂದು ಯಾವ ಶಾಸನಗಳು ಸ್ಪಷ್ಟವಾಗಿ ಹೇಳಿಲ್ಲ. ಕಾಳಾಮುಖ ಶೈವ ಗುರುಗಳ ಹೆಸರುಗಳು ಪಂಡಿತ, ಶಕ್ತಿ, ಭಟ್ಟಾರಕ, ಜೀಯ, ದೇವ ಎಂಬ ಪದದಿಂದ ಕೊನೆಗೊಳ್ಳುತ್ತದೆ. ಇದರಲ್ಲಿ ಹೆಚ್ಚಾಗಿ ಶಕ್ತಿ ಪಂಡಿತ ಹಾಗೂ ಪಂಡಿತದೇವ ಎಂಬ ಉಲ್ಲೇಖ ಶಾಸನಗಳಲ್ಲಿ ಕಂಡುಬರುತ್ತವೆ. ಕಾಳಾಮುಖ ಗುರುಗಳನ್ನು ಶಾಸನಗಳು ತಪೋಧನರು ಎಂದು ಉಲ್ಲೇಖಿಸಿವೆ. ಈ ರೀತಿ ಸಗರನಾಡಿನ ಶಾಸನ ಲಕುಲೀಶ – ಪಾಶುಪತ-ಕಾಳಾಮುಖ ಶೈವ ಗುರುಗಳು ಅಥವಾ ಅಚಾರ್ಯರನ್ನು ಈ ಮುಂದಿನಂತೆ ಸಂಕ್ಷಿಪ್ತವಾಗಿ ನೋಡಬಹುದು. ದೇವಾಲಯ ನಿರ್ಮಾಣ, ಮಠಗಳ ಸ್ಥಾಪನೆ, ನಾಡಿನ ಜನತೆಗೆ ಶಿಕ್ಷಣ ನೀಡುವುದು, ಸಾಮಾಜಿಕ ಹಾಗೂ ಧಾರ್ಮಿಕ ಕಾರ್ಯಗಳಿಗೆ ಹೆಚ್ಚು ಗಮನ ನೀಡಿದ್ದಾರೆ. ಇದರಿಂದ ಇವರ ತ್ಯಾಗ, ಔದಾರ್ಯ ಈ ನಾಡಿನಲ್ಲಿ ಬಲವಾಗಿ ಬೆಳೆದು ಬರಲು ಸಾಧ್ಯವಾಯಿತು.

ಜೈನ ಗುರುಗಳು ತಮಗೆ ಸಂಬಂಧಿಸಿದ ಸಂಘ, ಗಣ, ಗಚ್ಛ, ಅನ್ವಯಗಳನ್ನು ಹೇಳಿಕೊಳ್ಳುವಂತೆ, ಶೈವಗುರುಗಳೂ ಸಹ ತಮ್ಮ ಹೆಸರಿನ ಹಿಂದೆ ಪರ್ಷೆ, ಆಮ್ನಾಯ, ಸಂತತಿಗಳೆಂದು ಹೇಳಿಕೊಳ್ಳುತ್ತಾರೆ. ಇವರಲ್ಲಿ ಅತ್ಯಂತ ಪ್ರಸಿದ್ಧರಾದವರೂ ಶಕ್ತಿಪರ್ಷೆ ಹಾಗೂ ಸಿಂಹಪರ್ಷೆಗಳು. ಇಂತಹ ಲಕುಲೀಶ–ಪಾಶುಪತದ ಪಳಮೇಲ ಸಿಂಹಪರ್ಷೆಯ ಮುಖ್ಯರಲ್ಲಿ ಮಲಿಯಾಳ––ಪಂಡಿತ ಹಾಗೂ ಈತನ ಶಿಷ್ಯ–ಪ್ರಶಿಷ್ಯರು ಈ ನಾಡಿನ ಉದ್ದಗಲಕ್ಕೂ ವ್ಯಾಪಕವಾಗಿ ಹರಡಿದ್ದು ಕಂಡು ಬರುತ್ತದೆ. ಮುದನೂರು ಹಾಗೂ ಯಡ್ರಾಮಿಗಳು ಇವರ ಪ್ರಮುಖ ಕೇಂದ್ರಗಳಾಗಿದ್ದವು. ಇವರಿಂದ ಶೈವಧರ್ಮ ನಾಡಿನಾದ್ಯಂತ ದಟ್ಟವಾಗಿ ಹಬ್ಬಿದೆ.




"ಕರ್ನಾಟಕದಲ್ಲಿ ಶಕ್ತಿಪರ್ಷೆಗಿಂತ ಪ್ರಾಚೀನವಾದದ್ದು ಸಿಂಹಪರ್ಷೆ"[೧೯] ಶಕ್ತಿಪರ್ಷೆಯು ಬಹುಶಃ ಅದು ಶಿವಪರ್ಷೆಯಾಗಿರಬೇಕು. "ಶಿವಮೊಗ್ಗದ ಕಿಟ್ಟಗಾವೆ ಶಕ್ತಿಪರ್ಷೆ ಶಾಖೆಯ ಕೇಂದ್ರಸ್ಥಾನವಾಗಿತ್ತು".[೨೦] ದಕ್ಷಿಣ ಕರ್ನಾಟಕದಲ್ಲಿಯೂ ಇದರ ಪ್ರಾಮುಖ್ಯತೆ ಇತ್ತು. ಉತ್ತರದಲ್ಲಿಯೂ ಈ ಶಾಖೆಯ ಪ್ರಭಾವ ಬೀರಿತು. ಇದಕ್ಕೆ ನಿದರ್ಶನವಾಗಿ ಸಗರ ನಾಡಿನ ಶಾಸನದಲ್ಲಿ ಉಲ್ಲೇಖ ಈ ರೀತಿ ಕಂಡು ಬರುತ್ತದೆ. ಕಿಟ್ಟಗಾವೆಯ ಭಟ್ಟ ಸಮುದ್ರಾದ ಶಿವಲಿಂಗಿ ಭಟ್ಟಾರಕರ ಶಿಷ್ಯ ತರ್ಕಶಾಸ್ತ್ರ, ನಾಡಿಶಾಸ್ತ್ರ ಪಂಡಿತನಾಗಿದ್ದನು. "ಯಮನಿಯಮ

ಸ್ವಾಧ್ಯಾಯ, ಧ್ಯಾನಧಾರಣ, ಮೋನಾನುಷ್ಠಾಣ, ಜಪಸಮಾಧಿ, ಷಡಂಗೋಪಹಾರಾದಿ ಸಂಪನ್ನನಾದ ಕಳೇಶ್ವರ ಪಂಡಿತನಿಗೆ ಕಾಸಕ್ಕಬ್ಬೆ"[೨೧] ಎನ್ನುವವಳು, ಆಹಾರಕ್ಕಾಗಿ ಬಿಟ್ಟ ದತ್ತಿಯನ್ನು ತಿಳಿಸುತ್ತದೆ.

ಮುದನೂರು ಲಕುಲೀಶ ಪಾಶುಪತದ ಎಳಮೇಲ ಸಿಂಹಪರ್ಷೆಯ ಕೇಂದ್ರಸ್ಥಾನವಾಗಿತ್ತು. ಎಳಮೇಲ ಸಿಂಹಪರ್ಷೆಯ ಮಲೆಯಾಳ ಪಂಡಿತನು ಮೂಲತಃ ಮುದನೂರ ತೀರ್ಥದ ರಾಮೇಶ್ವರದ ಮಲೆಯಾಳ ಪಂಡಿತನಾಗಿದ್ದನು. ಇದು ಜೇಡರದಾಸಿಮಯ್ಯನ ನೆಲೆಯೂ ಆಗಿತ್ತು. ಈತನಿಗಿಂತ ಪೂರ್ವದಲ್ಲಿಯೇ ಸಿಂಹಪರ್ಷೆಯ ಕೇಂದ್ರವಾಗಿತ್ತು. ಮಲೆಯಾಳ ಪಂಡಿತನು ಶೈವ ಧರ್ಮದಲ್ಲಿ ಪ್ರಸಿದ್ಧಿಯನ್ನು ಪಡೆದಿದ್ದನು. ಎಳಮೇಲ ಗ್ರಾಮಕ್ಕೂ ಹಾಗೂ ಈತನ ಹೆಸರಿಗೂ ಇರುವ ಸಂಬಂಧವನ್ನು ಶಾಸನಗಳಿಂದ ತಿಳಿದುಬರುತ್ತದೆ. ಈತನಿಗೆ ಆಲಮೇಲ ಎಂದು ಕರೆಯುಲಾಗುತ್ತಿತ್ತು. ಎಳೆಮೇಲಿ ಎಂಬುದರ ಶಾಸನೋಕ್ತ ಹೆಸರು ಎಳಮೇಲ. ಬಹುಶಃ ಇದು ಹಿಂದೆ ಎಳಮ ಎಂಬುವವನು ಒಂದು ಹಳ್ಳಿಯನ್ನು ನಿರ್ಮಿಸಿದನು. ಈ ಹಳ್ಳಿಯನ್ನೇ ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು "ಎಳಮೇಲ ಮೂವತ್ತನ್ನು ಅಂದರೆ ಮೂವತ್ತು ಹಳ್ಳಿಗಳ ಪ್ರದೇಶವನ್ನು ಶಿಲಾಹಾರರು (ಸಿಳಾರ) ಆಳುತ್ತಿದ್ದರು. ಕ್ರಿ.ಶ. ೧೦ಳಳ ಶಾಸನದಲ್ಲಿ"[೨೨] ಈ ಗ್ರಾಮದ ಹೆಸರು ಮೊಟ್ಟ ಮೊದಲ ಬಾರಿಗೆ ಕಂಡುಬಂದಿದೆ. ಹಾಗಾಗಿ ಸಿಂಹಪರ್ಷೆಯಲ್ಲಿ ಎಳಮೇಲ ಸಿಂಹಪರ್ಷೆ ಬಹಳ ಪ್ರಾಮುಖ್ಯತೆ ಪಡೆದಿದೆ. ಮಲೆಯಾಳ ಪಂಡಿತನು ಮುದನೂರ ರಾಮೇಶ್ವರ ದೇವಾಲಯದ ಅಚಾರ್ಯನಾಗಿದ್ದನೆಂದು ಮುದನೂರ ಶಾಸನದಿಂದ ತಿಳಿದು ಬರುತ್ತದೆ. ಆ ರಾಮೇಶ್ವರದ ಸ್ಮರಣೆಯೆಂಬಂತೆ ಎಳಮೇಲದಲ್ಲಿಯೂ ರಾಮೇಶ್ವರ ದೇವಾಲಯ ಕಟ್ಟಿಸಿದ್ದಾನೆ "ಶ್ರೀ ಮದೆಳಮೆಲ ಶ್ರೀ ಸಿಂಹಪರ್ಷೆ ಮಂಡಲಿ ಮಲೆಯಾಳ ಶಿಷ್ಯರಪ್ಪ"[೨೩] ಎಂಬ ಶಾಸನದ ಉಲ್ಲೇಖವನ್ನು ಗಮನಿಸಿದಾಗ, ಎಳಮೇಲಕ್ಕೆ ಸಂಬಂಧಿಸಿದ್ದು ಸಿಂಹಪರ್ಷೆಯೋ, ಮಲೆಯಾಳ ಪಂಡಿತರೋ ಎಂಬ ಸಂಶಯ ಮೂಡುತ್ತದೆ. ಇನ್ನು ಮುಂದುವರೆದು ಅಧ್ಯಯನ ಮಾಡಿದಾಗ, ಸಿಂಹಪರ್ಷೆಯೂ, ಮಲೆಯಾಳ ಪಂಡಿತರೂ ಎಳಮೇಲಿಗೆ ಸಂಬಂದಿಸಿದ್ದಾರೆ. ಎಂಬ ಅರ್ಥ ಕೊಡುತ್ತದೆ. ಇದರಿಂದ ಈ ಶಾಖೆ ನಾಡಿನಾದ್ಯಂತ ಪ್ರಸಿದ್ಧಿ ಪಡೆದಿದೆ. "ಎಳಮೇಲ ತರ್ದವಾಡಿ ಸಾಸಿರದ ಕಂಪಣ ಎಳಮೇಲ ೩೦ರ ಮುಖ್ಯಸ್ಥಳವಾಗಿದ್ದು, ವಿಜಾಪುರ ಜಿಲ್ಲೆಯ ಸಿಂದಗಿ ತಾಲೂಕಿನ ಆಲಮೇಲ"[೨೪] ಗ್ರಾಮವೇ ಎಳಮೇಲವಾಗಿತ್ತು. ಬೈಸಂಬಾಳವು ಕೂಡ ಎಳಮೇಲ ಸಿಂಹಪರಿಷನ್ಮಂಡಲಿಯ ಶಾಖೆಯಾಗಿತ್ತು. ಇಲ್ಲಿ ತೇಜೋರಾಶಿ ಪಂಡಿತರು ರಾಚ್ಚೇಶ್ವರ ದೇವಾಲಯದಲ್ಲಿದ್ದರು. ಕಾಳಾಮುಖ ಶೈವ ಬ್ರಹ್ಮಚಾರಿಯಾದ ಮಲ್ಲಿಕಾರ್ಜುನ ಪಂಡಿತನು. ಇಜೇರಿಯ ಶಂಕರನಾರಾಯಣ

ದೇವಾಲಯದ ಆಚಾರ್ಯನಾಗಿದ್ದನು. ಶ್ರೀ ಕಾಳಾಮುಖ ತಪೋಧನಾಗ್ರ ಗಣ್ಯರಪ್ಪ ಕೆಸ್ದಿಲೆಯ ಶಿತಗಿಸದೇವರು ಧರಿಯಾಪುರದಲ್ಲಿ ಕೆರೆಯನ್ನು ಕಟ್ಟಿಸಿದ್ದಾನೆ.

ಈ ರೀತಿ ಸಿಂಹಪರ್ಷೆ ಮಂಡಳಿಯ ಮಲೆಯಾಳ ಪಂಡಿತರ ಉಲ್ಲೇಖವು ಬಳ್ಳಾರಿ, ಧಾರವಾಡ, ಗುಲಬರ್ಗಾ ಜಿಲ್ಲೆಯ ಏವೂರ, ಬೈಚಬಾಳ, ಯಡ್ರಾಮಿ, ಮುದನೂರ, ಕೊಂಡಗುಳಿ ಗ್ರಾಮಗಳು ಶೈವ ಕೇಂದ್ರಗಳಾಗಿದ್ದವು. "ಕ್ರಿ.ಶ. ೧೦೨೬ ರ ಅಸುಂಡಿ (ಧಾರವಾಡ) ಶಾಸನದಲ್ಲಿ ದೇವಸಿಂಗಿ ಪಂಡಿತನು ಮಲೆಯಾಳ ಪಂಡಿತ ದೇವನ ಶಿಷ್ಯನಾಗಿದ್ದನು."[೨೫] ಇದರಿಂದ ಮಲೆಯಾಳ ಪಂಡಿತ ೧೦ನೇ ಶತಮಾನದವನು ಎಂಬುದು ಸ್ಪಷ್ಟವಾಗುತ್ತದೆ. ಈ ವೇಳೆಗೆ ಮುದುನೂರ ರಾಮೇಶ್ವರ ದೇವಾಲಯದ ಸ್ಥಾನಚಾರ್ಯನಾಗಿ, ಕೋಗಳಿ–೫೦೦ರ ಮಠದಾಚಾರ್ಯನಾಗಿದ್ದನು. ಈ ರೀತಿ ಶಾಸನಗಳಿಂದ ಮಲೆಯಾಳ ಪಂಡಿತನ ಉಲ್ಲೇಖಗಳು ಕಂಡು ಬರುತ್ತವೆ. ಅಲ್ಲದೆ ಈತನ ಶಿಷ್ಯ–ಪ್ರಶಿಷ್ಯರ ಉಲ್ಲೇಖಗಳು ಶಾಸನದಲ್ಲಿ ಈ ರೀತಿಯಾಗಿವೆ.

ತೇಜೋರಾಶಿ ಪಂಡಿತ, ಶ್ರೀಮದೀಶಾನರಾಶಿ ಪಂಡಿತ, ಜ್ಞಾನರಾಶಿ ಪಂಡಿತ, ದೇವರಾಶಿ ಪಂಡಿತ, ಅಮೃತರಾಶಿ ಪಂಡಿತ, ಈಶಾನ್ಯರಾಶಿ ಪಂಡಿತ, ಬ್ರಹ್ಮರಾಶಿ ಪಂಡಿತ, ಸೂರ್ಯರಾಶಿ ಪಂಡಿತರು ಬೈಚಬಾಳ, ಏವೂರು ಕನ್ನೆಳ್ಳಿ, ಹಾವಿನಾಳ, ಮುದನೂರು, ಕಕ್ಕೇರಿ, ಹಗರಟಗಿ ಶಾಸನಗಳಲ್ಲಿ ಕಂಡು ಬಂದರೆ, ಗೋಕರ್ಣರಾಶಿ ಪಂಡಿತ, ಬಲ್ಲಜಿ, ಅಮೃತರಾಶಿ ಪಂಡಿತ, ಚಂದ್ರಾಸಿ ಪಂಡಿತದೇವ, ಮೋನಿಪಂಡಿತರು ಹೆಮ್ಮಡಗಿ, ಯಡ್ರಾಮಿ ಮುದನೂರು, ಹಗರಟಗಿ ಶಾಸನದಲ್ಲಿ ಕಂಡು ಬರುತ್ತಾರೆ.

ಸಿಂಹಪರ್ಷೆ ಮಂಡಳಿಯ ಯತಿಯೊಬ್ಬನು ಲಕ್ಷ್ಮಣೇಶ್ವರ ದೇವಾಲಯದ ಸ್ಥಾನಾಚಾರ್ಯನಾಗಿದ್ದ ಎಂಬುದು ಯಡ್ರಾಮಿ ಶಾಸನದಿಂದ ತಿಳಿದುಬರುತ್ತದೆ. ಯಡ್ರಾಮಿಯಲ್ಲಿ ಶಿವದೇವಾಲಯವನ್ನು ಮೋನಿ ಪಂಡಿತ ಕಟ್ಟಿಸಿದನು. ಈತನ ವೈದ್ಯ ಸಾಮರ್ಥ ಹಾಗೂ ಯೋಗ ಸಂಪನ್ನತೆ ಬಗ್ಗೆ ಶಾಸನದಲ್ಲಿ ಈ ರೀತಿಯ ಉಲ್ಲೇಖವಿದೆ.

> "ದಕ್ಷಿಣವಾರಣಾಸಿಯೆನಿಸಿದೆಳರಾಮೆಗೆ ದಿವ್ಯಮೂರ್ತಿ
> ಪಾಪಕ್ಷಯ ಕಾವ್ದಿ ಜನ್ನದ ಬಾವಿಗೆ ಬಂದು ರಾಗದಿಂ
> ತ್ರ್ಯಕ್ಷನಿವಾಸ (ಮ)ನೆರಯೆ ಮಾಡುವೆಮೆಂದೆನಲೇಂ ಬ್ರತಗಳ (ನಿ)
> ಕ್ಷಯ ನುಡೆಮಾಡಿಸಿದನೇಂ ಕ್ರಿತ್ಯಪುಣ್ಯನೋ
> ಮೋನಿಪಂಡಿತ ॥

ಅ (ಟ) ಮದನ ವಿಷವಿದ್ಯಾನಿಪುಣಂ ಯಮನಿಯ (ಮ)

ನಿಯತ ಸರ್ವ್ವಯಶಃ ಶ್ರೀ ಆಪ್ತಲಲಾಮಂ ಶ್ರೀ ಮೋನಿ (ಪ)

ಣ್ಡಿತಂ ಪಣ್ಡಿತಾಬ್ಜವನ ಕಳಹಂಸ ||" ೨೬

ಈ ರೀತಿ ಸಿಂಹಪರ್ಷೆ ಮಲೆಯಾಳ ಪಂಡಿತನ ಶಿಷ್ಯ-ಪ್ರಶಿಷ್ಯರ ಪರಂಪರೆ ಈ ನಾಡಿನ ಶಾಸನಗಳಿಂದ ತಿಳಿದು ಬರುತ್ತದೆ. ಇವರು ದೇವಾಲಯ ಹಾಗೂ ಮಠದ ಆಚಾರ್ಯರು, ಸ್ಥಾನಾಚಾರ್ಯರು ಆಗಿದ್ದರು. ಹೋಮ, ಬಲಿ, ಭೂಮಿ, ಗದ್ದೆ, ತೋಟ, ನಿವೇಶನಗಳನ್ನು ದಾನವಾಗಿ ಕೊಟ್ಟಿದ್ದು ಕಂಡು ಬರುತ್ತದೆ. ತಪೋಧನರಾಗಿದ್ದ ಈ ಶಿಷ್ಯ-ಪ್ರಶಿಷ್ಯ ಪರಂಪರೆಯವರು ಮಠಗಳಲ್ಲಿ ವಾಸವಾಗಿದ್ದರು. ಇವರು ತಮ್ಮ ವರ್ತನೆಯಲ್ಲಿ ಗುಣಹೀನರಾಗಿ ವರ್ತಿಸಿದರೆ, ರಾಜ ಹಾಗೂ ನಾಡಿನ ಜನರು ಇವರನ್ನು ಮಠದಿಂದ ಹೊರಹಾಕುತ್ತಿದ್ದರು. ಇಂಥವರು ನಾಯಿ, ಕತ್ತೆ, ಹಂದಿಗೆ ಸಮಾನರೆಂದು ಭಾವಿಸುತ್ತಿದ್ದರು. ಇವರು ಸತ್ತರೆ, ನಾಯಿ ಸತ್ತಿದೆ, ಹಂದಿ ಸತ್ತಿದೆ ಎಂದು ಭಾವಿಸಬೇಕು ಎಂಬ ವಿಷಯ ಏವೂರು ಶಾಸನದಿಂದ ತಿಳಿದು ಬರುತ್ತದೆ. ಈ ರೀತಿ ಸಿಂಹಪರ್ಷೆ ಮಲೆಯಾಳ ಪಂಡಿತನ ಶಿಷ್ಯ-ಪ್ರಶಿಷ್ಯ ಪರಂಪರೆ ಸಗರನಾಡಿನ ಉದ್ದಗಲಕ್ಕೂ ಕಂಡು ಬರುತ್ತದೆ. ಶೈವ ಧರ್ಮ ಪ್ರಚಾರ ಮಾಡಿದ ಕೀರ್ತಿ ಇವರಿಗೆ ಸಲ್ಲುತ್ತದೆ.

ಸಿಂಹಪರ್ಷೆ ಮಲೆಯಾಳ ಪಂಡಿತನ ಪರಂಪರೆಯಲ್ಲಿ ಕ್ರಿ.ಶ. ೧೧೧೬ ಕ್ಕಿಂತ ಪೂರ್ವದಲ್ಲಿಯೇ ನಕುಲೀಶ ಪಾಶುಪತದಲ್ಲಿ ಅಭಿನವ ಪಾಶುಪತ ಎಂಬ ಹೊಸ ಶಾಖೆ ಹುಟ್ಟಿಕೊಂಡಿತೆಂದು ಕೊಂಡಗುಳಿ ಶಾಸನದಿಂದ ತಿಳಿದು ಬರುತ್ತದೆ. ಈ ಶಾಖೆ ಕೇವಲ "ಎಳಮೇಲ ಸಿಂಹಪಷೆಯ ಲಕುಲೀಶ-ಪಾಶುಪತ ಮಲೆಯಾಳ ಪಂಡಿತನ ಶಿಷ್ಯ-ಪ್ರಶಿಷ್ಯ ಪರಂಪರೆಗೆ ಮಾತ್ರ ಸಂಬಂಧಿಸಿದೆಂದು ಡಾ.ಬಿ.ಆರ್. ಹಿರೇಮಠರು" ಗುರುತಿಸಿದ್ದಾರೆ. ಮುದನೂರಿನ ಜೇಡರ ದಾಸಿಮಯ್ಯನ ಆರಾಧ್ಯದೈವ ರಾಮನಾಥ, ಈ ರಾಮನಾಥ "ಮಲೆಯಾಳ ಪಂಡಿತನ ಮುದನೂರ ತೀರ್ಥದ ರಾಮೇಶ್ವರ"೨೭ ಎಂಬುದು ಸ್ಪಷ್ಟಪಡಿಸುತ್ತದೆ. ಇದರೊಂದಿಗೆ ದಾಸಿಮಯ್ಯನ ಬಗ್ಗೆ ಉಲ್ಲೇಖಿಸುವ ಶಾಸನಗಳು ಕಂಡು ಬರುತ್ತವೆ.

ಗುಜೇಶ್ವರ, ಲಕ್ಷ್ಮಣೇಶ್ವರ ಎಂಬ ಸ್ಥಾವರಲಿಂಗ ಮತ್ತು ಬಲ್ಲಜೀಯ ಎಂಬ ನಕುಲೀಶ - ಪಾಶುಪತ ಹೆಸರುಗಳು ಜೇಡರ ದಾಸಿಮಯ್ಯನೂ ನಕುಲೀಶ - ಪಾಶುಪತನೆಂದು ಸೂಚಿಸುತ್ತವೆ. ದೇವಾಲಯಗಳನ್ನು ಕಟ್ಟಿಸುವುದು, ದಾನ-ದತ್ತಿಗಳನ್ನು ಬಿಡುವುದು, ಕೆರೆಗಳನ್ನು ಕಟ್ಟಿಸುವುದು, ಮಠಗಳಲ್ಲಿ ಶಿಕ್ಷಣ ನೀಡುವುದು, ಪಾಶುಪತ - ಕಾಳಾಮುಖರ ಪ್ರಮುಖ ಕರ್ತವ್ಯಗಳಾಗಿದ್ದವು. ಸಗರದ ನಕರೇಶ್ವರ ಮಠದ ಆಚಾರ್ಯ ಅನಂತ ಶಕ್ತಿ

ಸಿದ್ಧಾಂತ ದೇವರು, ಕಾಳಾಮುಖ ಮಹಾವ್ರತ ಪಾಶುಪತ ಶೈವ, ಶಿವ ಸಮಯ ಇವರೆಲ್ಲರೂ ಸಮಾನರೆನಿಸಿದ್ದರು. ಈ ಅಂಶವು ಶೈವ ಮತದ ವಿಭಿನ್ನ ಶಾಖೆಗಳಲ್ಲಿ ಹೆಚ್ಚಿನ ಭಿನ್ನತೆ, ವ್ಯತ್ಯಾಸಗಳಿಲ್ಲದಿರುವುದನ್ನು ಎತ್ತಿ ತೋರಿಸುತ್ತದೆ. ಇದೇ ಶಾಖೆಯಲ್ಲಿ ಮೂವರ ಕೋಣೆಮಠ ಲಾಕುಳ ಶೈವರ ಉಲ್ಲೇಖವು ಸಂಗಮ ಶಾಸನದಲ್ಲಿ ಈ ರೀತಿ ಕಂಡುಬರುತ್ತದೆ.

**ವಂಶಾವಳಿ**




ಈ ರೀತಿ ಲಕುಲೀಶ–ಪಾಶುಪತ–ಎಳಮೇಲ–ಸಿಂಹಪರ್ಷೆಯ ಮಲೆಯಾಳ ಪಂಡಿತದೇವನ ಶಿಷ್ಯ–ಪ್ರಶಿಷ್ಯ ಪರಂಪರೆಯೇ ಈ ಸಗರನಾಡು. ಮುದನೂರು – ಯಡ್ರಾಮಿಯಲ್ಲಿ ಇವರ ಹೆಚ್ಚಿನ ಪ್ರಾಬಲ್ಯ ಇರುವುದು ಶಾಸನಗಳಿಂದ ತಿಳಿದುಬರುತ್ತದೆ.

## ಸ್ಥಾನಚಾರ್ಯರು :

ಶೈವ ಧರ್ಮದ ದೇವಾಲಯಗಳಲ್ಲಿ ಸ್ಥಾನಾಚಾರ್ಯರಿದ್ದದ್ದು ಶಾಸನಗಳಿಂದ ತಿಳಿದು ಬರುತ್ತದೆ. ಲಕುಲೀಶ–ಪಾಶುಪತಗಳೇ ಈ ಸ್ಥಾನಾಚಾರ್ಯರು. ಯತಿಗಳು, ತಪೋಧನರು, ವಿದ್ಯಾರ್ಥಿಗಳು, ಅಧ್ಯಯನ, ಅಧ್ಯಾಪನ, ಮಾಡುವಾಗ ಕಡ್ಡಾಯವಾಗಿ ಬ್ರಹ್ಮಚರ್ಯವನ್ನು ಪಾಲಿಸಬೇಕಿತ್ತು. ಈ ನಿಯಮವನ್ನು ಉಲ್ಲಂಘಿಸಿದರೆ ಅವರನ್ನು ದೇವಾಲಯದಿಂದ ಹೊರ ಹಾಕಲಾಗುತ್ತಿತ್ತು. ಇಂತಹ ಉಲ್ಲೇಖ ಸಗರನಾಡಿನ ಏವೂರ ಶಾಸನದಲ್ಲಿ ಈ ರೀತಿಯಾಗಿ ಕಂಡು ಬರುತ್ತದೆ.

"ಈ ಸ್ಥಾನದ ಆಚಾರ್ಯ್ಯರಕ್ಕೆ ತಪೋಧನರಕ್ಕೆ
ನೈಷ್ಠಿಕ ಬ್ರಹ್ಮಚಾರಿಗಳ್ಗಲ್ಲದೆ ಮಠದೊಳಿರಲ್ಸಲ್ಲದು
ಬ್ರಹ್ಮಚರ್ಯ್ಯಮಿಲ್ಲದವರನೂರುಮಂ ನಕರಮುಮರಸುಮಿರ್ದು
ಪೊರಮಡಿಸಿ ಕಳೆವರ್ ಪೊರಮಡಲೊಲ್ಲದೆ ಮೊಣ್ಡುಯ
ತನಮಂಗೆಯ್ದರಪ್ಪೊಡೆ ಶ್ವಗಾರ್ದ್ದಭ ಚಣ್ಡಾಳರನ್ತುಮಲ್ಲದೆ ಕನ್ದಂ ॥
ಸ್ಥಾನಪತಿ ಗೊರವನಕ್ಕೀ ಸ್ಥಾನದ ಸಮಯಂಗಳಕ್ಕೆ
ರತಿಲಂಪಟನೀ ಸ್ಥಾನದೊಳಿರಲಾಗವನಂ ಸ್ಥಾನಮುಮರಸುಗಳು
–ಮಿರ್ದು ಕಳೆಯಲುವೇಳ್ಕುಂ ॥"[೨೮]

ಈ ಸಮಯದಲ್ಲಿ ಮಲೆಯಾಳ ಪಂಡಿತದೇವನು ಮುದುನೂರು ರಾಮೇಶ್ವರ ಮತ್ತು ಅಣ್ಣಿಗೆರೆಯ ನಕರೇಶ್ವರ ದೇವಾಲಯಗಳ ಸ್ಥಾನಚಾರ್ಯನಾಗಿದ್ದನು. ಇವರಲ್ಲಿ ತೇಜೋರಾಶಿ ಪಂಡಿತ ಕ್ರಿ.ಶ.೧೦೪೯–೧೦೮೨ರವರೆಗೆ, ಮುದನೂರು ರಾಮೇಶ್ವರ ದೇವಾಲಯದ ಸ್ಥಾನಾಚಾರ್ಯನಾಗಿದ್ದನು. ಈಶಾನ್ಯರಾಶಿ ಪಂಡಿತ ಕ್ರಿ.ಶ. ೧೦೭೭ ರಲ್ಲಿ ಏವೂರ ಸ್ವಯಂಭೂ ಸೋಮನಾಥ ದೇವಾಲಯದ, ಬಿಲ್ಲಜೀಯು ಕ್ರಿ.ಶ. ೧೧೬೭ ರಲ್ಲಿ ಮುದನೂರು ಲಕ್ಷ್ಮಣೇಶ್ವರ ದೇವಾಲಯದ, ಬ್ರಹ್ಮರಾಶೀ ಪಂಡಿತ "ಕ್ರಿ.ಶ. ೧೦೯೯ ರಲ್ಲಿ ಹಗರಟಿಗೆಯ ಉಗ್ರ ಭೀಮೇಶ್ವರ ದೇವಾಲಯದ, ಎರಡನೇ ಜ್ಞಾನರಾಶಿ ಪಂಡಿತ ಕ್ರಿ.ಶ. ೧೧೭೬ ರಿಂದ ೧೧೭೯ ರವರೆಗೆ ಏವೂರ ಸ್ವಯಂಭೂ ಸೋಮನಾಥ ದೇವಾಲಯದ ಸ್ಥಾನಚಾರ್ಯರಾಗಿದ್ದರು"[೨೯] ಎಂಬುದು ಸಗರ ನಾಡಿನ ಹಲವಾರು ಶಾಸನಗಳಿಂದ ತಿಳಿದು ಬರುತ್ತದೆ.

## ೬.೪. ವೈಷ್ಣವ–ಧರ್ಮ :

ಕ್ರಿ.ಶ.ಪೂರ್ವದಲ್ಲಿಯೇ ವೈಷ್ಣವ ಧರ್ಮ ಭಾರತದಲ್ಲಿ ನೆಲಯೂರಲಾರಂಭಿಸಿತು. ಈ ಧರ್ಮವು ಕ್ರಿ.ಶ. ನಾಲ್ಕನೇ ಶತಮಾನದ ಹೊತ್ತಿಗೆ ಕರ್ನಾಟಕದಲ್ಲಿ ಜನಪ್ರಿಯವಾಗಿ ಬೆಳೆಯ ತೊಡಗಿತು. ಬಾದಾಮಿಯ ಚಾಲುಕ್ಯರ ರಾಜನಾದ ಮಂಗಳೇಶನು ತನ್ನನ್ನು ಮಹಾಭಾಗವತ ಎಂದು ಹೇಳಿಕೊಳ್ಳುವುದರ ಮೂಲಕ ಬಾದಾಮಿಯಲ್ಲಿ ವೈಷ್ಣವ ದೇವಾಲಯ ಕಟ್ಟಿಸಿರುವ ಸಂಗತಿ ಇತಿಹಾಸದಿಂದ ತಿಳಿದುಬರುತ್ತದೆ. ಈ ನಾಡಿನಲ್ಲಿ ಶಿವ ಮತ್ತು ವಿಷ್ಣುವಿನ ಕುರಿತು ಸ್ತೋತ್ರಗಳು ಕಂಡು ಬರುತ್ತವೆ. ಇದನ್ನು ಗಮನಸಿದರೆ ಎರಡು ಧರ್ಮಗಳು ಒಂದರೊಡನ್ನೊಂದು ಹೊಂದಿಕೊಂಡು ಬೆಳೆದು ಬರುತ್ತಿದ್ದವೆಂಬುದು ವೇದ್ಯವಾಗುತ್ತದೆ. ಸಗರನಾಡಿನ ವೈಷ್ಣವ ಧರ್ಮದ ಶಾಸನಗಳೆಲ್ಲವು ಪ್ರಾರಂಭದಲ್ಲಿ ವಿಷ್ಣುವಿನ ಶ್ಲೋಕದೊಂದಿಗೆ ಪ್ರಾರಂಭಗೊಳ್ಳುತ್ತವೆ.

"ಜಯತ್ಯಾವಿಷ್ಕೃತಂ ವಿಷ್ಣೋರ್ವ್ವಾರಾಹಂ ಕ್ಷೋಭಿತಾರ್ಣ್ಣವಂ
ದಕ್ಷಿಣೋನ್ನತ ದಂಷ್ಟ್ರಗ್ರ ವಿಶ್ರಾಂತ ಭುವನಂ ವಪು ॥"।

"ಸಮುದ್ರವನ್ನು ಕ್ಷೋಭೆಗೊಳಿಸಿ ಭೂದೇವಿಯನ್ನು ತನ್ನ ಬಲ ಕೋರೆದಾಡೆಯ ಮೇಲೆ ಕುಳ್ಳಿರಿಸಿಕೊಂಡಿರುವ ವರಾಹ ರೂಪಿಯಾದ ವಿಷ್ಣುವಿಗೆ ಜಯವಾಗಲಿ"[೩೦] ಎಂದು ಹಾರೈಸುವ ಶಾಸನಗಳು ಕಂಡು ಬರುತ್ತವೆ. ಸಗರನಾಡಿನಲ್ಲಿ ವೈಷ್ಣವ ಮತ ವ್ಯಾಪಕವಾಗಿ ಬೆಳೆದಿತ್ತು ಎನ್ನುವುದಕ್ಕೆ ಈ ಶ್ಲೋಕವೇ ನಿದರ್ಶನ. ಇಲ್ಲಿಯ ಶಾಸನಗಳೇ ಆಧಾರಗಳಾಗಿವೆ. ಅಗ್ರಹಾರ, ಬ್ರಹ್ಮಪುರಿ ಮತ್ತು ಮಹಾಜನರೇ ಇದಕ್ಕೆ ಸಾಕ್ಷಿ. ಪ್ರಾಚೀನ ಕರ್ನಾಟಕದ ಚರ್ತುವರ್ಣ ಪದ್ಧತಿಯಲ್ಲಿ ಬ್ರಾಹ್ಮಣರು ಸಮಾಜದಲ್ಲಿ ಉನ್ನತಸ್ಥಾನ ಪಡೆದಿದ್ದರು. ಸಗರನಾಡಿನಲ್ಲಿ ಆಳ್ವಿಕೆ ಮಾಡಿದ ರಾಜರು ಮೂಲತಃ ಬೇರೆ–ಬೇರೆ ಮತಗಳ ಅನುಯಾಯಿಗಳಾಗಿದ್ದರೂ, ವೈಷ್ಣವ ಮತಕ್ಕೂ ಆದ್ಯತೆ ನೀಡಿದರು. ಹಾಗಾಗಿ ಈ ಧರ್ಮಕ್ಕೆ ಆದ್ಯತೆ ದೊರಕಿತು. ಅಂತೆಯೇ ಬ್ರಾಹ್ಮಣರು ಧಾರ್ಮಿಕ ಕಾರ್ಯದಲ್ಲಿ ಅಷ್ಟೇ ಅಲ್ಲ, ಇತರ ಕ್ಷೇತ್ರಗಳಲ್ಲಿ ಕಾರ್ಯ ನಿರ್ವಹಿಸಿದ್ದು ಶಾಸನಗಳಿಂದ ತಿಳಿದು ಬರುತ್ತದೆ. ಬ್ರಾಹ್ಮಣರು ರಾಜನ ಆಸ್ಥಾನದಿಂದ ಹಿಡಿದು ಗ್ರಾಮಾಡಳಿತದವರೆಗೂ ಕಾರ್ಯ ನಿರ್ವಹಿಸಿದ್ದಾರೆ. ಇದರಿಂದ ಅಗ್ರಹಾರ, ಬ್ರಹ್ಮಪುರಿಗಳಲ್ಲಿ ಬ್ರಾಹ್ಮಣರ ಪ್ರಾಮುಖ್ಯತೆ ಎದ್ದು ಕಾಣುತ್ತದೆ. ಹಾಗಾಗಿ ಶಾಸನದ ಕೊನೆ ಭಾಗದಲ್ಲಿ ಬರುವ ಶಾಪಾಶಯದಲ್ಲಿ.

"ಯಿಂತೀ ಧರ್ಮ್ಮಮಂ ಪ್ರತಿ ಪಾಳಿಸಿದವರು
ವಾರಣಾಸಿಯೊಳು ಶಹಸ್ರ ಕವಿಲೆಯ ಕೋಡುಂ ಕೊಳಗಂ
ಸುವರ್ಣ್ನದಲು ಕಟ್ಟಿಸಿ ಚತುರ್ವ್ವೇದಪಾರಗರಪ್ಪ
ಸಬ್ರಾಹ್ಮಣರಿಗೆ ಕೊಟ್ಟ ಫಳಮಕ್ಕುಂ ಈ ಧರ್ಮ
ಮನಳಿಸಿದವಂಗೆ ಆ ಕವಿಲೆಯಾಕಳುವಾ ಬ್ರಾಹ್ಮಣರುವಂ
ವಾರಣಾಸಿಯಲಳಿದ ಪಾತಕಮಕ್ಕು ॥"[೩೧]

ಎಂಬುದು ಏವೂರ ಶಾಸನದಿಂದ ತಿಳಿದು ಬರುತ್ತದೆ. ಹಾಗಾಗಿ ಬ್ರಾಹ್ಮಣರು ಉನ್ನತ ಸ್ಥಾನಮಾನ ಹೊಂದಿದ್ದರೆಂದು ತಿಳಿದು ಬರುತ್ತದೆ. ಬ್ರಾಹ್ಮಣರಲ್ಲಿಯೂ ಕೂಡ ಅನೇಕ ಒಳ ಪಂಗಡಗಳು ಕುಲ-ಗೋತ್ರಗಳಿದ್ದವೆಂಬುದು ಶಾಸನಗಳಿಂದ ತಿಳಿದುಬರುತ್ತದೆ. ಒಂದೇ ಪಂಗಡದವರಾಗಿದ್ದರೂ ಪರಸ್ಪರ ವಿವಾಹಕ್ಕೆ ಅವಕಾಶವಿರಲಿಲ್ಲ. "ಕೌಣ್ಡಿನ್ಯ ಗೋತ್ರ"[೩೨] "ಕಶ್ಯಪಗೋತ್ರ"[೩೩] "ಉಪಾಸನಾ ಅಗ್ನಿಹೋತ್ರಿ"[೩೪] "ಭಾರ್ಗ್ಗವ ಗೋತ್ರ"[೩೫] ಎಂಬ ಪಂಗಡಗಳ ಉಲ್ಲೇಖಗಳು ಹಲವಾರು ಶಾಸನಗಳಲ್ಲಿ ಕಂಡು ಬರುತ್ತವೆ. ಇವು ಅವರ ಮೂಲ ಪುರುಷರಾದ ಋಷಿ ಮುನಿಗಳಿಂದ ಬಂದುವುಗಳಾಗಿವೆ.

## ಅಗ್ರಹಾರಗಳು :

ಅಗ್ರಹಾರ ಎಂದರೆ ಅಗ್ರ+ಆಹಾರ ಎಂಬ ಎರಡು ಪದಗಳ ಸಮಾಸವೆಂದು ಪ್ರೊ.ಡಿ.ಎಲ್. ನರಸಿಂಹಾಚಾರ್ಯರು ಅಭಿಪ್ರಾಯ ಪಟ್ಟಿದ್ದಾರೆ. "ಅಗ್ರ ಎಂದರೆ ಶ್ರೇಷ್ಠ, ಆಹಾರ ಎಂದರೆ ದೇಶ ಅಥವಾ ಸ್ಥಳ. ಅಗ್ರಹಾರವೆಂದರೆ ಶ್ರೇಷ್ಠರಿಗೆ ಕೊಟ್ಟಿರುವ ಸ್ಥಳ ಅಥವಾ ಊರು ಎಂದರ್ಥ".[೩೬] ಅನೇಕ ರಾಜರು ಜ್ಞಾನಾಭಿವೃದ್ಧಿ ಮಾಡಲು ಅಗ್ರಹಾರಗಳನ್ನು ಬ್ರಾಹ್ಮಣರಿಗೆ ಕೊಡುತ್ತಿದ್ದರು. ಈ ಪದ್ಧತಿ ಪ್ರಾಚೀನ ಕಾಲದಿಂದಲೂ ಬಳಕೆಯಲ್ಲಿದ್ದದು ತಿಳಿದು ಬರುತ್ತದೆ. ಅಗ್ರಹಾರಗಳ ಉತ್ಪಾದನೆ ಬ್ರಾಹ್ಮಣರಿಗೆ ಸೇರುತ್ತಿತ್ತು. ಅಂದರೆ ಆ ಊರಿನಿಂದ ರಾಜ್ಯಕ್ಕೆ ಸಲ್ಲಬೇಕಾಗಿದ್ದ ತೆರಿಗೆಯನ್ನು ಬ್ರಾಹ್ಮಣರಿಗೆ ಕೊಡುತ್ತಿದ್ದರು. ಅಗ್ರಹಾರವನ್ನು ದತ್ತಿಯಾಗಿ ಪಡೆದ ಮಹಾಜನರೇ ಬ್ರಾಹ್ಮಣರು. ಇವರು ವೇದಶಾಸ್ತ್ರ ತರ್ಕಶಾಸ್ತ್ರ, ಪುರಾಣ, ಸ್ಮೃತಿಗಳನ್ನು ಬಲ್ಲವರು. ಅಗ್ರಹಾರವೆಂದರೆ ಹೊಸದಾಗಿ ಊರೇ ಆಗಿರಬೇಕೆಂದಿಲ್ಲ. ಎಷ್ಟೋ ಕಡೆ ಊರು ಇಲ್ಲದೆ ಅಗ್ರಹಾರಗಳನ್ನು ದಾನವಾಗಿ ಕೊಟ್ಟಿದ್ದು ಶಾಸನಗಳಿಂದ ತಿಳಿದು ಬರುತ್ತದೆ. ಒಂದು ಊರನ್ನು ಅಗ್ರಹಾರವಾಗಿ ಮಾಡಿ, ಬ್ರಾಹ್ಮಣರಿಗೆ ದಾನವಾಗಿ ಕೊಟ್ಟರೆ ಪುಣ್ಯಬರುತ್ತದೆ ಎಂದು ರಾಜರು ನಂಬಿದ್ದರು.

ಅಗ್ರಹಾರವನ್ನು ದಾನವಾಗಿ ಪಡೆದ ಬ್ರಾಹ್ಮಣರು ಬ್ರಾಹ್ಮಣರೇ ಆಗಿರಬೇಕು ಎಂಬುದೇನಿಲ್ಲ. ಯಾವುದೇ ಕುಲ, ಜಾತಿ, ಮತ ಎನ್ನದೇ ಎಲ್ಲರೂ ಒಂದುಗೂಡಿ ಅಲ್ಲಿ ವಾಸವಾಗಿರುತ್ತಿದ್ದರು. ಆದರೆ ಒಳ ಆಡಳಿತ ಮಾತ್ರ ಬ್ರಾಹ್ಮಣರದೇ ಆಗಿರುತ್ತಿತ್ತು. ಇಂತಹ ಅನೇಕ ಶಾಸನೋಕ್ತ ಅಗ್ರಹಾರಗಳು ಈ ರೀತಿಯಾಗಿ ಕಂಡು ಬರುತ್ತವೆ. ಶ್ರೀಮದಗ್ರಹಾರವಂಕುಲಿಗೆ, ಸರ್ವನಮಸ್ಯದಗ್ರಹಾರರಳುಗುಂಡಿಗೆ, ಶ್ರೀಮದಗ್ರಹಾರ ಇಟ್ಟಿಗೆ, ಶ್ರೀಮದಗ್ರಹಾರಕುಣಿಲಂಗೆರೆ, ಸರ್ವಸಮಸ್ಯದಗ್ರಹಾರ ಕುಣಿಲಂಗೆರೆ, ಕೃಷ್ಣವೆಣ್ಣಾನಮ್ಯತ್ತರ ತೀರೋಪಾಶ್ರಿತೇ ತಿನ್ತಿಣಸಿರಿವರ ಅಗ್ರಹಾರ, ಶ್ರೀಮದಗ್ರಹಾರಂ ಮದ್ದರ್ಕ್ಕಿಕೆ, ಅಗ್ರಹಾರ ಅಳಂಬೆ, ಶಂಕರ ಭಟ್ಟೋಪಾಧ್ಯಯರಿಗೆ ಕುಡಲವರ್ಪ್ಪಡೆದಗ್ರಹಾರ ವಂಕುಲಗೆ, ಶ್ರೀಮಹಾಗ್ರಹಾರ ಮುದನೂರ, ಸರ್ವನಮಸ್ಯಮಾದಗ್ರಹಾರಂ ಹಗರಿಟ್ಟಿಗೆ, ಸರ್ವನಮಸ್ಯಮಾದಗ್ರಹಾರಂ ದಕ್ಷಿಣವಾರಣಾಸಿ ಯಳರಾಮೆ ಇವು ಶಾಸನಗಳಲ್ಲಿ ಕಂಡು ಬರುವ ಪ್ರಮುಖ ಅಗ್ರಹಾರಗಳು. ಕೇವಲ ಪುರುಷರಷ್ಟೆ ಅಲ್ಲದೆ, ಸ್ತ್ರೀಯರು ಕೂಡ ಉನ್ನತ ಜ್ಞಾನ ಪಡೆದಿದ್ದರು. ದೇವಿಕವ್ವೆ ಎಂಬುವವಳು ಉಪಾಧ್ಯಾಯರ ಬ್ರಾಹ್ಮಣ ದೇವಿಕಟ್ಟೆಗೆ ದಾನ ಕೊಟ್ಟಿದ್ದು ಹುಣಸಗಿ ಶಾಸನದಿಂದ ತಿಳಿದುಬರುತ್ತದೆ.

## ಬ್ರಹ್ಮಪುರಿಗಳು :

ಬ್ರಹ್ಮಪುರಿಗಳು ಎಂದರೆ ನಗರ ಅಥವಾ ಪಟ್ಟಣದ ಒಂದು ಭಾಗ. "ಬ್ರಹ್ಮಪುರಿಗಳಿಗೂ, ಅಗ್ರಹಾರಗಳಿಗೂ ಇರುವ ವ್ಯತ್ಯಾಸವೆಂದರೆ, ಅಗ್ರಹಾರಗಳು ಸ್ವತಃ ಒಂದು ಹಳ್ಳಿಗಳಾಗಿರುತ್ತಿದ್ದವು. ಬ್ರಹ್ಮಪುರಿಗಳು ನಗರ ಅಥವಾ ಪಟ್ಟಣದ ಒಂದು ಭಾಗವಾಗಿರುತ್ತಿದ್ದವು."[೩೭] ಪೂರ್ವದಿಂದಲೂ ನಗರಗಳಿಗಿಂತ ಹಳ್ಳಿಗಳ ಸಂಖ್ಯೆಯೇ ಹೆಚ್ಚಾಗಿತ್ತು. ಅಗ್ರಹಾರಗಳಲ್ಲಿ ಬ್ರಾಹ್ಮಣರು ಆಡಳಿತ ಮಾಡಿದರೆ, ಬ್ರಹ್ಮಪುರಿಗಳಲ್ಲಿಯೂ ಬ್ರಾಹ್ಮಣರೇ ಆಡಳಿತ ಮಾಡುತ್ತಿದ್ದರು. ಅಗ್ರಹಾರಗಳಂತೆ, ಬ್ರಹ್ಮಪುರಿಗಳು ಉನ್ನತ ಶಿಕ್ಷಣ ಕೇಂದ್ರಗಳಾಗಿದ್ದವು. ಇಲ್ಲಿ ವಿದ್ವಾಂಸರು, ಪಂಡಿತರು ಇದ್ದದು ತಿಳಿದು ಬರುತ್ತದೆ. ಆದಿತ್ಯ ಸೋಮಯಾಜಿ ಎಂಬ ವಿದ್ವಾಂಸರು ಯಾತನೂರಿನ ಬ್ರಹ್ಮಪುರಿಯಲ್ಲಿದ್ದದು ಶಾಸನದಿಂದ ತಿಳಿದು ಬರುತ್ತದೆ. ಅಗ್ರಹಾರಗಳಲ್ಲಿಯೂ, ಭತ್ತಗ್ರಾಮಗಳಲ್ಲಿಯೂ ಬ್ರಹ್ಮಪುರಗಳಿದ್ದದು ಶಾಸನದಿಂದ ತಿಳಿದು ಬರುತ್ತದೆ.

ಯಾತನೂರ ಬ್ರಹ್ಮಪುರಿಯು ಬ್ರಾಹ್ಮಣರಿಗೆ ಸರ್ವನಮಸ್ಯವಾಗಿ ಮೂರು ಮತ್ತರು ಭೂಮಿಯನ್ನು ದಾನವಾಗಿ ಕೊಟ್ಟಿದ್ದು, ಬ್ರಾಹ್ಮಣರಿಗೆ ಅನ್ನ ಸಂತರ್ಪಣಕ್ಕಾಗಿ ಭೂ-ದತ್ತಿಯನ್ನು ಕೊಟ್ಟಿದ್ದು ಏವೂರ ಶಾಸನದಿಂದ ತಿಳಿದು ಬರುತ್ತದೆ. ಭತ್ತಗ್ರಾಮ ರಾಜನಕೋಳೂರಿನ

ಬ್ರಹ್ಮಪುರಿಯ ಬ್ರಾಹ್ಮಣರಿಗೆ ಗದ್ದೆ, ೪೨ ಗೇಣಾಘಳೆ, ಪಗರಿಟ್ಟಗೆಯ ಸೀಮೆ, ನಿವೇಶನವನ್ನು ಚಂದಲ ಮಹಾದೇವಿ ದಾನ-ದತ್ತಿ ಕೊಟ್ಟಿದ್ದು ರಾಜನಕೋಳೂರು ಶಾಸನದಿಂದ ತಿಳಿದು ಬರುತ್ತದೆ. ಐದನೂರು ಮಹಾಜನರು ಐಕ್ಯತೆಯಿಂದ ಕೂಡಿ ದೇವರ ಬ್ರಹ್ಮಪುರಿಯ ಸತ್ರದ ಅಗ್ಗಿಷ್ಟಗೆಯನ್ನು ದಾನವಾಗಿ ಕೊಟ್ಟಿದ್ದು ಯಡ್ರಾಮಿ ಶಾಸನದಿಂದ ತಿಳಿದು ಬರುತ್ತದೆ. ಬ್ರಹ್ಮಪುರಿಗಳಲ್ಲಿ ಬ್ರಾಹ್ಮಣರ ಭೋಜನಕ್ಕಾಗಿ ಸತ್ರಗಳಿದ್ದದು ಮುದನೂರು ಶಾಸನದಿಂದ ತಿಳಿದು ಬರುತ್ತದೆ.

**ಶಿವಪುರಿ:**

ಸಗರನಾಡಿನ ಶಾಸನಗಳಲ್ಲಿ ಬ್ರಹ್ಮಪುರಿಗಳ ಉಲ್ಲೇಖವಿದ್ದದು ತಿಳಿದು ಬರುತ್ತದೆ. ಏವೂರಿನ ಶಾಸನವು ಬ್ರಹ್ಮಪುರಿಯ ಜೊತೆಗೆ ಶಿವಪುರಿಯ ಬಗ್ಗೆ ಮಾಹಿತಿ ಒದಗಿಸುತ್ತದೆ. ಶಿವಪುರಿಯು ಶೈವ ದೇವಾಲಯಗಳಲ್ಲಿ ಶಿವಾರ್ಚಕರ, ಶೈವಾಗಮಕೋವಿದರ, ಹಾಗೂ ಶಿವ ಭಕ್ತರ ವಾಸಸ್ಥಾನಕ್ಕಾಗಿ ಶಿವಪುರಿಗಳನ್ನು ಕಟ್ಟಿಸುತ್ತಿದ್ದರು. ಹೊಸದಾಗಿ ಶಿವ ದೇವಾಲಯಗಳನ್ನು ಕಟ್ಟಿಸುವುದರ ಜೊತೆಗೆ ಶಿವಪುರಿಗಳು ಶೈವ ತಾಣಗಳಾಗಿ ಕಂಡು ಬರುತ್ತವೆ. ಶಿವಪುರಿಗಳಲ್ಲಿ ಅಗ್ಗಿಷ್ಟಗೆಗಳಿದ್ದದು ಹಲವಾರು ಶಾಸನಗಳಿಂದ ತಿಳಿದು ಬರುತ್ತದೆ. ಇವುಗಳ ಆಡಳಿತದ ಮೇಲ್ವಿಚಾರಣೆ ಮಹಾಜನರ ಕೈಯಲ್ಲೇ ಇರುತ್ತಿತ್ತು. ಆದರೆ ಶಿವಪುರಿಗಳು, ಬ್ರಹ್ಮಪುರಿಗಳಷ್ಟು ಪ್ರಾಮುಖ್ಯತೆ ಹೊಂದಿರಲಿಲ್ಲ ಎಂಬುದು ತಿಳಿದು ಬರುತ್ತದೆ.

**ಭತ್ತಗ್ರಾಮ :**

ಭತ್ತಗ್ರಾಮಗಳು ಬ್ರಾಹ್ಮಣರಿಗೆ ದತ್ತಿ ನೀಡಿದ ಊರುಗಳಾಗಿವೆ. ಇವು ಧಾರ್ಮಿಕವಾಗಿ ಮಹತ್ವ ಪಡೆದ ಸ್ಥಳಗಳಾಗಿವೆ. ಸಗರನಾಡಿನಲ್ಲಿರುವ ರಾಜನಕೋಳೂರು, ಕುಳಗೇರಿ, ಏವೂರ, ಭತ್ತಗ್ರಾಮ ಪಲ್ಲಕರಂಟೆ ಇವು ಭತ್ತ ಗ್ರಾಮಗಳಾಗಿದ್ದವು. ಇವುಗಳ ವಿಶೇಷತೆ ಎಂದರೆ ಇಲ್ಲಿಯೂ ಸಹ ಬ್ರಹ್ಮಪುರಿಗಳಿದ್ದವು. ಭತ್ತಗ್ರಾಮಗಳ ಆಳ್ವಿಕೆಯನ್ನು ರಾಣಿಯರೇ ನೋಡಿಕೊಳ್ಳುತ್ತಿದ್ದರು.

## ಮಹಾಜನರು :

ಅಗ್ರಹಾರ, ಬ್ರಹ್ಮಪುರಿ ಮತ್ತು ಗ್ರಾಮಗಳಲ್ಲಿರುವ ಬ್ರಾಹ್ಮಣರನ್ನು 'ಮಹಾಜನರು' ಎಂದು ತಿಳಿದಿರುವುದು ವಾಡಿಕೆ. ಆದರೆ "ಮಹಾಜನರು ಬ್ರಾಹ್ಮಣರೇ ಇರಬೇಕೆಂಬ ನಿಯಮವೇನಿಲ್ಲ. ಊರಿನ ಪ್ರಮುಖ ಹಿರಿಯ ವ್ಯಕ್ತಿಗಳ ಮಂಡಳವನ್ನು ಮಹಾಜನರೆಂದು ಕರೆಯುವುದು ಸೂಕ್ತ ಅಭಿಪ್ರಾಯವಿದೆ".[೩೮] ಶಾಸನಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದಾಗ ಮಹಾಜನರು ಬ್ರಾಹ್ಮಣರೇ ಎನ್ನುವ ವಿಷಯ ತಿಳಿದು ಬರುತ್ತದೆ. ಮಹಾಜನರು ವೈಷ್ಣವ ಧರ್ಮಕ್ಕೆ ಅಷ್ಟೇ ಅಲ್ಲ, ಶೈವಧರ್ಮಕ್ಕೂ ದಾನ ಕೊಟ್ಟಿದ್ದು ತಿಳಿದು ಬರುತ್ತದೆ. ಸಗರ ನಾಡಿನ ಶಾಸನಗಳಲ್ಲಿ ಮಹಾಜನರ ಸಂಖ್ಯೆ, ವಿದ್ಯೆ, ತಮೋಬಲ, ಪೌರುಷ, ತ್ಯಾಗ, ಶೀಲ ಅವರ ವಿವಿಧ ಕಾರ್ಯ ಚಟುವಟಿಕೆಗಳ ಬಗ್ಗೆ ಶಾಸನಗಳು ವರ್ಣಿಸುತ್ತವೆ. ಮಹಾಜನರ ಸಂಖ್ಯೆ ನಿರ್ದಿಷ್ಟವಾಗಿ ಹೇಳಲು ಸಾಧ್ಯವಿಲ್ಲ. ಮೂನ್ನೂರು ಹಾಗೂ ಐದನೂರು ಮಹಾಜನರನ್ನೊಳಗೊಂಡ ಗ್ರಾಮಗಳು ಈ ನಾಡಿನಲ್ಲಿ ಕಂಡು ಬರುತ್ತವೆ. ಮಹಾಜನ ಮೂನ್ನೂರ್ವರು, ಅವನಾನುಮೋರ್ವ್ವಂ, ಮಹಾಜನಗಂಗಳೈನೊರ್ಬ್ಬರ, ಹಗರಟಿಗೆಯ ಶೇಷ ಮಹಾಜನಗಂಗಳೈನೋರ್ಬ್ಬರಂ ಇಂತಹ ಉಲ್ಲೇಖ ಹಗರಟಿಗಿ, ಮುದನೂರ, ಸಗರ, ಕೆಂಬಾವಿ, ಏವೂರು ಮುಂತಾದ ಶಾಸನಗಳಲ್ಲಿ ಈ ಮಹಾಜನರ ಉಲ್ಲೇಖವಿದೆ. ಮಹಾಜನರು ಸಾಮಾಜಿಕ ಹಾಗೂ ಧಾರ್ಮಿಕ ಕಾರ್ಯಗಳನ್ನು ಮಾಡುತ್ತಿದ್ದರು. ಊರಿನಲ್ಲಿ ಯಾವುದೇ ಕಾರ್ಯ ನಡೆದರೂ, ಅದು ಮಹಾಜನರ ಸಮ್ಮುಖದಲ್ಲಿ ನಡೆಯುತ್ತಿತ್ತು. ಮಹಾಜನರು ಅನೇಕ ದೇವಾಲಯಗಳಲ್ಲಿ ದಾನ–ದತ್ತಿ, ಧರ್ಮ ಕಾರ್ಯದರ್ಶಿಗಳಾಗಿ, ಕಾರ್ಯ ನಿರ್ವಹಿಸಿದ್ದು ತಿಳಿದು ಬರುತ್ತದೆ. ಯಮ, ನಿಯಮ, ಸ್ವಧ್ಯಾಯ, ಧ್ಯಾನ–ಧಾರಣ, ಮೌನ–ಅನುಷ್ಠಾನ, ಪರಾಯಣರು ಆಗಿದ್ದರು. ಯಜ್ಞ–ಯಾಗಾದಿಗಳನ್ನು ಬಲ್ಲವರು, ಧ್ಯಾನ. ಮೌನ, ಜಪ, ಸಮಾಧಿ, ಶೀಲಗುಣ ಸಂಪನ್ನರು ಆಗಿದ್ದರು. ಸಕಲ ಶಾಸ್ತ್ರ, ವೇದ, ತರ್ಕ, ವ್ಯಾಕರಣ, ಛಂದಸ್ಸು, ಬ್ರಹ್ಮವಿದ್ಯೆ, ವೇದಾಂತ, ಸಿದ್ಧಾಂತವನ್ನು ಬಲ್ಲವರಾಗಿದ್ದರು. ಹಾಗಾಗಿ ಊರಿನಲ್ಲಿ ಗ್ರಾಮದಲ್ಲಿ ಮಹಾಜನರಿಗೆ ಗೌರವವಿತ್ತೆಂದು ತಿಳಿದು ಬರುತ್ತದೆ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆನ್ನದೆ ಎಲ್ಲರಿಗೂ ಸಮಾನ ನಿಯಮಗಳು ಅನ್ವಯವಾಗುತ್ತಿದ್ದವು. ದಂಢದರರೂ, ಮಂತ್ರಶಕ್ತಿ, ಇಚ್ಛಾಶಕ್ತಿ, ಕ್ರಿಯಾಶಕ್ತಿ, ಶಾಪ ಶಕ್ತಿ ಹಾಗೂ ಸಮಸ್ತ ಗುಣಮಣಿ ಭೂಷಣರು ಆಗಿದ್ದರು ಎಂಬುದು ಈ ನಾಡಿನ ಶಾಸನಗಳಿಂದ ತಿಳಿದು ಬರುತ್ತದೆ.

ಮಹಾಜನರು ಅಗ್ರಹಾರಗಳ ಒಡೆಯರಾದುದರಿಂದ ಅವರಿಗೆ ಅಗ್ರಹಾರಗಳ ಮೇಲೆ ಒಂದು ರೀತಿಯ ಪ್ರಭುತ್ವವಿತ್ತು. ಅಲ್ಲದೇ ಮಹಾನಜರು ಭತ್ತ ಗ್ರಾಮಗಳಲ್ಲಿಯೂ ವಾಸವಾಗಿರುತ್ತಿದ್ದರು. ಗ್ರಾಮಸಭೆಗಳ ಆಡಳಿತವನ್ನು ನಿರ್ವಹಿಸುತ್ತಿದ್ದ ಮಹಾಜನರು

ನ್ಯಾಯ, ನಿರ್ಣಯ, ಭೋದನೆ ಮುಂತಾದ ಜವಾಬ್ದಾರಿಯುತ ಕಾರ್ಯಗಳನ್ನು ನಿರ್ವಹಿಸುತ್ತಿದ್ದದು ಸಗರ ನಾಡಿನ ಶಾಸನಗಳಿಂದ ತಿಳಿದು ಬರುತ್ತದೆ.

### ೬.೫. ವೀರಶೈವ–ಧರ್ಮ :

ಬಸವಾದಿ ಶರಣರ ವಚನಗಳನ್ನು ಸೂಕ್ಷ್ಮವಾಗಿ ವಿಶ್ಲೇಷಿಸಿದಲ್ಲಿ ಆಗಮ ಮೂಲದ ಪರಿಷ್ಕೃತ ಸ್ವರೂಪವೇ ವೀರಶೈವವಾಗಿದೆಯೆಂಬುದು ವಿದ್ವಾಂಸರ ಅಭಿಪ್ರಾಯ. ವೀರಶೈವ ವಚನ ಸಾಹಿತ್ಯದಲ್ಲಿ ಪ್ರಮುಖವಾಗಿ ವಚನಕಾರರನ್ನೇ ತೆಗೆದುಕೊಂಡಾಗ, ಭಕ್ತಿ, ಆಚರಣೆ, ಧರ್ಮ, ಅಷ್ಟಾವರಣ ಇವು ವೀರಶೈವ ಧರ್ಮದಲ್ಲಿ ಕಂಡು ಬರುತ್ತವೆ. ಶರಣರ ದೃಷ್ಟಿಯಲ್ಲಿ ವ್ಯಕ್ತಿಯ ಸ್ಥಾನಮಾನ ಆತನ ಹುಟ್ಟಿನಿಂದಲ್ಲ. ಆತನ ನಡೆ–ನುಡಿ, ಆಚರಣೆ, ಸಂಸ್ಕೃತಿ–ಸಂಪ್ರದಾಯದಿಂದ ನಿರ್ಣಯವಾಗುತ್ತದೆ. ಯಾರು ಮೇಲ್ಲಲ್ಲ–ಕೀಳಲ್ಲ, ಗಂಡು–ಹೆಣ್ಣು, ಬಡವ–ಶ್ರೀಮಂತ ಎಂಬ ಭೇದ ಭಾವವಿಲ್ಲದೇ ಎಲ್ಲರೂ ಸಮಾನ ಸ್ಥಾನ ಪಡೆದಿದ್ದರು.

"ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ" ಎಂಬುದು ವೀರಶೈವ ಧರ್ಮದ ತಾತ್ವಿಕ ಧೋರಣೆಯಾಗಿತ್ತು. ಇದರಿಂದ ಸ್ಥಾವರಲಿಂಗ ಪೂಜೆ ತ್ಯಜಿಸಿ, ಇಷ್ಟಲಿಂಗ ಪೂಜೆ ಪ್ರಾರಂಭಗೊಂಡಿತ್ತು. ಹೀಗಾಗಿ ದೇವಾಲಯ ಹಾಗೂ ಮಠಗಳ ನಿರ್ಮಾಣ ಕ್ರಮೇಣವಾಗಿ ನಿಂತು ಹೋದವು. ಶೈವ ಧರ್ಮದಲ್ಲಿ ಹಲವು ಪಂಥಗಳಲ್ಲಿ ಒಂದಾದ ಎಳೆಮೇಲ ಸಿಂಹ ಪರಿಷನ್ಮಂಡಲಿಯ ಮಲೆಯಾಳ ಪಂಡಿತನ ಶಿಷ್ಯಪ್ರಶಿಷ್ಯ ಪರಂಪರೆ ಮುಂದೆ ಅಭಿನವ ಪಾಶುಪತವಾಗಿ ಇದೇ ವೀರಶೈವ ಧರ್ಮದ ನಾಂದಿಗೆ ಕಾರಣವಾಯಿತು. ಈ ನಾಡಿನಲ್ಲಿ ಇದರ ಹುಟ್ಟು ಕಂಡು ಬಂದರೆ ಶಾಸನಗಳಲ್ಲಿ ಮಾತ್ರ ಯಾವುದೇ ಸ್ಪಷ್ಟವಾದ ಮಾಹಿತಿ ತಿಳಿದು ಬರುವುದಿಲ್ಲ. ಎಲ್ಲ ಧರ್ಮಗಳಲ್ಲಿ ಒಂದಾದ ವೀರಶೈವ ಧರ್ಮ ಇನ್ನೊಂದು ಮಹತ್ವದ ಧೋರಣೆಯನ್ನು ತಿಳಿಸುತ್ತದೆ.

"ಮಾಡಿದೆನೆಂಬುದು ಮನದಲ್ಲಿ ಹೊಳೆದರೆ, ಏಡಿಸಿ ಕಾಡಿತ್ತು ಶಿವನ ಡಂಗುರ, ಮಾಡಿದೆನೆನ್ನದಿರಾ ಲಿಂಗಕ್ಕೆ. ಮಾಡಿದೆನೆನ್ನದಿರಾ ಜಂಗಮಕ್ಕೆ"[೩೯] ಇಂತಹ ನಿಲವು ಈ ಧರ್ಮದ್ದಾಗಿತ್ತು. ಇದರಿಂದ ದಾನ ನೀಡುವ, ದಾನ ಪಡೆಯುವ ಕಾರ್ಯ ಚಟುವಟಿಕೆಗಳು ನಿಂತು ಹೋದವು. ವೀರಶೈವ ಪಂಚಾಚಾರ್ಯರಲ್ಲಿ ಒಬ್ಬನಾದ ರೇವಣಸಿದ್ಧನ ಬಗ್ಗೆ ಶಿರವಾಳ ಶಾಸನದಿಂದ ಈ ರೀತಿ ತಿಳಿದು ಬರುತ್ತದೆ. "ಸಿದ್ಧರಾಮ ಶಿವಯೋಗಿಯ ಜನನ, ಭವಿಷ್ಯ ನುಡಿದ ರೇವಣ, ಅವ್ವೆಯರ ಹಳ್ಳಿ ಶಾಸನದಲ್ಲಿ ಉಕ್ತನಾಗಿ ಪವಾಡ ಮೆರೆದ ಮರುಳಸಿದ್ದೇಶ್ವರನ ತಂದೆ ರೇವಣಸಿದ್ಧನ ಪವಾಡದ"[೪೦] ಬಗ್ಗೆ ಶಿರವಾಳ ಶಾಸನದಿಂದ ತಿಳಿದು ಬರುತ್ತದೆ. ಈ ರೇವಣದೇವನ ಬಗ್ಗೆ ಸ್ಪಷ್ಟವಾಗಿ ತಿಳಿದು ಬಂದಿಲ್ಲ. ಈ ಶಾಸನದಲ್ಲಿ

ಇಬ್ಬರು ರೇವಣಸಿದ್ಧರ ಉಲ್ಲೇಖ ಕಂಡುಬರುತ್ತದೆ. ಹಾಗಾಗಿ ಪವಾಡ ಪುರುಷನಾಗಿ ಪ್ರಸಿದ್ಧಿ ಪಡೆದವನು ರೇವಣಸಿದ್ಧ. ಹರಿಹರ ಮಹಾಕವಿ ಚಿತ್ರಿಸಿರುವ ರೇವಣಸಿದ್ಧನಿಗೆ ತವನಿಧಿಯ ಪವಾಡ, ಒರ್ಬಳ ತಂಡುಳ ಪವಾಡ, ಧರೆ ಬೆಂದ ಪವಾಡ ಈ ಮೂರು ಪವಾಡಗಳು ರೇವಣಸಿದ್ಧನಿಗೆ ಹೊಂದಿದ್ದರೆ, ಇನ್ನುಳಿದ "ತೊರೆ ದಾಟಿದ ಪವಾಡ, ಗೀತ ಪವಾಡ, ನೃತ್ಯ ಪವಾಡಗಳು ರೇವಣಯ್ಯನಿಗೆ ಹೋಲುತ್ತವೆ".[೪೧] ಹಾಗಾಗಿ ಈ ಇಬ್ಬರು ಬೇರೆ-ಬೇರೆ ವ್ಯಕ್ತಿಗಳೆಂದು ಹೇಳಬಹುದು.

ಸಗರನಾಡಿನಲ್ಲಿ ಬಸವ ಪೂರ್ವ ಹಾಗೂ ಬಸವ ಕಾಲೀನಯುಗದ ಶಿವಶರಣರಾದ ಮುದನೂರು ಜೇಡರದಾಸಿಮಯ್ಯ, ಕೆಂಬಾವಿಯ ಭೋಗಣ್ಣ, ಕಕ್ಕೇರಿಯ ಡೋಹರ ಕಕ್ಕಯ್ಯ, ಹಾವಿನಾಳ ಕಲ್ಲಯ್ಯ, ಅಗ್ನಿಯ ಅಗ್ಘವಣಿ ಹೊನ್ನಯ್ಯ ಮುಂತಾದವರು ಬಾಳಿ ಬದುಕಿದ ನಾಡು ಇದಾಗಿದೆ. ಕಾಯಕ ಯೋಗದ ನೇಕಾರ ಎಂದು ಜೇಡರ ದಾಸಿಮಯ್ಯನಿಗೆ ಕರೆಯುಲಾಗುತ್ತದೆ. ಮುದನೂರಿನಲ್ಲಿ ಈತ ಜನಿಸಿದನು. ಮುದನೂರಿನ ಪ್ರಸಿದ್ಧ ದೇವಾಲಯ ರಾಮನಾಥ. ಈ ದೇವಾಲಯ ಈತನಿಗೆ ಮೀಸಲಾಗಿತ್ತು. ಇದರಿಂದ ಜೇಡರ ದಾಸಿಮಯ್ಯನ ಅಂಕಿತನಾಮ ರಾಮನಾಥ ಎಂದಾಗಿತ್ತು. ದಾಸಿಮಯ್ಯನ ಬಗ್ಗೆ ಇನ್ನೊಂದು ವಿವಾದವಿದೆ. "ಬಸವಾದಿ ಪ್ರಮಥರ ವಚನ, ಹರಿಹರನ ಶಂಕರನ ದಾಸಿಮಯ್ಯನರಗಳೆ, ಪಂಪಾಶತಕ ಮತ್ತು ಶಾಸನಗಳಲ್ಲಿ ಜೇಡರ ದಾಸಿಮಯ್ಯನ ಹೆಸರೂ ಭೀಮ ಕವಿಯ ಬಸವ ಪುರಾಣ ಮತ್ತು ವೀರಶೈವ ಕೃತಿಗಳಲ್ಲಿ ದೇವರ ದಾಸಿಮಯ್ಯನ"[೪೨] ಹೆಸರು ಕಂಡು ಬರುವುದರಿಂದ ಇದು ಇನ್ನಷ್ಟು ಬಲಗೊಳ್ಳಬೇಕಾಗಿದೆ. ಆದರೆ ಡಿ.ಎಲ್. ನರಸಿಂಹಾಚಾರ್ ಮತ್ತು ಕೆ.ಜಿ. ನಾಗರಾಜಪ್ಪ ಅವರು ಈ ಎರಡೂ ಹೆಸರುಗಳುಳ್ಳ ವ್ಯಕ್ತಿ ಒಬ್ಬನೇ ಎಂದು ಸ್ಪಷ್ಟವಾಗಿ ಹೇಳಿದ್ದಾರೆ. ಇನ್ನಿತರ ಶರಣರಾದ ಕೊಡೇಕಲ್ಲ ಬಸವಣ್ಣ, ದೇವರಗೋನಾಲದ ಮೌನೇಶ್ವರ ಇಂತಹ ಅನೇಕ ಶರಣರ ನಾಡು ಸಗರನಾಡು. ಸಾಹಿತ್ಯ ದೃಷ್ಟಿಯಲ್ಲಿ ಅಧ್ಯಯನ ಮಾಡಿದಾಗ ಈ ಶರಣರ ಬಗ್ಗೆ ಸ್ಪಷ್ಟ ಮಾಹಿತಿ ತಿಳಿದು ಬರುತ್ತದೆ. ಆದರೆ ಶಾಸನಗಳಲ್ಲಿ ಯಾವುದೇ ರೀತಿಯ ಪ್ರಭಾವ ಕಂಡು ಬರುವುದಿಲ್ಲ.

# ಟಿಪ್ಪಣಿಗಳು

೧. ಸಗರನಾಡ ಸಿರಿ : ಅಕ್ಕಿ ಡಿ.ಎನ್, ಕವಿಕುಂಚ ಪ್ರಕಾಶನ, ಶಹಾಪುರ, ೧೯೯೬, ಪು.ಸಂ.೩೮.

೨. ಶಹಾಪುರ ತಾಲೂಕಿನ ಶಾಸನಗಳು : ಒಂದು ಸಮೀಕ್ಷೆ : ವನದುರ್ಗ ರಂಗರಾಜ, ಸಗರನಾಡು ಅಧ್ಯಯನ ಸಂಸ್ಥೆ, ಶಹಾಪುರ, ೧೯೯೬, ಪು.ಸಂ.೨೯.

೩. ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ.೧೯೭.

೪. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೩೦೨.

೫. ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ.೧೮೮.

೬. ಕನ್ನಡ ಶಾಸನ ಶಿಲ್ಪ : ಪರಮಶಿವಮೂರ್ತಿ ಡಿ.ವಿ,ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ, ೧೯೯೯, ಪು.ಸಂ.೧೧೭.

೭. ಸಮಾಧಿ–ಬಲಿದಾನ–ವೀರಮರಣ ಸ್ಮಾರಕಗಳು : ಕಲಬುರ್ಗಿ ಎಂ.ಎಂ, ಐಬಿಎಚ್, ಪ್ರಕಾಶನ, ಬೆಂಗಳೂರು, ೧೯೮೦, ಪು.ಸಂ.೧೦.

೮. ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ.೭೫.

೯. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೩೦೭.

೧೦. ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ.೭೬.

೧೧. ಹೈದರಾಬಾದು ಕರ್ನಾಟಕ ಭಾಗದ ಕನ್ನಡ ಶಿಲಾ ಶಾಸನಗಳು : ಶಿವಾನಂದ ವಿ, ಬನಾರಸ ಹಿಂದೂ ವಿಶ್ವವಿದ್ಯಾಲಯ, ವಾರಣಾಸಿ, ೧೯೯೨, ಪು.ಸಂ.೨೬೩.

೧೨. ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ.೩೩೩.

೧೩. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೩೦೭.

೧೪. ಬದುಕಿನ ಬುತ್ತಿ : ಜೇವರ್ಗಿ ಸಾಹಿತ್ಯ ಸಮ್ಮೇಳನ, ಸ್ಮರಣ ಸಂಚಿಕೆ, ೨೦೦೫, ಪು.ಸಂ.೧೩.

೧೫. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ; ಚಿದಾನಂದ ಮೂರ್ತಿ ಎಂ, ಸಪ್ನ ಬುಕ್‌ಹೌಸ್, ಬೆಂಗಳೂರು, ೨೦೦೨, ಪು.ಸಂ.೧೪೧.

೧೬. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ; ಚಿದಾನಂದ ಮೂರ್ತಿ ಎಂ, ಸಪ್ನ ಬುಕ್‌ಹೌಸ್, ಬೆಂಗಳೂರು, ೨೦೦೨, ಪು.ಸಂ.೧೪೦.

೧೭. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೨೨.

೧೮. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ; ಚಿದಾನಂದ ಮೂರ್ತಿ ಎಂ, ಸಪ್ನ ಬುಕ್‌ಹೌಸ್, ಬೆಂಗಳೂರು, ೨೦೦೨, ಪು.ಸಂ.೧೪೨.

೧೯. ತರ್ದವಾಡಿ ನಾಡು ಒಂದು ಅಧ್ಯಯನ : ಕೊಪ್ಪಾ ಎಸ್.ಕೆ, ಪ್ರತಿಭಾ ಪ್ರಕಾಶನ, ಇಂಡಿ, ೧೯೯೦, ಪು.ಸಂ.೨೭೯.

೨೦. ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ. ೪೮.

೨೧. ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ.೭೩.

೨೨. ಮಾರ್ಗ ಸಂ–೪: ಕಲಬುರ್ಗಿ ಎಂ.ಎಂ, ಸಪ್ನಬುಕ್‌ಹೌಸ್, ಬೆಂಗಳೂರು, ೧೯೬೭, ಪು.ಸಂ.೧೩೮.

೨೩. ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ.೪೮.

೨೪. ತರ್ದವಾಡಿ ನಾಡು ಒಂದು ಅಧ್ಯಯನ : ಕೊಪ್ಪಾ ಎಸ್.ಕೆ, ಪ್ರತಿಭಾ ಪ್ರಕಾಶನ, ಇಂಡಿ, ೧೯೯೦, ಪು.ಸಂ.೨೮೦.

೨೫. ಮುದನೂರು ಮತ್ತು ಯಡ್ರಾಮಿ ಶಾಸನಗಳು : ಹಿರೇಮಠ ಬಿ.ಆರ್, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೪, ಪು.ಸಂ.೪೪.

೨೬. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೩೬೬.

೨೭. ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ.೧೧೬.

೨೮. ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ.೨೭.

೨೯. ಮುದನೂರು ಮತ್ತು ಯಡ್ರಾಮಿ ಶಾಸನಗಳು : ಹಿರೇಮಠ ಬಿ.ಆರ್, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೪, ಪು.ಸಂ.೪೫.

೩೦. ಬದುಕಿನ ಬುತ್ತಿ : ಜೇವರ್ಗಿ ಸಾಹಿತ್ಯ ಸಮ್ಮೇಳನ, ಸ್ಮರಣ ಸಂಚಿಕೆ, ೨೦೦೫, ಪು.ಸಂ.೧೨.

೩೧. ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ.೪೯.

೩೨. ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ.೮೮.

೩೩. ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ.೨೦.

೩೪. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೨೭೨.

೩೫. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೩೮೧.

೩೬. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ; ಚಿದಾನಂದ ಮೂರ್ತಿ ಎಂ, ಸಪ್ನ ಬುಕ್‌ಹೌಸ್, ಬೆಂಗಳೂರು, ೨೦೦೨, ಪು.ಸಂ.೨೩೦.

೩೭. ಕರ್ನಾಟಕದಲ್ಲಿ ಪುರಾತನ ವಿದ್ಯಾಕೇಂದ್ರಗಳು : ನಾಗರಾಜ ಮೈ. ನ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ನೃಪತುಂಗ ರಸ್ತೆ ಬೆಂಗಳೂರು, ೧೯೮೩, ಪು.ಸಂ.೧೮.

೩೮. ಹೈದರಾಬಾದು ಕರ್ನಾಟಕ ಭಾಗದ ಕನ್ನಡ ಶಿಲಾ ಶಾಸನಗಳು : ಶಿವಾನಂದ ವಿ,ಬನಾರಸ ಹಿಂದೂ ವಿಶ್ವವಿದ್ಯಾಲಯ, ವಾರಣಾಸಿ, ೧೯೯೨, ಪು.ಸಂ.೧೮.

೩೯. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೫೮.

೪೦. ಅನುಶಾಸನ : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಕಾ ನವನಗರ, ಹುಬ್ಬಳ್ಳಿ, ೨೦೦೨, ಪು.ಸಂ.೦೫.

೪೧. ಅನುಶಾಸನ : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಕಾ ನವನಗರ, ಹುಬ್ಬಳ್ಳಿ, ೨೦೦೨, ಪು.ಸಂ.೦೬.

೪೨. ಶಾಸನಗಳಲ್ಲಿ ಶಿವಶರಣರು : ಕಲಬುರ್ಗಿ ಎಂ.ಎಂ, ಸಿರಿಗನ್ನಡ ಪ್ರಕಾಶನ, ಕನ್ನಡ ವಿಭಾಗ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ, ೧೯೭೦. ಪು.ಸಂ.೩೫.

# ಅಧ್ಯಾಯ–೭

## ದೇವಾಲಯಗಳು

೭.೧. ಶೈವ ದೇವಾಲಯಗಳು

೭.೨. ತ್ರಿಕೂಟ ದೇವಾಲಯಗಳು

೭.೩ ಬ್ರಹ್ಮ ದೇವಾಲಯಗಳು

೭.೪. ಸ್ತ್ರೀ ದೇವಾಲಯಗಳು

೭.೫. ವ್ಯಕ್ತಿನಾಮ ದೇವಾಲಯಗಳು

೭.೬. ಪರಿಚಾರಕ ವರ್ಗ

೭.೭. ದೇವಾಲಯದ ಶಿಲ್ಪಿಗಳು

೭.೮. ವಿದ್ಯಾಕೇಂದ್ರವಾಗಿರುವ ದೇವಾಲಯಗಳು

೭.೯. ವೈಷ್ಣವ ದೇವಾಲಯಗಳು

೭.೧೦. ಶಿಲ್ಪಗಳು

೭.೧೧. ಶಿವಶರಣರು

೭.೧೨. ಸಾಹಿತ್ಯ

## ಪ್ರಸ್ತಾವನೆ:

ಮಾನವನಿಗೆ ಹಣ ಸಂಪಾದನೆಯೇ ಮುಖ್ಯವಲ್ಲ. ಇರುವ ಸ್ವಲ್ಪ ಧನದಲ್ಲಿ ಮುಕ್ಕಾಲು ಭಾಗದಷ್ಟಾದರೂ ದಾನ ಧರ್ಮಕ್ಕಾಗಿ ಮೀಸಲಿಡಬೇಕು ಎಂಬುದು ಅಂದಿನ ಜನರ ಉದಾತ್ತಧ್ಯೇಯವಾಗಿತ್ತು. ಅಂತೆಯೇ ದೇವಾಲಯಗಳ ನಿರ್ಮಾಣ, ದಾನ ದತ್ತಿ ಕಾರ್ಯಗಳು ಭರದಿಂದ ಸಾಗಿ ಬಂದದ್ದು ಕಂಡು ಬರುತ್ತದೆ. ಅಂತಯೇ ಸಗರನಾಡಿನಲ್ಲಿ ಅನೇಕ ದೇವಾಲಯಗಳು ಕಂಡುಬರುತ್ತವೆ. ದೇವಾಲಯಗಳು ಅಂದಿನ ಜನತೆಯ ಪ್ರಮುಖ ಭಕ್ತಿಯ ಕೇಂದ್ರಗಳಾಗಿದ್ದವು. ದೇವಾಲಯಗಳು ಕೇವಲ ಭಕ್ತಿಗೆ ಮಾತ್ರ ಸೀಮಿತವಾಗಿರದೆ ಅಂದಿನ ಸಾಮಾಜಿಕ, ಆರ್ಥಿಕ ಕಾರ್ಯಗಳನ್ನು ನಿಭಾಯಿಸುವ ಸಂಸ್ಥೆಗಳಾಗಿದ್ದವು ಎಂಬುದು ತಿಳಿದುಬರುತ್ತದೆ. ಈ ನಾಡಿನಲ್ಲಿ ವಿವಿಧ ಧರ್ಮದ ದೇವಾಲಯಗಳನ್ನು ನಿರ್ಮಿಸುವುದರ ಮೂಲಕ ಧರ್ಮವನ್ನು ಸಮಾನತೆಯಿಂದ ಕಾಣುತ್ತಿದ್ದರು. ದೇವಾಲಯಗಳ ನಿರ್ಮಾಣ, ಅವುಗಳ ನಿರ್ವಹಣೆ, ಅಂದಿನ ರಾಜರ, ಮಹಾಮಂಡಲೇಶ್ವರರ, ಅಧಿಕಾರಿಗಳ ಜವಾಬ್ದಾರಿಯಾಗಿತ್ತು. ದಾನ ದತ್ತಿ ಕೊಡುವುದರ ಮೂಲಕ ಅವುಗಳ ರಕ್ಷಣೆಯ ಜವಾಬ್ದಾರಿಯನ್ನು ನಿರ್ವಹಿಸುತ್ತಿದ್ದರು.

### ೭.೧.ಶೈವ ದೇವಾಲಯಗಳು :

ಸಗರ ನಾಡಿನ ಪ್ರಾಚೀನ ಶೈವ ಧರ್ಮದ ಪ್ರಮುಖ ಶಾಖೆಗಳಾದ ಕಾಳಾಮುಖ ಹಾಗೂ ಪಾಶುಪತ ಶಾಖೆಗಳು ವ್ಯಾಪಕವಾಗಿ ಪ್ರಚಾರದಲ್ಲಿದ್ದವು. ಶಾಸನಗಳಲ್ಲಿ ಉಲ್ಲೇಖಗೊಂಡಿರುವ ಶೈವ ದೇವಾಲಯ, ಶೈವ ಸ್ಥಾನಚಾರ್ಯರು, ಕಟ್ಟಿಸಿದವರ, ದತ್ತಿ ಬಿಟ್ಟವರ ಮತ್ತಿತರ ಅಂಶಗಳು ಈ ಮುಂದಿನಂತೆ ನೋಡುಬಹದು. ಶಂಕರನಾರಾಯಣ, ಕುಮಾರೇಶ್ವರ, ಉಗ್ರಭೀಮೇಶ್ವರ, ರಾಮೇಶ್ವರ, ಚಂದೇಶ್ವರ, ಮಾಚೇಶ್ವರ, ಬೊಂಕೇಶ್ವರ, ನಖರೇಶ್ವರ, ಕಮ್ಮಂಟೇಶ್ವರ, ಮಲ್ಲಿಕಾರ್ಜುನ, ರುದ್ರೇಶ್ವರ, ಲಕ್ಷ್ಮಣೇಶ್ವರ, ಕಕ್ಕೇಶ್ವರ, ಹಂದೇಶ್ವರ, ಸೋಮೇಶ್ವರ, ಕೇತೇಶ್ವರ, ಗವರೇಶ್ವರ, ಮುಂತಾದ ದೇವಾಲಯಗಳು ಹಗರಟಗಿ, ರಾಜನಕೋಳೂರು, ಮುದನೂರು, ಏವೂರು, ಕನ್ನಳ್ಳಿ, ದೇವಪುರ, ಕೊಂಡಗುಳಿ, ಕುಳಗೇರಿ, ಕಕ್ಕೇರಿಗಳಲ್ಲಿ ಕಂಡುಬರುವ ಶಾಸನೋಕ್ತ ದೇವಾಲಯಗಳಾಗಿವೆ.

ಕಲ್ಯಾಣ ಚಾಲುಕ್ಯ ಆರನೇ ವಿಕ್ರಮಾದಿತ್ಯನ ದಂಡನಾಯಕ ಬಮ್ಮಿದೇವನು ಹೆಮ್ಮಡಗಿ ಹಂದೇಶ್ವರ ದೇವರಿಗೆ ದತ್ತಿಬಿಟ್ಟಿರುವ, ಹಂದೇಶ್ವರ ದೇವಾಲಯ ಕಟ್ಟಿಸಿರುವ ಹಾಗೂ ಆ ದೇವಾಲಯದ ವರ್ಣನೆ ಶಾಸನದಲ್ಲಿ ಈ ರೀತಿಯಾಗಿ ಮೂಡಿ ಬಂದಿದೆ.

"ಈ ಸ್ವರಭಕ್ತಂ ಪರಮಮಹೇಸ್ವರಸೌದಾರ್ಯ್ಯ
ತುಂಗನೂರ್ಜ್ಜಿತ ತೇಜ(ಂ) ಸಾಸ್ವತಮೆನೆ
ಮಾಡಿಸಿ ಪಂದೇಸ್ವರಮಂ ಸುಪ್ರತಿಷ್ಠಿತಂ
ಹಂದರಸಂ ॥ ಆ ಪಂದಿರಾಜಂ ಮಾಡ್ಸಿದ
ಶಿವಾಲಯದ ವಿಸ್ತರಮೆಂತೆಂದಡೆ ॥
ಭಾಸುಧಾಗ್ರಸ್ಥಿರಂ ಜಂಪುಗಳಳವಡೆ ತದ್ಭಿತ್ತಿಗಳು
ಗರ್ಭ್ಬಸೌಖ್ಯಾ ವಾಸಂಗಳು ಚೆಲ್ವುವೆತ್ತಿರ್ದ್ದಡೆ
ಕೆಲದೆರಡುಂ ಪೂರ್ವ್ವ ಮಧ್ಯಸ್ತರಂಗಕ್ಕ ಸುಸ್ತಂಭಂಗಳುಂ
ಸುತ್ತಣ ಸುರರಗ್ರಿಹಂ ವಿಶ್ವಕರ್ಮ್ಮಂಗಶಕ್ಯಂ ಲೇಸಿಂ
ಶ್ರೀಲಿಂಗ ಹಂದೇಶ್ವರ ಗ್ರಿಹಮೆಸೆಯಲು ಮಾಡಿದಂ
ಪಂದಿರಾಜಂ ॥"[೧]

ಸಾಮೂಹಿಕ ಪೂಜಾ ಕೇಂದ್ರಗಳಾದ ಸಗರನಾಡಿನ ದೇವಾಲಯಗಳು ಸಮಾಜದ ಒಂದು ಅಂಗವಾಗಿ ರೂಪಗೊಳ್ಳುತ್ತಾ ಬಂದಿವೆ. ದೇವರಿಗೆ ಪೂಜೆ, ಪುನಸ್ಕಾರ, ಅದನ್ನು ಮಾಡುವವರು, ಅವರಿಗೆ ಸಹಾಯ ಮಾಡುವವರು, ಅವರೆಲ್ಲರ ಜೀವನ ನಿರ್ವಹಣೆ, ಹೀಗೆ ದೇವಾಲಯಗಳ ಜವಾಬ್ದಾರಿ ಹೆಚ್ಚುತ್ತಾ ಹೋಯಿತು. ದೇವಾಲಯಗಳು ವಿದ್ಯಾಕೇಂದ್ರಗಳಾಗಿ, ಮಠಗಳಾಗಿ, ಮಾರ್ಪಟ್ಟಿರುವುದರಿಂದ ದೇವಾಲಯಗಳ ಜವಾಬ್ದಾರಿ ಹೆಚ್ಚಿತು. ಪೂಜಾ ಸ್ಥಳವಾಗಿ ಉಗಮಗೊಂಡ ದೇವಾಲಯವು ಕ್ರಮೇಣ ಸಮಾಜದ ಕೇಂದ್ರ ಬಿಂದುಗಳಾದವು. ಧಾರ್ಮಿಕವಾಗಿ, ಶೈಕ್ಷಣಿಕವಾಗಿ ಮತ್ತು ಸಾಮಾಜಿಕವಾಗಿ ನಾಡಿನ ಜನತೆಯ ಸರ್ವತೋಮುಖ ಅಭಿವೃದ್ಧಿಗಾಗಿ ದೇವಾಲಯಗಳು ಬೆಳೆದುಬಂದವು. ಇಂತಹ ದೇವಾಲಯಗಳಿಗೆ ಸಗರನಾಡಿನ ರಾಜರು, ಮಹಾಮಂಡಳೇಶ್ವರರು, ಅಧಿಕಾರಿಗಳು, ವರ್ತಕ ವರ್ಗದವರು ಇತರರು ದಾನ ದತ್ತಿ ಕೊಟ್ಟಿದ್ದು ಶಾಸನಗಳಿಂದ ತಿಳಿದುಬರುತ್ತದೆ.

ಏವೂರಿನ ಸೋಮೇಶ್ವರ ದೇವರಿಗೆ ಕಲ್ಯಾಣ ಚಾಲುಕ್ಯ ಆರನೇ ವಿಕ್ರಮಾದಿತ್ಯನ ದಂಡನಾಯಕ ರವಿದೇವ, ಮುದ್ದರಸ, ಲಕ್ಷ್ಮಣಯ್ಯ, ಸೋವರಸ, ಪೆರ್ಗಡೆ ನಾಗವರ್ಮ, ಸತ್ಯ ಪ್ರಚಾರಭಟ್ಟಾರಕ ದೇವ, ಇವರೆಲ್ಲರು ಸೇರಿ ಶಿವದೇವಾಲಯ ನಿರ್ಮಿಸಿ, ಅಲ್ಲಿನ "ಸೋಮೇಶ್ವರ ದೇವರಿಗೆ ಕರಿಯ ನೆಲ ಮತ್ತರು ೫೦, ಅಂಗಭೋಗ, ರಂಗಭೋಗ, ಖಂಡಸ್ಪುಟಿತ, ಅಲ್ಲಿನ ಪಾತ್ರ ವರ್ಗದವರಿಗೆ, ಓದುವ ಕೇಳುವ ವಿದ್ಯಾರ್ಥಿಗಳಿಗೆ ನಂದಾದೀವಿಗೆಗಾಗಿ ಭೂದಾನ ಕೊಟ್ಟದ್ದು"[೨] ಏವೂರು ಶಾಸನದಿಂದ ತಿಳಿದು ಬರುತ್ತದೆ.

ಸಿಂಹಪರ್ಷೆ ಮಂಡಳಿ ಪಂಡಿತ ದೇವರ ಶಿಷ್ಯ ಮ್ಮಿರಿಂಜೆಯ ಚಿಕ್ಕದೇವರ, ಪ್ರಶಿಷ್ಯರಪ್ಪ ಶ್ರೀಮದೀಶಾನರಾಶಿ ಪಂಡಿತರಿಗೆ, ಅಲ್ಲಿನ "ಬ್ರಾಹ್ಮಣರಿಗೆ ಹಾಗೂ ಅನಾಥರಿಗೆ ಅನ್ನ ಸಂತರ್ಪಣಕ್ಕಾಗಿ ಭೂ ದತ್ತಿ ನೀಡಿದ್ದು"[೩] ಏವೂರು ಶಾಸನದಿಂದ ತಿಳಿದುಬರುತ್ತದೆ. ಕಲ್ಯಾಣ ಚಾಲುಕ್ಯ ಆರನೇ ವಿಕ್ರಮಾದಿತ್ಯನ ಕಾಲದಲ್ಲಿ ಏವೂರಿನಲ್ಲಿರುವ ಇನ್ನೊಂದು ಗವರೇಶ್ವರ ದೇವರಿಗೆ ಕೆಂಬಾವಿ, ಕನ್ನೆಯಹಳ್ಳಿ, ಚೋಳನಹಳ್ಳಿ, ಕಕ್ಕೇರಿ, ಶಿವಪುರ, ಏವೂರಿನ ಸೆಟ್ಟಿಗಳಾದ ಅಪ್ಪಮಸೆಟ್ಟಿ, ಸೋವಿಸೆಟ್ಟಿ, ಲೋಕಿಸೆಟ್ಟಿ, ಕತ್ತಮಸೆಟ್ಟಿ, ಮಹಾಂತಿಸೆಟ್ಟಿ, ಏಚಿಸೆಟ್ಟಿ, ಕಕ್ಕೇರ ಕೇಸವಸೆಟ್ಟಿ, ಶಿವಪುರದ ಕೇತಿಸೆಟ್ಟಿ, ಸಂಕರಸೆಟ್ಟಿ, ಪಿಟ್ಟಿಸೆಟ್ಟಿ, ಸಂಧಿವಿಗ್ರಹ ಒಡೆಯಮಸೆಟ್ಟಿ, ಬೀರವಣಿಗ ಕಾಟಿಸೆಟ್ಟಿ, ಮಲ್ಲಿಸೆಟ್ಟಿ, ಎಳರಾವೆಯ ಹೆಲ್ಲಿಸೆಟ್ಟಿ, ನಾಗಸೆಟ್ಟಿ, ಏವೂರ ಸೆಟ್ಟಿಗುತ್ತ, ಕಾಕಿಸೆಟ್ಟಿ ಹಾಗೂ ಇನ್ನಿತರ ಸೆಟ್ಟಿಗಳಾದ ಹಲ್ಲವಸೆಟ್ಟಿ, ಕಲ್ಲಿಸೆಟ್ಟಿ, ದಾಸಿಸೆಟ್ಟಿ ಇವರೆಲ್ಲರು ಈ ನಾಡಿನಲ್ಲಿ ನೆರೆದು ಇಲ್ಲಿನ "ಗವರೇಶ್ವರ ದೇವರಿಗೆ ಹೊಂಗೆ೧, ಪೊಂಗೆ೧, ಅಡಿಕೆ೫ ಬಿಟ್ಟ ದತ್ತಿಯನ್ನು"[೪] ಏವೂರು ಶಾಸನದಿಂದ ಅರಿಯಬಹುದಾಗಿದೆ. ಇಲ್ಲಿನ ಕೇಶವ ದೇವರಿಗೆ ಕಲ್ಯಾಣ ಚಾಲುಕ್ಯ ಆರನೇ ವಿಕ್ರಮಾದಿತ್ಯನ ದಂಡನಾಯಕ ರವಿಯಣಭಟನು "ಖಂಡಸ್ಫುಟಿತ ಜೀರ್ಣೋದ್ಧಾರ, ಪೂಜಾನೈವಿದ್ಯ, ನಂದಾ ದೀವಿಗೆಗೆ ಪವಿತ್ರಾರೋಹಣ ೩೩. ಗೇಣಗಳೆ ಮತ್ತರು ೧, ಗಾಣ ೩, ಮನೆ ನಿವೇಶನವನ್ನು ದೇವರಿಗೆ ಬಿಟ್ಟ ಸುಂಕದತ್ತಿಯನ್ನು"[illegible] ಏವೂರು ಶಾಸನದಿಂದ ತಿಳಿಯ ಬಹುದಾಗಿದೆ. ಏವೂರಿನಲ್ಲಿರುವ ಕಮ್ಮಟೇಶ್ವರ ದೇವರಿಗಾಗಿ ಇಲ್ಲಿನ ಕಲ್ಕುಟಿಗ ಗೊತ್ತಳಿ, ಕಂಚಗಾರ ಗೊತ್ತಳಿ, ಬಡಿಗ, ಕಮ್ಮಾರ, ಅಕ್ಕಸಾಲಿಗರು ಮುಂತಾದ ವರ್ತಕ ವರ್ಗದವರು ೧೨೦ ಕೊತ್ತಳಿಯನ್ನು ಸುಂಕದತ್ತಿಯಾಗಿ "ಏಹೂರ ಕಂಮಟೇಶ್ವರರದೇವರ್ಗ್ಗೆ ೧೨೦ ಕೊತ್ತಳಿಯಿರ್ದ್ದು ಕೊಟ್ಟರು. ಕಲ್ಕುಟಿಗಗೊತ್ತಳಿ ಹೊಂಗೆ ಹಾಗ ಕಂಚಗಾರಗೊತ್ತಳಿ ಕಡಹರದ ಸುಣ್ಣವನಿತು ಮಂ ಬಡಗಿ ಕಂಮ್ಮಾ(ರ) ರಕ್ಕ ಸಾಲೆಯರು ಬೆರಟ್ಟುಂಬರಾದಿಯಾಗಿ ಒಕ್ಕಲ ಅಡ್ಡಮಂ"[೬] ಬಿಟ್ಟದ್ದು ಏವೂರು ಶಾಸನದಿಂದ ತಿಳಿದು ಬರುತ್ತದೆ. ಎಡೆಯಪುರದ ದೇವಗಿರಿಯ ಯಾದವ ಚಕ್ರವರ್ತಿ ಎರಡನೇ ಸಿಂಘಣನ

ಮಹಾಮಂಡಲೇಶ್ವರ ಹೈಹಯ ರೇವರಸ ಇಲ್ಲಿನ ಮಲ್ಲಿಕಾರ್ಜುನ ದೇವರಿಗೆ ಅಂಗಭೋಗ, ರಂಗಭೋಗಕ್ಕಾಗಿ ಭೂಮಿಯನ್ನು ದಾನ ಕೊಟ್ಟ ವಿವರಗಳಿವೆ. ಅಲ್ಲದೆ "ಅಯ್ಯಾವೊಳೆ ಐನೂರ್ವರು, ಮೂವತ್ತಾರು ಬೀಡು ಮುಮ್ಮುರಿದಂಡರು, ಉಭಯ-ನಾನಾದೇಶಿಗಳು ಇತರ ವ್ಯಾಪಾರಿ ವರ್ತಕರು ಸೇರಿ ಇಲ್ಲಿನ ಮಲ್ಲಿಕಾರ್ಜುನ ದೇವರಿಗೆ ಸುಂಕದತ್ತಿ ಕೊಟ್ಟಿದ್ದು"[೭] ಎಡೆಯಪುರ ಶಾಸನದಿಂದ ತಿಳಿದು ಬರುತ್ತದೆ. ಕಕ್ಕೇರಿಯಲ್ಲಿ ಕಲ್ಯಾಣ ಚಾಲುಕ್ಯ ಚಕ್ರವರ್ತಿ ಭೂಲೋಕಮಲ್ಲ ಮೂರನೇ ಸೋಮೇಶ್ವರನ ಮಹಾಮಂಡಳೇಶ್ವರ ಮಲ್ಲರೇವರಸ ಹಾಗೂ ಕಕ್ಕೇರಿಯ ಬಮ್ಮೆಯ ನಾಯಕ, ಮಾದೆಯನಾಯಕ ಮುಂತಾದವರು ಸೇರಿ ಇಲ್ಲಿನ "ಗವರೇಶ್ವರ ದೇವರ ಅಂಗಭೋಗ, ದೀಪದಾರತಿ, ನೈವೇದ್ಯಕ್ಕಾಗಿ ೨೬ ಮತ್ತರು ಭೂಮಿ, ಗಾಣವನ್ನು ದಾನ ಕೊಟ್ಟಿದ್ದು"[೮] ಕಕ್ಕೇರಿ ಶಾಸನದಿಂದ ತಿಳಿದುಬರುತ್ತದೆ.

ಕಲ್ಯಾಣ ಚಾಲುಕ್ಯ ಚಕ್ರವರ್ತಿ ಆರನೇ ವಿಕ್ರಮಾದಿತ್ಯನ ಕಾಲದಲ್ಲಿ ಮುದನೂರಿನ ಊರೊಡೆಯರು, ಐದನೂರು ಮಹಾಜನರು, ದಂಡನಾಯಕ ಕುಮಾರ ಸ್ವಾಮಿ ಪ್ರತಿಷ್ಠಾಪಿಸಿದ ಕುಮಾರೇಶ್ವರ ದೇವರ ಅಂಗಭೋಗ, ರಂಗಭೋಗ, ನೈವೇದ್ಯ, ನಂದಾದೇವಿಗೆ ಹಾಗೂ ಜೀರ್ಣೋದ್ಧಾರಕ್ಕಾಗಿ ಭೂಮಿ, ಗಾಣ, ಹಣ, ಅಂಗಡಿಗಳನ್ನು ದಾನವಾಗಿ ಕೊಟ್ಟಿದ್ದು ಮುದನೂರು ಶಾಸನದಿಂದ ತಿಳಿದು ಬರುತ್ತದೆ.

ಕಲ್ಯಾಣ ಚಾಲುಕ್ಯ ಚಕ್ರವರ್ತಿ ಜಗದೇಕಮಲ್ಲ ಹಾಗೂ ಯಾದವ ಸಿಂಘಣನ ಕಾಲದಲ್ಲಿದ್ದ ಮುದನೂರಿನ ಐದನೂರು ಮಹಾಜನರು, ಮಹಾಪ್ರಧಾನ ಸುಂಕವೆರ್ಗಡೆ, ಗಯಾಧರ ಹಾಗೂ ಸಗರ ೫೦೦ ಗ್ರಾಮದ ಸೆಟ್ಟಿಗುತ್ತ, ರೇಚಸೆಟ್ಟಿ, ಮೂದನೂರಿನ ಕೇಸರಸೆಟ್ಟಿ, ಹಾಗೂ ಬಸನೂರ ಸೌಧೋರೆ ಸಾತಿಸೆಟ್ಟಿ ಮುಮ್ಮುರಿದಂಡರು, ಉಭಯ-ನಾನಾದೇಸಿಯರು, ನಕರರು, ಬಣಜವ್ಯೆನೂರ್ವರು, ಆಯ್ಯಾವೊಳೆ ಐನೂರ್ವರು ಮುಂತಾದ ವರ್ತಕ ವರ್ಗದವರು ೧೮೦೦೦ ಮತ್ತರು ಭೂಮಿ, ಹೆರ್ಜುಂಕ (ಹಿರಿಯ ತೆರಿಗೆ) ಹಾಗೂ ವಡ್ಡರಾವುಳದ (ಹಿರಿಯ ರಾಜಕುಲದವರು) ತೆರಿಗೆಯ ಹಣವನ್ನು ಇಲ್ಲಿನ ರಾಮೇಶ್ವರ ದೇವರ ಅಂಗಭೋಗ ರಂಗಭೋಗ, ನೈವೇದ್ಯಕ್ಕಾಗಿ ಸಂತೆಯಿಂದ ಬರುವ ಆದಾಯದ ಹಣವನ್ನು ಹಾಗೂ ೫೦ ಗದ್ಯಾಣವನ್ನು ದಾನವಾಗಿ ಕೊಟ್ಟಿದ್ದು ಮುದನೂರು ಶಾಸನದಿಂದ ತಿಳಿದುಬರುತ್ತದೆ. ಕಲಚುರಿ ಚಕ್ರವರ್ತಿ ಬಿಜ್ಜಳ ರಾಯಮುರಾರಿ ಸೋವಿದೇವ, ಅಹವಮಲ್ಲ ಮತ್ತು ಯಾದವ ಐದನೇ ಬಿಲ್ಲಮದೇವ ಹಾಗೂ ಮುದನೂರಿನ ಮಹಾಜನರು, ನಾಡಪ್ರಭುಗಳು, ಮಹಾಪ್ರಧಾನರು, ಸೇನಾಪತಿಗಳು, ದಂಡನಾಯಕ ಕುಮಾರ ಬಮ್ಮಿದೇವ, ಶ್ರೀಕರಣ ವೈಜಯ್ಯ, ಇಲ್ಲಿನ ಲಕ್ಷಣೇಶ್ವರ ದೇವರ ಅಂಗಭೋಗ-ರಂಗಭೋಗ ಮತ್ತು ನೈವೇದ್ಯಕ್ಕಾಗಿ ದೇವರಕೇರಿ (ಓಣಿ)ಯನ್ನು ಅರುವಣದಿಂದ (ನೇಗಿಲ ತೆರಿಗೆ) ಬಂದ

ಹಣವನ್ನು ದಾನವಾಗಿ ನೀಡಿದ್ದು "ಶ್ರೀ ಲಕ್ಷ್ಮಣೇಶ್ವರ ದೇವರ್ಗ್ಗೆ ನಂದಾದೀವಿಗೆ ಯೆಣ್ಣೆ ಕೆಂಬಾವಿಯ ತೆಲ್ಲಿಗ ಪೈಜಿಮೆ. . . ಮಗಂ ಕೇಶಿಯಣಂ ಶಿಲಾಗಾಣವಂ (ಮಾ)ಡಿಸಿ"' ಕೊಟ್ಟ ಉಲ್ಲೇಖ ಮುದನೂರು ಶಾಸನದಿಂದ ತಿಳಿದುಬರುತ್ತದೆ. ಕಲ್ಯಾಣ ಚಾಲುಕ್ಯ ಚಕ್ರವರ್ತಿ ಮೂರನೇ ಸೋಮೇಶ್ವರನ ಮಹಾಮಂಡಳೇಶ್ವರ ಮಲ್ಲಿರೇವರಸ, ಮುದನೂರಿನ ಒಡೆಯರು, ಮಹಾಸಾಮಂತ ಹಂಡೆಯ ನಾಯಕ, ಹೆಗ್ಗಡೆ ಬಮ್ಮೆಯ ನಾಯಕ, ಹಗರಟಿಗೆ ನಾಡಸೆಟ್ಟಿ, ಹೆರ್ಜುಂಕ ಸುಂಕವೆರ್ಗ್ಗಡೆ, ನಾಗೆಯನಾಯಕ, ನಕರರು, ಸೊಲ್ಲಿಗ ಸಮಯಂಗಳು ಮುಂತಾದ ವರ್ತಕರು ಇಲ್ಲಿನ ಮಾರ್ಕಂಡೇಶ್ವರ ದೇವರ ಪೂಜೆಗಾಗಿ ಅಂಗಭೋಗ, ರಂಗಭೋಗ, ನೈವೇದ್ಯಗಳಿಗಾಗಿ ಭೂಮಿ ಹಾಗೂ ಗಾಣವನ್ನು ದಾನವಾಗಿ ಕೊಟ್ಟಿದ್ದಾರೆ. ಬಿಲ್ಕೊಡೆ (ಮಾರಾಟದ ಸಾಮಗ್ರಿ ಮೇಲಿನ ತೆರಿಗೆ) ಸೆಟ್ಟಿದೆರೆ (ವ್ಯಾಪಾರಿಗಳ ಮೇಲಿನ ತೆರಿಗೆ) ವಡ್ಡರಾವುಳ (ಹಿರಿಯ ರಾಜಕುಲದವರು) ಬೀರವಣ (ವೀಳೆದ್ಯೆಲೆಯ ಕಟ್ಟುಗಳ ಮೇಲಿನ ತೆರಿಗೆ) ಸೇಸೆ (ರಾಜನಿಗೆ ವಿವಾಹದ ಸಂದರ್ಭದಲ್ಲಿ ಜನತೆ ಕೊಡುತ್ತಿದ್ದ ಕಾಣಿಕೆ) ಎತ್ತಿನೊಕ್ಕ (ಎತ್ತುಗಳ ಮೇಲಿನ ತೆರಿಗೆ) ಈ ಎಲ್ಲ ತೆರಿಗೆಗಳಿಂದ ಬಂದ ಹಣವನ್ನು ಇಲ್ಲಿನ ದೇವರಿಗೆ ದಾನವಾಗಿಕೊಟ್ಟಿದ್ದು ಮುದನೂರು ಶಾಸನದಿಂದ ತಿಳಿದುಬರುತ್ತದೆ. ಭತ್ತಗ್ರಾಮವಾದ ರಾಜನಕೋಳೂರಿನಲ್ಲಿ ಯಾದವ ಚಕ್ರವರ್ತಿ ಎರಡನೇ ಸಿಂಗಣನ ಕಾಲದಲ್ಲಿ ಇಲ್ಲಿನ ಮಹಾಪ್ರಭುಗಳಾದ ಬಮ್ಮರಸ, ದೇವರಸ, ಮಾದರಸ, ನಾಗರಸ, ತಿಕ್ಕರಸ, ನಾಡಿನ ಸೆಟ್ಟಿಗಳಾದ ಬಮ್ಮಿಸೆಟ್ಟಿ, ಚಂದಿಸೆಟ್ಟಿ, ದೇವಣಸೆಟ್ಟಿ, ತೊನಸೆಯ ದೇವಿಸೆಟ್ಟಿ, ತಂಬುಲಿಗ ಜೋಗಿಸೆಟ್ಟಿ, ದಾಸಿಸೆಟ್ಟಿ ಮತ್ತು ಅರವತ್ತೊಕ್ಕಲು ಮುಮ್ಮುರಿದಂಡರು, ವ್ಯಾಪಾರಿಗಳು, ಹನ್ನವಣಿಗರು ಹಾಗೂ ಸಗರನಾಡಿನ ಕಾಚಯ್ಯ, ಕೆಂಗಯ್ಯ, ಕಲ್ಲಯ್ಯ, ಬಮ್ಮಯ್ಯ ಇವರೆಲ್ಲರು ಏಕಸ್ತರಾಗಿ ನೆರೆದು ರಾಜನಕೋಳೂರಿನ ಶಂಕರನಾರಾಯಣ ದೇವರಿಗೆ ಕೊಟ್ಟಲ್ಲಿ ಮಾನ ೧, ಕೊಂಡಲ್ಲಿ ಮಾನ ೧, ಹಾಗೂ ಕಲ್ಲುಗಾಣವನ್ನು ದತ್ತಿಯಾಗಿ ಬಿಟ್ಟ ವಿಷಯವನ್ನು ರಾಜನಕೋಳೂರು ಶಾಸನದಿಂದ ತಿಳಿದು ಬರುತ್ತದೆ.

ಹಗರಟಗಿ ಕಲ್ಯಾಣ ಚಾಲುಕ್ಯ ಚಕ್ರವರ್ತಿ ಆರನೇ ವಿಕ್ರಮಾದಿತ್ಯನ ಕಾಲದಿಂದ ಹಿಡಿದು ಯಾದವ ಚಕ್ರವರ್ತಿ ಇಮ್ಮಡಿ ಸಿಂಗಣದೇವನ ಸರ್ವಾಧಿಕಾರಿಗಳವರೆಗೂ ಶೈವ ದೇವಾಲಯಗಳಿಗೆ ದಾನ ದತ್ತಿ ಕೊಟ್ಟಿದ್ದು ತಿಳಿದುಬರುತ್ತದೆ. ಹಗರಟಗಿ–ಮುನ್ನೂರು ಸೆಟ್ಟಿಗುತ್ತ, ಪಾರಿಸಸೆಟ್ಟಿ, ರಾಮಿಸೆಟ್ಟಿ, ಮುಮ್ಮುರಿದಂಡರು, ಸರ್ವಾಯಂಗಳು, ಎಂಟುಗಾಮುಂಡರು, ಇವರೆಲ್ಲರೂ ಮಹಾಸಭೆಯಲ್ಲಿ ನೆರೆದು ಏಕಸ್ತರಾಗಿ ಅಯನೊರ್ವೇಶ್ವರ ದೇವರು. ಬಾಚೇಶ್ವರ ದೇವರು, ಕೇತೇಶ್ವರ ದೇವರು ಹಾಗೂ ಚೌಡೇಶ್ವರ ದೇವಿಗೆ ಭೂದತ್ತಿ ಗಾಣ, ನಿವೇಶನವನ್ನು ದಾನವಾಗಿ ಕೊಟ್ಟಿದ್ದು ಹಗರಟಗಿ ಶಾಸನದಿಂದ

ತಿಳಿದುಬರುತ್ತದೆ. ಸಂಗಮದ ಸಂಗಮೇಶ್ವರ ದೇವರಿಗೆ ಇಲ್ಲಿನ ಚಾಳುಕ್ಯ ಚಕ್ರವರ್ತಿ ಜಗದೇಕಮಲ್ಲನ ದಂಡನಾಯಕ ಚಿದ್ದರಸ ಹಾಗೂ ಬ್ರಾಹ್ಮಣರು ಸೇರಿ ಹೈನುಗಾರಿಕೆ (ತುಪ್ಪಕ್ಕಾಗಿ) ಆರು ಎಮ್ಮೆಗಳನ್ನು ದತ್ತಿಯಾಗಿ ಬಿಟ್ಟಿದ್ದು ಸಂಗಮ ಶಾಸನದಿಂದ ತಿಳಿದುಬರುತ್ತದೆ. ಕೆಂಬಾವಿ ಹನ್ನೆರಡು ವಿಭಾಗದಲ್ಲಿದ್ದ ಬೈಚಬಾಳ ಗ್ರಾಮವನ್ನು ಪ್ರಭುಸಾಮ್ಯದ ಐದು ಜೀವಿತವನ್ನು, ಹಾಗವನ್ನು, ದತ್ತಿಯಾಗಿ ಕೊಟ್ಟಿದ್ದಾರೆ. ಈ ದಾನ ದತ್ತಿಯನ್ನು ದಂಡನಾಯಕ ಸಿಂಗರಸರ ವಂಶದವರೆಲ್ಲರೂ ಪಾಲಿಸಬೇಕೆಂದೂ ಸಂಗಮ ಶಾಸನದಿಂದ ತಿಳಿದದುಬರುತ್ತದೆ. “ದೇವಾಲಯ ಕಟ್ಟಿದವನಿಗೆ ಉಣ್ಣಲು ಒಂದು ಮತ್ತರು ಭೂಮಿಯನ್ನು ಹಾಗೂ ವಾಸಿಸಲು ಮನೆಯ ನಿವೇಶನವೊಂದನ್ನು ಕೊಟ್ಟಿದ್ದು”[೧೦] ಬೈಚಬಾಳ ಶಾಸನದಿಂದ ತಿಳಿದುಬರುತ್ತದೆ. ಹೀಗೆ ಸಗರನಾಡಿನ ಶಾಸನಗಳಲ್ಲಿ ಶೈವ ದೇವಾಲಯಗಳಿಗೆ ದಾನ ದತ್ತಿಕೊಟ್ಟಿರುವುದು ಮಹತ್ವದ್ದಾಗಿದೆ. ರಾಜರು, ಮಹಾಮಂಡಳೇಶ್ವರರು, ಅಧಿಕಾರಿಗಳು, ಸೆಟ್ಟಿಗಳು, ವರ್ತಕರು ದೇವಾಯಗಳಿಗೆ ದಾನ–ದತ್ತಿಗಳನ್ನು ಕೊಟ್ಟು ತಮ್ಮ ಭಕ್ತಿ ನಿಷ್ಠೆಯನ್ನು ತೋರಿದ್ದಾರೆ.

ಕಲ್ಯಾಣ ಚಾಲುಕ್ಯ ಮೂರನೇ ತೈಲಪನ ಸಾಮಂತ ಹೈಹಯವಂಶದ ಏಚರಸನು ರಾಮತೀರ್ಥ ದೇವಾಲಯದ ಅಂಗಭೋಗ, ವಿದ್ಯಾಸತ್ರಗಳಿಗಾಗಿ, ಮಠದಾಚಾರ್ಯರಿಗೆ ಭೂದಾನ ನೀಡಿದ ವಿಷಯ ತೀರ್ಥದ ಹಿಂಭಾಗ ಎಡಭಾಗದ ಶಾಸನದಿಂದ ತಿಳಿದುಬರುತ್ತದೆ. ಇದೇ ದೇವಾಲಯದ ಇನ್ನೊಂದು ಶಾಸನದಿಂದ ಕಲಚೂರಿ ಅರಸ ರಾಯಮುರಾರಿ ಸೋವಿದೇವನ ಸಾಮಂತ ಹೈಹಯ ವಂಶದ ಅಲ್ಲಹುಲಿದೇವನು ರಾಮೇಶ್ವರ ದೇವಾಲಯದ ಮಠದಾಚಾರ್ಯ ಚಂದ್ರರಾಶಿ ಪಂಡಿತ ದೇವರಿಗೆ ಆಯದಯೆ, ಕಿರುಕುಳ, ಸಂತೆವಣ, ಸಿದ್ಧಾಯ ಹಾಗೂ ಪಾರಿಖಾಯೆ ಹೀಗೆ ವಿವಿಧ ಬಗೆಯ ತೆರಿಗೆಗಳ ಆದಾಯವನ್ನು ದಾನ ಕೊಟ್ಟಿದ್ದು ಕುಳಗೇರಿ ಶಾಸನದಿಂದ ತಿಳಿದುಬರುತ್ತದೆ. ಸಗರ ನಾಡಿನ ದೇವಾಲಯಗಳಿಗೆ ಕೇವಲ ರಾಜರಷ್ಟೇ ಅಲ್ಲ ರಾಣಿಯರು ಹಾಗೂ ಮಹಾಮಂಡಲೇಶ್ವರರ ಹೆಂಡತಿಯರು ದಾನ ದತ್ತಿ ಕೊಡುತ್ತಿದ್ದರು. ಕಲ್ಯಾಣ ಚಾಲುಕ್ಯ ಚಕ್ರವರ್ತಿ ಆರನೇ ವಿಕ್ರಮಾದಿತ್ಯನ “ರಾಣಿ ಚಂದಲದೇವಿ ಭತ್ತ ಗ್ರಾಮವಾದ ರಾಜನಕೋಳೂರಿನ ಶಂಕರ ನಾರಾಯಣ ದೇವರಿಗೆ ೪೨ ಗೇಣ ಘಳೆ, ಕರಿಯ ನೆಲ ಮತ್ತರು ೪, ಹರಳು ಮತ್ತರು ೨, ತೋಟ ೧,ಗಾಣ ೧, ಪೂಜಾ ನಿವೇಶನ ೧ ದತ್ತಿಯಾಗಿ ಬಿಟ್ಟಿದ್ದನ್ನು”[೧೧] ರಾಜಕೋಳೂರು ಶಾಸನದಿಂದ ತಿಳಿಯಬಹುದಾಗಿದೆ. ಆರನೇ ವಿಕ್ರಮಾದಿತ್ಯನ ಇನ್ನೊಬ್ಬ ರಾಣಿಯಾದ ಮೈಳಾಲದೇವಿ ಭತ್ತಗ್ರಾಮ ಕುಳಗೇರಿಯ ನಾಗೇಶ್ವರ ದೇವರಿಗೆ ಕೆರೆಯನ್ನು ದಾನ ಕೊಟ್ಟಿದ್ದು ಕುಳಗೇರಿ ಶಾಸನದಿಂದ ತಿಳಿದುಬರುತ್ತದೆ. ಕಲ್ಯಾಣ ಚಾಲುಕ್ಯ ಚಕ್ರವರ್ತಿ ಒಂದನೇ

ಸೋಮೇಶ್ವರನ ಮಹಾಮಂಡಳೇಶ್ವರನಾದ ರೇವರಸನ ಹೆಂಡತಿ ಮಾಳಿಯಬ್ಬರಸಿ ಕೆಂಬಾವಿಯಲ್ಲಿ ಮಾಳಿಬೇಶ್ವರ ದೇವಾಲಯ ಕಟ್ಟಿಸಿ, ದೇವರ ಅಂಗಭೋಗ-ರಂಗಭೋಗ, ತಪೋಧನರು, ವಿದ್ಯಾರ್ಥಿಗಳ ಆಹಾರ ದಾನಕ್ಕಾಗಿ ೧೦೦೦ ಮತ್ತರು ಭೂಮಿ, ಎಲೆಯ ತೋಟ ದಾನವಾಗಿ ಕೊಟ್ಟಿದ್ದು ಕೆಂಬಾವಿ ಶಾಸನದಲ್ಲಿದೆ. ಇಲ್ಲಿರುವ ಇನ್ನೊಂದು ಚಾವುಂಡೇಶ್ವರ ದೇವರಿಗೆ ಕಾಸಕ್ಕಬ್ಬೆ ಎನ್ನುವವಳು ಕಳೇಶ್ವರ ಪಂಡಿತರ ಕಾಲ್ತೊಳೆದು, ತಪೋಧನರ ಆಹಾರಕ್ಕಾಗಿ ಬಿಟ್ಟ ದತ್ತಿಯನ್ನು ಕೆಂಬಾವಿ ಶಾಸನದಿಂದ ತಿಳಿದು ಬರುತ್ತದೆ.

ಕಲ್ಯಾಣ ಚಾಲುಕ್ಯ ಚಕ್ರವರ್ತಿ ಆರನೇ ವಿಕ್ರಮಾದಿತ್ಯನ ಮಹಾಮಂಡಳೇಶ್ವರ ಜೋಗಮರಸನ ಹೆಂಡತಿ ತಾರಾದೇವಿ ಮುದನೂರಿನ ಮಹಾಜನರಿಗೆ ೫೦ ಗದ್ಯಾಣ ಕೊಟ್ಟು, ಅವರಿಂದ ಭೂಮಿಯನ್ನು ಖರೀದಿಸಿ, ಈ ಗ್ರಾಮದಲ್ಲಿರುವ ಉತ್ತರೇಶ್ವರ ದೇವಾಲಯಕ್ಕೆ ಭೂದಾನ ಕೊಟ್ಟಿದು ಮುದನೂರು ಶಾಸನದಿಂದ ತಿಳಿದುಬರುತ್ತದೆ. ಹೆಗ್ಗಡತಿ ಕೇತಿಯಕ್ಕ ಎಂಬ ಮಹಿಳೆ ತುಮಕೂರಿನ ಮಲ್ಲಿಕಾರ್ಜುನ ದೇವರಿಗೆ ೨ ಮತ್ತರು ಭೂಮಿ ದಾನ ಕೊಟ್ಟಿದ್ದು ತುಮಕೂರು ಶಾಸನದಿಂದ ತಿಳಿದುಬರುತ್ತದೆ.

## ೭.೨.ತ್ರಿಕೂಟ ದೇವಾಲಯಗಳು :

ತ್ರಿಕೂಟ ದೇವಾಲಯವೆಂದರೆ ಮೂರ ಶಿಖರಗಳುಳ್ಳ ದೇವಾಲಯ. ಇವುಗಳಿಗೆ ತ್ರಿಕೂಟ ದೇವಾಲಯಗಳೆಂದು ಕರೆಯುತ್ತಾರೆ. ಈ ದೇವಾಲಯಗಳಲ್ಲಿ ಬ್ರಹ್ಮ, ಶಿವ, ವಿಷ್ಣು, ಮಹೇಶ್ವರ, ಕೇಶವ ಹೀಗೆ ಯಾವುದೇ ಮೂರು ಜಗತ್ಪಾಲಕರಿರುತ್ತಾರೆ. ಇಂತಹ ದೇವಾಲಯಗಳು ಸಗರನಾಡಿನಾದ್ಯಂತ ಇರುವುದು ಶಾಸನೋಕ್ತ ದೇವಾಲಯಗಳ ಉಲ್ಲೇಖದಿಂದ ಅರಿಯ ಬಹುದಾಗಿದೆ. "ತ್ರಿಕೂಟ ನಾಗೇಶ್ವರ ದೇವಾಲಯ"[೧೨] ಹೋತಗಲ್ "ತ್ರಿಕೂಟ ಭೈರವ ದೇವಾಲಯಗಳು"[೧೩] ಹಗರಟಗಿಗಳಲ್ಲಿ ಪ್ರಮುಖವಾಗಿ ಕಂಡು ಬರುತ್ತವೆ. ಅಗ್ರಹಾರ ಅಂಕಲಗೆಯ ಶ್ರೀ ಶಂಕರದೇವಾಲಯದ ಒಳಗೆ "ತ್ರಿಮೂರ್ತಿ ದೇವರ ಮೂರ್ತಿಗಳು"[೧೪] ಇರುವುದು ಅಂಕಲಗಿಯಲ್ಲಿ ಕಂಡುಬರುತ್ತವೆ. ಈ ದೇವಾಲಯಗಳಿಗೆ ದೇವರಂಗಭೋಗ, ನೈವೇದ್ಯಕ್ಕಾಗಿ ಹಾಗೂ ಪೂಜಾರಿಗೆ ದಾನ-ದತ್ತಿಕೊಟ್ಟಿದ್ದು ತಿಳಿದುಬರುತ್ತದೆ. ಈ ನಾಡಿನ ದೇವಾಲಯಗಳಲ್ಲಿ ತ್ರೈಪುರುಷ ಶಾಲೆಗಳು ಇದ್ದವು. ರಾಷ್ಟ್ರಕೂಟ ಕನ್ನರದೇವನ ಮೂರನೇ ಕೃಷ್ಣನ ಕಾಲದಲ್ಲಿ "ತ್ರೈಪುರಷ ದೇವರ ಶಾಲೆ"[೧೫] ಹಾರಣಗೇರಿ ಹಾಗೂ ಕಲ್ಯಾಣ ಚಾಲುಕ್ಯ ಜಗದೇಕಮಲ್ಲ ಎರಡನೇ ಜಯಸಿಂಹನ ಕಾಲದಲ್ಲಿ ದುಗ್ಗಣಾರ್ಯಭಟ್ಟ ಕಟ್ಟಿಸಿದ "ತ್ರೈಪುರುಷ ಶಾಲೆ"[೧೬] ತಿಂಥಿಣಿಯಲ್ಲಿ

ಕಂಡುಬರುತ್ತದೆ. ಇದೇ ಶಾಸನದಲ್ಲಿ ದುಗ್ಗಣಾರ್ಯಭಟ್ಟನ ವಂಶಾವಳಿಯ ಉಲ್ಲೇಖ ಈ ರೀತಿಯಾಗಿ ತಿಳಿದುಬರುತ್ತದೆ.




ಕೌಣ್ಡಿನ್ಯ ಗೋತ್ರ ಯಜುಶಾಖೆಗೆ ಸೇರಿದ ವಂಶಾವಳಿ ಇವರದಾಗಿತ್ತು. ಈ ರೀತಿ ತ್ರಿಕೂಟ ದೇವಾಲಯಗಳಿಗೆ ದಾನ-ದತ್ತಿ ಕೊಟ್ಟಿದ್ದು, ಅಲ್ಲಿನ ವಿದ್ಯಾರ್ಥಿಗಳಿಗೆ ಆಹಾರಕ್ಕಾಗಿ ಮುನ್ನೂರು ನಿವರ್ತನ, ಕರಿಯ ನೆಲ ದಾನ ಕೊಟ್ಟಿರುವುದು ತಿಂಥಿಣಿಯ ಶಾಸನದಿಂದ ತಿಳಿದುಬರುತ್ತದೆ. ಈ ಪ್ರಾಚೀನ ದೇವಾಲಯಗಳು ಅಂದಿನ ಜನತೆಯ ಶ್ರದ್ಧೆ, ಭಕ್ತಿ, ನಿಷ್ಠೆಗಳನ್ನು ಎತ್ತಿ ತೋರಿಸುವ ಕೇಂದ್ರಗಳಾಗಿದ್ದವು. ದೇವಾಲಯಗಳು ಧಾರ್ಮಿಕ ಪರಂಪರೆಯ ಕೇಂದ್ರ ಬಿಂದುಗಳಾಗಿದ್ದವು. ಕಷ್ಟ ಬಂದಾಗ ಜನರು ದೇವಾಲಯಗಳಿಗೆ ಹೋಗಿ ತಮ್ಮ ಕಷ್ಟಗಳನ್ನು ದೇವರ ಮುಂದೆ ಬೇಡಿಕೊಳ್ಳುತ್ತಿದ್ದರು. ಹರಕೆ ಹೊತ್ತುಕೊಳ್ಳುತ್ತಿದ್ದರು. ತಮ್ಮ ಬೇಡಿಕೆ ಈಡೇರಿದಾಗ ದೇವಾಲಯಕ್ಕೆ ಹೋಗಿ ಹರಕೆಯನ್ನು ಸಲ್ಲಿಸುತ್ತಿದ್ದರು. ಹಬ್ಬ ಹರಿದಿನದಂದು ದೇವಾಲಯಗಳನ್ನು ಅಲಂಕರಿಸುತ್ತಿದ್ದರು. ಜೊತೆಗೆ ದೇವಾಲಯಗಳು ವಿದ್ಯಾಕೇಂದ್ರಗಳಾಗಿದ್ದವು. ಹೀಗೆ ವಿವಿಧ ಚಟುವಟಿಕೆಗಳ ಕೇಂದ್ರಗಳಾಗಿರುತ್ತಿದ್ದವು ಎಂಬುದು ಶಾಸನಗಳಿಂದ ತಿಳಿದುಬರುತ್ತದೆ.

## ೭.೩ ಬ್ರಹ್ಮ ದೇವಾಲಯಗಳು :

ಬ್ರಹ್ಮನಿಗೆ ದೇವಾಲಯಗಳ ನಿರ್ಮಾಣ ಇಲ್ಲದಿರುವುದು ಅಂದಿನ ಜನರ ನಂಬಿಕೆ. ಆದರೆ ಸಗರನಾಡಿನಲ್ಲಿ ಶಾಸನೋಕ್ತ ಬ್ರಹ್ಮ ದೇವಾಲಯಗಳು ಹಾಗೂ ಅವುಗಳಿಗೆ ನೀಡಿದ್ದ ದಾನ-ದತ್ತಿಗಳ ಬಗ್ಗೆ ಉಲ್ಲೇಖಗಳಿವೆ. "ಅಂಕಲಗೆಯ ಬ್ರಹ್ಮದೇವಾಲಯಕ್ಕೆ"[೧೭] ಯಾದವ ಚಕ್ರವರ್ತಿ ಭಿಲ್ಲಮ ದೇವನ ಮಹಾಮಂಡಳೇಶ್ವರ ಮಲ್ಲಿದೇವರಸನ ಹೆಂಡತಿ ಮಹಾದೇವಿಯ ಅಧಿಕಾರಿ ಮಲ್ಲಯ್ಯ ಅಂಕಲಗೆಯಲ್ಲಿ ಬ್ರಹ್ಮ ದೇವಾಲಯವನ್ನು ನಿರ್ಮಿಸಿದ್ದಾನೆ. ಈ ದೇವಾಲಯಕ್ಕೆ ಹೊಂಗೆ ಮಾನ ।,ಎಲೆ ಹೇರಿಗೆ ಇಪ್ಪತ್ತೈದು, ಅಡಿಕೆ ಐದು ದಾನ-ದತ್ತಿಯಾಗಿ ಕೊಟ್ಟಿದ್ದಾನೆ. "ತಳಬೀಡಿನ ಬ್ರಹ್ಮ ದೇವಾಲಯಕ್ಕೆ"[೧೮] ಯಾದವ

ಚಕ್ರವರ್ತಿ ಸಿಂಘಣದೇವ ಹಾಗೂ ತಳಬೀಡಿನ ಮಹಾಪ್ರಭುಬೀರ ಗಾಮುಂಡ, ನನ್ನೆಗಾಮುಂಡರು ಸೇರಿ ಬ್ರಹ್ಮೇಶ್ವಂ ದೇವರಿಗೆ ಭೂಮಿ, ಎಣ್ಣೆ, ಗಾಣವನ್ನು ದಾನ ದತ್ತಿ ಕೊಟ್ಟಿದ್ದು ತಳಬೀಡಿನ ಶಾಸನದಿಂದ ತಿಳಿದುಬರುತ್ತದೆ. ಕೆಲ್ಲೂರಿನ ಬ್ರಹ್ಮ ದೇವಾಲಯಕ್ಕೆ ಕಳಚೂರ್ಯ ಚಕ್ರವರ್ತಿ ರಾಯಮುರಾರಿ ಸೋವಿದೇವನು ಇಲ್ಲಿನ ಆಚಾರ್ಯ ಚೆಲ್ಲೆಯನು ಕಟ್ಟಿಸಿದ ಬ್ರಹ್ಮೇಶ್ವರ ದೇವಾಲಯಕ್ಕೆ ನಿರ್ವೇಶನ, ಹಾಲಭಾವಿಯನ್ನು ದಾನ-ದತ್ತಿ ಕೊಟ್ಟಿದ್ದು ಕೆಲ್ಲೂರು ಶಾಸನದಿಂದ ತಿಳಿದುಬರುತ್ತದೆ.

## ೭.೪. ಸ್ತ್ರಿ ದೇವಾಲಯಗಳು :

ಪ್ರಾಚೀನ ಕಾಲದಲ್ಲಿ ಸ್ತ್ರೀದೇವಾಲಯಗಳು ದೊರೆಯುವುದು ತೀರ ವಿರಳ. ಆದರೂ ಸಗರನಾಡಿನ ಕೆಲ ಭಾಗಗಳಲ್ಲಿ ಮಾತ್ರ ಸ್ತ್ರೀ ದೇವಾಲಯಗಳು ನಿರ್ಮಿಸಿದ್ದು ಕಂಡುಬರುತ್ತವೆ. ಈ ದೇವಾಲಯಗಳಿಗೂ ಕೂಡ ದಾನ ದತ್ತಿ ನೀಡಿರುವುದು ಶಾಸನಗಳಿಂದ ತಿಳಿದು ಬರುತ್ತದೆ. ಕಲ್ಯಾಣ ಚಾಲುಕ್ಯ ಚಕ್ರವರ್ತಿ ಒಂದನೇ ಸೋಮೇಶ್ವರನ ಮಹಾಮಂಡಳೇಶ್ವರನಾದ ಹೈಹಯ ವಂಶದ ರೇವರಸ ಹಾಗೂ ಈತನ ಹೆಂಡತಿ ಮಾಳಿಯಬ್ಬರಸಿ ಕೆಂಬಾವಿಯಲ್ಲಿ ಮಾಳಿಬೇಶ್ವರ ದೇವಾಲಯವನ್ನು ನಿರ್ಮಿಸಿ, ಆ ದೇವರ ಅಂಗಭೋಗ, ರಂಗಭೋಗ, ತಪೋಧನರ ಹಾಗೂ ವಿದ್ಯಾರ್ಥಿಗಳ ಆಹಾರಕ್ಕಾಗಿ ದಾನ ಕೊಟ್ಟಿದ್ದಾಳೆ. ೧೦೦೦ ಮತ್ತರು ಭೂಮಿಯನ್ನು ದತ್ತಿಯಾಗಿ ನೀಡಿರುವುದು ಶಾಸನದಿಂದ ತಿಳಿದುಬರುತ್ತದೆ.

ಯಾದವ ಸೇವುಣನ ಚಕ್ರವರ್ತಿ ರಾಮಚಂದ್ರದೇವನ ಕಾಲದಲ್ಲಿ "ಸಿರವಾಳಸೇ (ಶೇ) ಖರಂ ಶ್ರೀಮಹಾಲಕ್ಷ್ಮೀದೇವಿಯ ದಿಬ್ಯ ಶ್ರೀ ಪಾದಪದ್ಮಾರಾಧಕಂ ಸಗರದ ಮಧೀಸ್ವ (ಶ್ವ)ರಂ ರಾಯಜೋಧನಾರಾಯಣ ನಾರಾಯಣದೇವನಾಯರಸರುಂ ಯಿವವರಯರ್ದ್ಧಾಂಗಲಕ್ಷ್ಮೀ ಪಟ್ಟಮಹಾದೇವಿ"[೯೯] ದೇವಾಲಯವನ್ನು ಆಂದೋಲದಲ್ಲಿ ನಿರ್ಮಿಸಿದ್ದು ಶಾಸನದಿಂದ ತಿಳಿದುಬರುತ್ತದೆ. ಯಾದವ ನಾರಾಯಣನ ಕಾಲದಲ್ಲಿ ಹಗರಟಗೆಯ ಮಹಾಜನರು ಸರ್ವಾಧಿಕಾರಿ ಪಾರಿಸಸೆಟ್ಟಿ, ಹಗರಟಗೆಯ-೩೦೦ ರ ಸೆಟ್ಟಿಗುತ್ತ, ರಾಮಿಸೆಟ್ಟಿ, ಮುಮ್ಮುರಿದಂಡರು, ಸರ್ವಾಯಂಗಳು, ಎಂಟು ಗಾಮುಂಡರು ಇವೆರೆಲ್ಲ ಒಂದಾಗಿ ನೆರೆದು ಹಗರಟಗೆಯಲ್ಲಿ ಚೌಡೇಶ್ವರ ದೇವಿಯ ದೇವಾಲಯವನ್ನು ನಿರ್ಮಿಸಿ, ಈ ದೇವಾಲಯಕ್ಕೆ ಅಂಗಭೋಗ-ರಂಗಭೋಗ, ಜೀರ್ಣೋದ್ಧಾರ, ನೈವೇದ್ಯ, ನಂದಾದೀವಿಗೆಗೆ ದಾನ-ದತ್ತಿ ಕೊಟ್ಟಿದ್ದು ಶಾಸನದಿಂದ ತಿಳಿದುಬರುತ್ತದೆ.

## ೭.೫. ವ್ಯಕ್ತಿನಾಮ ದೇವಾಲಯಗಳು :

ರಾಜರು, ರಾಣಿಯರು, ಮಹಾಮಂಡಳೇಶ್ವರರು, ಅಧಿಕಾರಿಗಳು, ಇತರ ಅಧೀನ ಅಧಿಕಾರಿಗಳನ್ನು ಮೆಚ್ಚಿಸಲು, ತಮ್ಮ ವಂಶಜರ ಹೆಸರಿನಲ್ಲಿ ದೇವಾಲಯಗಳನ್ನು ನಿರ್ಮಿಸಿದ್ದು ಶಾಸನಗಳಿಂದ ತಿಳಿದುಬರುತ್ತದೆ. ತಮ್ಮ ಹೆಸರನ್ನು ಅಜರಾಮರವಾಗಿ ಉಳಿಯಲು ತಮ್ಮ ಪೂರ್ವಿಕರ ಹಾಗೂ ಸಂಬಂಧಿಕರ ಹೆಸರಿನಲ್ಲಿ ದೇವಾಲಯಗಳು ನಿರ್ಮಿಸುವುದು ಅಂದು ಸಾಮಾನ್ಯವಾಗಿತ್ತು. ಕೆಲವೊಬ್ಬರು ತಮ್ಮ ಹೆಸರಿನಲ್ಲಿ ತಾವೇ ದೇವಾಲಯ ನಿರ್ಮಿಸಿದ್ದಾರೆ. ಹೀಗೆ ವ್ಯಕ್ತಿಗಳ ಹೆಸರಿನಲ್ಲಿ ದೇವಾಲಯ ನಿರ್ಮಿಸಲು ಕಾರಣ, ತಾವೇ ಸ್ವತಃ ಕಟ್ಟಿಸಿದ ದೇವಾಲಯಕ್ಕೆ ತಮ್ಮ ಹೆಸರನ್ನಿಡುತ್ತಿದ್ದರು.

ಅಲ್ಲಿರುವ ದೇವರ ಮೂರ್ತಿಯನ್ನು ತಮ್ಮ ಹೆಸರಿನಿಂದಲೇ ಪ್ರತಿಷ್ಠಾಪನೆ ಮಾಡುತ್ತಿದ್ದರು. ಹೀಗಾಗಿ ವ್ಯಕ್ತಿಗಳ ಹೆಸರಿನಲ್ಲಿ ದೇವಾಲಯ ನಿರ್ಮಿಸುವುದೆಂದರೆ ದೇವರ ಹೆಸರಿನಲ್ಲಿ ನಿರ್ಮಿಸಿದಂತೆ ಎಂಬ ಭಾವನೆಯೂ ಇದ್ದಿರಬಹುದು. ಇಂತಹ ಶಾಸನೋಕ್ತ ದೇವಾಲಯಗಳು ಸಗರ ನಾಡಿನಲ್ಲಿ ಈ ಮುಂದಿನಂತೆ ನೋಡಬಹುದು.

ಗುಣ್ಡಗೆಯ್ಯನ ಗುಣ್ಡಗೇಶ್ವರ ದೇವಾಲಯ "ಪೆರ್ಗ್ಗಡೆ ಗುಣ್ಡಗೆಯ್ಯನ ಮಗಂ (ಕೇಶಿ) ಮಯ್ಯನುಂ ಜಯಬ್ಬಯ್ಯಂ ಕಿ(ರ)ಯ ಸಾನ್ತನಂ ವಳಜಲ್ಬಯ್ಯಮನ್ತು ನಾಲ್ವರುಂ ಗುಣ್ಡಗೇಶ್ವರ ಲಿಙ್ಗ ಪ್ರತಿಷ್ಠೆಯಂ"[೨೦] ಮಾಡಿಸಿದ್ದು ಆಂದೋಲ ಶಾಸನದಿಂದ ತಿಳಿದು ಬರುತ್ತದೆ. ಮಾಳಿಯಬ್ಬರಸಿಯ ಮಾಳಿಬೇಶ್ವರ ದೇವಾಲಯ, ರೆಬ್ಬಣಯ್ಯನ ರೆಬ್ಬೇಶ್ವರ ದೇವಾಲಯ, ಧಾಯಿಮಯ್ಯನ ಧಾಯಿಮೇಶ್ವರ ದೇವಾಲಯ, ಶಂಕರ ಭಟ್ಟೋಪಾಧ್ಯಾಯನ ಶಂಕರ ದೇವಾಲಯ, ಕೊ(ಮಾ)ರ ಸ್ವಾಮಿಯ ಕುಮಾರೇಶ್ವರ ದೇವಾಲಯ, ರೆಬ್ಬಣಯ್ಯನ ರೇಬೇಶ್ವರ ದೇವಾಲಯ, ಪಂದಿರಾಜನ ಪಂದೇಶ್ವರ ದೇವಾಲಯಗಳು ನಿರ್ಮಿಸಿದ್ದು ಆಂದೋಲ, ಕೆಂಬಾವಿ, ಬೈಚಬಾಳ, ವಡಗೇರಿ, ಅಂಕಲಗಿ, ಮುದನೂರು, ಎಮ್ಮವಾಡಿಗೆಯಲ್ಲಿ ವ್ಯಕ್ತಿಗಳು ತಮ್ಮ ಹೆಸರಿನಲ್ಲಿ ದೇವಾಲಯ ನಿರ್ಮಿಸಿದ್ದಾರೆ. ಈ ದೇವಾಲಯಗಳಿಗೆ ಅಂಗಭೋಗ, ರಂಗ-ಭೋಗ, ೧೦೦೦ ಮತ್ತರು ಭೂಮಿ, ದಾನ ದತ್ತಿ ಕೊಟ್ಟಿದ್ದು ಇಲ್ಲಿನ ಶಾಸನಗಳಿಂದ ತಿಳಿದುಬರುತ್ತದೆ.

## ೭.೬. ಪರಿಚಾರಕ ವರ್ಗ :

ದೇವಾಲಯವನ್ನು ನಿರ್ಮಿಸಿದ ವ್ಯಕ್ತಿ ಅದರ ಕಾರ್ಯ ಚಟುವಟಿಕೆಗಳು ಸುಗಮವಾಗಿ ಸಾಗಲು ದಾನ ದತ್ತಿ ಬಿಡುತ್ತಿದ್ದರು. ರಾಜರು, ರಾಣಿಯರು, ಮಹಾಮಂಡಳೇಶ್ವರರು, ಅಧಿಕಾರಿಗಳು, ವರ್ತಕರು ಹಾಗೂ ಸಾಮಾನ್ಯ ಜನರು ಕೂಡ ಭೂಮಿ, ದವಸ-ಧಾನ್ಯ, ಗಾಣ, ಎಣ್ಣೆ, ಅಡಿಕೆ, ಹೂ, ಎಲೆಗಳನ್ನು ದಾನವಾಗಿ ಕೊಡುವ ಪದ್ಧತಿ ಅಂದಿನ ಜನರಲ್ಲಿ ರೂಢಿಯಾಗಿ ಬೆಳೆದು ಬಂದಿದೆ. ಕೊಟ್ಟಿರುವ ದಾನವನ್ನು ವ್ಯವಸ್ಥಿತವಾಗಿ, ಅಚ್ಚುಕಟ್ಟಾಗಿ ನೋಡಿಕೊಂಡು ಹೋಗಲು ಆಡಳಿತ ವರ್ಗ ಅಥವಾ ಪರಿಚಾರಕ ವರ್ಗದವರು ಇರುತ್ತಿದ್ದರು. ಪರ್ವಖಂಡಸ್ಫುಟಿತ, ಜೀರ್ಣೋದ್ಧಾರಕ್ಕೆ, ತಪೋಧನರಿಗೆ, ಓದುವ ಛಾತ್ರರ ಅಶನಾಚ್ಛಾದನಕ್ಕೆ, ಅಂಗಭೋಗ, ರಂಗಭೋಗ, ನೈವೇದ್ಯ, ಎಣ್ಣೆಗಾಣ ಹೀಗೆ ಮೊದಲಾದವುಗಳು ದಾನವಾಗಿ ನೀಡಿರುವುದು ಈ ನಾಡಿನ ಅಂದೋಲ, ಕೆಂಬಾವಿ, ಬೈಚಬಾಳ, ವಡಗೇರಿ, ಯಡ್ರಾಮಿ ಅಂಕಲಗಿ, ಶಾಸನಗಳಿಂದ ತಿಳಿದುಬರುತ್ತದೆ.

"ದೇವಾಲಯವನ್ನು ಕಟ್ಟಿಸಿದ ವ್ಯಕ್ತಿಗಳು ಅದರ ಚಟುವಟಿಕೆಗಳಲ್ಲಿ ಸಾರೋದ್ಧಾರವಾಗಿ ಮುಂದುವರೆದುಕೊಂಡು ಹೋಗಲು ಹೇರಳವಾದ ದತ್ತಿಗಳನ್ನು ಬಿಡುತ್ತಿದ್ದರು. ಸಾಮಾಜಿಕ ಮತ್ತು ಧಾರ್ಮಿಕ ಚಟುವಟಿಕೆಗಳನ್ನು ಸ್ವತಂತ್ರವಾಗಿ ನಡೆಯಿಸಿಕೊಂಡು ಹೋಗಲು ದೇವಾಲಯಗಳನ್ನು ನೈಷ್ಠಿಕ ಸ್ಥಾನಗಳನ್ನಾಗಿ ಮಾಡಲಾಗುತ್ತಿತ್ತು."[೨೧] ನೈಷ್ಠಿಕ ಸ್ಥಾನ ಎಂದರೆ ಬ್ರಹ್ಮಚಾರಿಗಳ ನೆಲೆ. ಕೆಲ ಶೈವ ಗುರುಗಳು ಬ್ರಹ್ಮಚಾರಿಗಳಾಗಿದ್ದರೆ, ಇನ್ನೂ ಕೆಲವರು ವಿವಾಹ ಮಾಡಿಕೊಂಡಿದ್ದರು. ಇವರು ವಾಸಿಸುವ ನೆಲೆಗಳನ್ನು ಸ್ಥಾನ ಎಂದು ಕರೆದರೆ, ಸ್ಥಾನದಿಂದಲೇ ಸ್ಥಾನಾಚಾರ್ಯರೆಂದು ಕರೆಯುವ ಪದ್ಧತಿ ರೂಢಿಯಲ್ಲಿ ಬಂದಿತ್ತು. ಯಾರು ನೈಷ್ಠಿಕ ಬ್ರಹ್ಮಚಾರಿಗಳಾಗಿದ್ದರೋ ಅವರನ್ನು ಸಮಾಜದಲ್ಲಿ ಹೆಚ್ಚು ಗೌರವದಿಂದ ಕಾಣುತ್ತಿದ್ದರು. ನೈಷ್ಠಿಕ ಬ್ರಹ್ಮಚಾರಿಗಳಾದ ಸ್ಥಾನಾಚಾರ್ಯರು ವಾಸಿಸುವ ನೆಲೆಗಳನ್ನು ನೈಷ್ಠಿಕ ಸ್ಥಾನ ಎಂದು ಕರೆಯಲಾಗಿದೆ. ದೇವಾಲಯವನ್ನು ಸ್ಥಾನಾಚಾರ್ಯರು ನೋಡಿಕೊಳ್ಳುತ್ತಿದ್ದರು. ಇವರು ಸ್ಥಾನಪತಿಗಳಾಗಿದ್ದರು. ಇವರ ಅಗಾಧವಾದ ಘನ ಪಾಂಡಿತ್ಯವನ್ನು "ಯಮನಿಯಮ ಸ್ವಾಧ್ಯಾಯ ಧ್ಯಾನ ಧಾರಣ ಮೌನಾನುಷ್ಠಾನ ಜಪ ಸಮಾಧಿ ಶೀಳ ಸಂಪನ್ನರ್ ಸಮಸ್ತ ವಿದ್ವಜ್ಜನ ಪ್ರಸನ್ನರ್ ಯಜನ ಯಾಜನ ಅಧ್ಯಯನ ಅಧ್ಯಾಪನ ದಾನಪ್ರತಿಗ್ರಹ ಷಟ್ಕರ್ಮ್ಮ ನಿರತರ್ ದ್ವಿಜಗುರುದೇವ"[೨೨] ಎಂದು ಶಾಸನಗಳಲ್ಲಿ ಈ ರೀತಿಯ ಉಲ್ಲೇಖ ಮುದನೂರು ಶಾಸನದಿಂದ ತಿಳಿದುಬರುತ್ತದೆ. ಸ್ಥಾನಾಚಾರ್ಯರೆಂದು ಕರೆಯುತ್ತಿದ್ದರು. ಇವರ ಕಾಲು ತೊಳೆದು ಕಾಲಂಕರ್ಚಿ ಪಾದಪ್ರಾಕ್ಷಾಳನ ಮಾಡಿ ದತ್ತಿಬಿಟ್ಟಿದ್ದು

ಮುದನೂರು ಶಾಸನದಿಂದ ತಿಳಿದುಬರುತ್ತದೆ. ದೇವಾಲಯದ ಎಲ್ಲ ಕಾರ್ಯಗಳು ಸ್ಥಾನಾಚಾರ್ಯರ ಅಭಿಪ್ರಾಯದಂತೆ ನಡೆಯುತ್ತಿದ್ದವು.

ಮುದನೂರಿನಲ್ಲಿ ತೇಜೋರಾಶಿ ಪಂಡಿತರು ಸ್ಥಾನಾಚಾರ್ಯರು ಆಗಿದ್ದರು. ಇವರಿಗೆ ಹಣ ಹಾಗೂ ಮತ್ತರ ೧ ಗದ್ದೆಯನ್ನು ದಾನವಾಗಿಕೊಟ್ಟಿದ್ದು ಮುದನೂರು ಶಾಸನದಿಂದ ತಿಳಿದುಬರುತ್ತದೆ. ದೇವಾಲಯದ ಆಡಳಿತ ಇಲ್ಲಿನ ಸ್ಥಾನಾಚಾರ್ಯರ ಜೊತೆ ಮಠದ ಆಚಾರ್ಯರು, ಸಹ ನೋಡಿಕೊಳ್ಳುತ್ತಿದ್ದರು. ಸಗರ ನಾಡಿನ ಯಡ್ರಾಮಿಯ ರಾಮೇಶ್ವರ ದೇವಾಲಯದ "ಮಠದಾಚಾರ್ಯ ಚಂದ್ರರಾಶಿ ಪಂಡಿತರಿಗೆ ಆಯದಾಯ, ಕಿರುಕುಳ ಸಂತೆವಣ ಸಿದ್ಧಾಯ, ಮೊಳಪರಿಖಾಯ"[೨೩] ಹೀಗೆ ವಿವಿಧ ಬಗೆಯ ತೆರಿಗೆಗಳ ಆದಾಯವನ್ನು ದಾನವಾಗಿ ಕೊಟ್ಟಿದ್ದು ಯಡ್ರಾಮಿ ಶಾಸನದಿಂದ ತಿಳಿದುಬರುತ್ತದೆ. ರಾಮೇಶ್ವರ ದೇವಾಲಯದ ಮಠದಾಚಾರ್ಯ ಅಮೃತರಾಶಿ ಪಂಡಿತರಿಗೆ ಕಾಲಂಕರ್ಚ್ಚಿ, ಧಾರಾಪೂರ್ವಕವಾಗಿ ಹಿರಿಯ ಕೋಲ ಮತ್ತರು ೩೦, ಭೂಮಿ ದಾನ ಕೊಟ್ಟಿದ್ದು ಯಡ್ರಾಮಿ ಶಾಸನದಿಂದ ತಿಳಿದುಬರುತ್ತದೆ. ದೇವಾಲಯದ ಆಡಳಿತವು ಇಲ್ಲಿನ ಸ್ಥಾನಾಚಾರ್ಯ, ಸ್ಥಾನಿಕ, ಸ್ಥಳದಾಚಾರ್ಯ, ದೇವರಾಚಾರ್ಯ, ಮಠದಾಚಾರ್ಯ, ಸ್ಥಳದ ಪಂಡಿತ ಎಂಬ ವಿವಿಧ ಹೆಸರುಗಳಿಂದ ಕರೆಯುತ್ತಾರೆ. ಈ ಸ್ಥಾನಾಚಾರ್ಯರು, ಆಚಾರ್ಯರು, ಅವರ ನಡೆ ನುಡಿಯಲ್ಲಿ ಹೀನವಾಗಿ ಕಂಡುಬಂದರೆ, ಇವರನ್ನು "ಇ(ಈ) ಸ್ಥಾನಕ್ಕಧಿಕಾರಿಗಳಪ್ಪ ತಪೋದನರ್ ಪರಮಧಾರ್ಮ್ಮಿಕರ್ ಮುತ್ತಮ ನೈಷ್ಠಿಕರುಂ ಭಯಲೋಭವರ್ಜ್ಜಿತರುಮಾಗಿ ನಡೆಯಿಸುವರನ್ತಲ್ಲದೆ ಗುಣಹೀನರಾದಂದೂರು ಮರಸುಮಿರ್ದ್ದು (ಮೊ)ರ ಕಿಡಿಸಿ ಕಳೆವರಲ್ಲದೆ ದಾಳಿವಡ್ಡಿತನಂ ಗೆಯ್ದು ಶ್ವಾನ ಗಾರ್ದಭಂ ನವ ಸತ್ತಡೆ ಪಂದಿಸತ್ತುದು ನಾಯಿ ಸತ್ತುದು"[೨೪] ನಾಯಿ ಕತ್ತೆಗೆ ಸಮಾನವೆಂದು ನಿಂದಿಸುತ್ತಿದ್ದರು. ಇಂತಹ ಉಲ್ಲೇಖ ಯಡ್ರಾಮಿ ಶಾಸನದಿಂದ ತಿಳಿದುಬರುತ್ತದೆ.

ಪ್ರತಿದಿನ ದೇವರ ಪೂಜೆಯನ್ನು ಮಾಡಲು ಪೂಜಾರಿಗಳನ್ನು ನೇಮಿಸುತ್ತಿದ್ದರು. ಇವರ ಭಕ್ತಿ ಹಾಗೂ ಸೇವೆಗೆ ಭೂಮಿ ಹಾಗೂ ನಿವೇಶನವನ್ನು ದಾನವಾಗಿ ಕೊಡಲಾಗುತ್ತಿತ್ತು. ಯಡ್ರಾಮಿಯ ರಾಮೇಶ್ವರ ತೀರ್ಥದ ದೇವರ ಪೂಜಾರಿಗೆ ನಾಲ್ಕು ಬ್ರಹ್ಮಮರಿಗಳನ್ನು ದಾನವಾಗಿ ಕೊಟ್ಟಿರುವುದು ಶಾಸನದಿಂದ ತಿಳಿದುಬರುತ್ತದೆ. ಅಗಸ್ತೇಶ್ವರ ದೇವರ ಪೂಜಾರಿಗೆ ಮನೆಯ ಗದ್ದೆ, ರಾಮದೇವ ಗದ್ದೆ ದಾನ ನೀಡಿರುವುದು ಮುದನೂರು ಶಾಸನದಿಂದ ತಿಳಿದುಬರುತ್ತದೆ. ಚಂಡೇಶ್ವರ ದೇವರ ಆಚಾರ್ಯರಿಗೆ ಕರಿಯ ಮತ್ತರು ಹನ್ನೆರಡು ದಾನವಾಗಿ ಕೊಟ್ಟಿದ್ದು ಹೆಮ್ಮಡಗಿ ಶಾಸನದಿಂದ ತಿಳಿದುಬರುತ್ತದೆ. ನಾಗೇಶ್ವರ ದೇವರ ಆಚಾರ್ಯರಿಗೆ ಗೇಣ ಕೋಲು ಮತ್ತರು, ನಿವೇಶನ ಒಂದು ದಾನವಾಗಿ ಕೊಟ್ಟಿದ್ದು

ಹೋತಗಲ್ ಶಾಸನದಿಂದ ತಿಳಿದು ಬರುತ್ತದೆ. ಶ್ರೀ ಶಂಕರ ದೇವರ ಪೂಜಾರಿಗೆ ಮತ್ತರು ೨೦೦ ತೋಟ, ಗಾಣ ನಾಲ್ಕು ದಾನವಾಗಿ ಕೊಟ್ಟಿದ್ದು ಅಂಕಲಗಿ ಶಾಸನದಿಂದ ತಿಳಿದು ಬರುತ್ತದೆ. ದೇವರಿಗೆ ಪೂಜೆ ಮಾಡುವ ಕಾರ್ಯ ಪೂಜಾರಿಗಳದ್ದಾಗಿದ್ದರಿಂದ ಇವರ ವೃತ್ತಿ ವಂಶಪಾರಂಪರ್ಯವಾಗಿತ್ತು. ಇಂದಿಗೂ ಕೂಡ ಈ ಪದ್ಧತಿ ಬೆಳೆದು ಬಂದದು ತಿಳಿದು ಬರುತ್ತದೆ.

ದೇವರ ನಂದಾ ದೀಪ ದೇವಾಲಯದಲ್ಲಿ ಆರದಂತೆ ಸದಾ ಉರಿಯುತ್ತಿರಬೇಕು. ಆ ಕಾರಣಕ್ಕಾಗಿ ದೇವರ ದೀಪಕ್ಕೆ ನಂದಾದೀವಿಗೆ ಎಣ್ಣೆಯನ್ನು ದಾನವಾಗಿ ಕೊಟ್ಟಿದ್ದು ಈ ನಾಡಿನ ಶಾಸನಗಳಿಂದ ತಿಳಿದುಬರುತ್ತವೆ. ದೇವರ ಪೂಜೆಗಾಗಿ ಹೂಗಳು ಬೇಕು ಆ ಹೂವುಗಳನ್ನು ಮಾಲೆಗಾರರು ಕೊಡುತ್ತಿದ್ದರು. ಈ ಮಾಲೆಗಾರರ ಉಪಜೀವನಕ್ಕಾಗಿ ಭೂಮಿ ಹಾಗೂ ಹೂಗಳನ್ನು ಬೆಳೆಯಲು ಭೂಮಿಯನ್ನು ದಾನವಾಗಿ ಕೊಟ್ಟಿರುವುದು ಶಿರಿವಾಳ ಶಾಸನದಿಂದ ತಿಳಿದು ಬರುತ್ತದೆ. ಶ್ರೀಶಂಕರ ನಾರಾಯಣ ದೇವರಿಗಾಗಿ ಉತ್ತರದಲ್ಲಿರುವ ತೋಟವನ್ನು ದಾನವಾಗಿ ಕೊಟ್ಟಿದ್ದು, ಇಜೇರಿ ಶಾಸನದಿಂದ ತಿಳಿದುಬರುತ್ತದೆ. ದೇವಾಲಯದ ಕಾರ್ಯ ಚಟುವಟಿಕೆಗಳಲ್ಲಿ ಅಂಗಭೋಗ–ರಂಗಭೋಗಗಳು ಕಂಡುಬರುತ್ತವೆ. ಈ ರೀತಿ ದೇವರಿಗೆ ಪ್ರತಿದಿನ ಎರಡು ವಿಧದ ಸೇವೆಗಳನ್ನು ಮಾಡುತ್ತಿದ್ದರು. ಅದರಲ್ಲಿ ಅಂಗಭೋಗ ಎಂದರೆ ದೇವಸ್ಥಾನದಲ್ಲಿ ದೇವರ ವಿಗ್ರಹಕ್ಕೆ ಅರ್ಚಕರು ಸಲ್ಲಿಸುವ ಪೂಜಾ ಸೇವೆಯನ್ನು ಅಂಗಭೋಗ ಎಂದ ಕರೆಯಲಾಗಿದೆ. ಸ್ನಾನ ಮಾಡಿಸುವುದು, ಗಂಧಲೇಪನ, ಧೂಪ ಬೆಳಗುವುದು, ದೀಪದ ಮೂಲಕ ಆರತಿ ಮಾಡುವುದು, ಪುಷ್ಪ ಧರಿಸುವುದು, ಇವು ಅಂಗಭೋಗದ ಕ್ರಿಯೆಗಳಾಗಿದ್ದವು. ಈ ರೀತಿ ದೇವಾಲಯದಲ್ಲಿ ದೇವರಿಗೆ ಪೂಜೆಯನ್ನು ಮಾಡುತ್ತಿದ್ದರು. ಈ ಪೂಜೆ ಅರ್ಚಕ, ಆಚಾರ್ಯ ಅಥವಾ ಪೂಜಾರಿಗಳು ನಡೆಸಿಕೊಂಡು ಹೋಗುತ್ತಿದ್ದರು.

ಇವರಿಗೆ ಸಹಾಯಕರಾಗಿ ಮಾಲೆಗಾರರು, ತೋಟಗಾರರು, ಇರುತ್ತಿದ್ದರು. ಮಾಳಿಭೇಶ್ವರ ದೇವರ ಪ್ರತಿಷ್ಠೆ ಗೈದು ದೇವರ ಅಂಗಭೋಗ ಸರ್ವಕಾಲ ನಿಮಿತ್ಯವಾಗಿ ದಾನ ಬಿಟ್ಟಿದ್ದು ಕೆಂಬಾವಿ ಶಾಸನದಿಂದ ತಿಳಿದುಬರುತ್ತದೆ. ರಂಗಭೋಗ ಎಂದರೆ ದೇವಾಲಯದಲ್ಲಿ ನಡೆಯುವ ನೃತ್ಯ ಸಂಗೀತಗಳ ಸೇವೆ ಎಂದರ್ಥ. ಪ್ರತಿನಿತ್ಯ ದೇವಾಲಯದಲ್ಲಿ ಪರಿಣಿತಿ ಪಡೆದ ನೃತ್ಯಗಾರರಿಂದ ಹಾಗೂ ಸಂಗೀತಗಾರರಿಂದ ಸಂಗೀತ ಸೇವೆ ನಡೆಯುತ್ತಿತ್ತು. ಇಂದಿಗೂ ಕೆಲ ದೇವಾಲಯಗಳಲ್ಲಿ ಪ್ರತ್ಯೇಕವಾದ ರಂಗಮಂಟಪ ಇದ್ದದು ಕಂಡುಬರುತ್ತದೆ. ಈ ರಂಗಭೋಗ ಸೇವೆ ಪ್ರಾಚೀನ ಕಾಲದಿಂದಲೂ ನಡೆಯುತ್ತಿತ್ತೆಂದು ಭಾವಿಸಬಹುದು. ಸಗರ ನಾಡಿನ ಶಾಸನಗಳಲ್ಲಿ ಈ ಅಂಗಭೋಗ–

ರಂಗಭೋಗದ ಉಲ್ಲೇಖಗಳು ಏವೂರು, ಮುದನೂರು, ಹಗರಟಗಿ, ಶಿರವಾಳ, ಆಂದೋಲ, ಕೆಂಬಾವಿ, ಯಡ್ರಾಮಿ, ಗೋಗಿ ಹೀಗೆ ಹಲವಾರು ಶಾಸನಗಳಲ್ಲಿ ಕಂಡುಬರುತ್ತವೆ. ಹೀಗೆ ಈ ಕಾರ್ಯಗಳನ್ನು ನಡೆಸಿಕೊಂಡುಬಂದವರಿಗೆ ದಾನ ದತ್ತಿಕೊಡಲಾಗುತ್ತಿತ್ತು. ಖಂಡಸ್ಫುಟಿತ ಜೀರ್ಣೋದ್ಧಾರ ಎಂದರೆ ದೇವಾಲಯದ ಉದ್ಧಾರ ಕಾರ್ಯ ಮಾಡುವುದು ಎಂದರ್ಥ. ದೇವಾಲಯದ ಜೀರ್ಣೋದ್ಧಾರಕ್ಕಾಗಿ ಅನೇಕ ಶಿಲ್ಪಿಗಳನ್ನು ನೇಮಕ ಮಾಡಿಕೊಂಡಿದ್ದರು. ಇವರಿಗೂ ಕೂಡ ದಾನ ದತ್ತಿಕೊಟ್ಟಿದ್ದು ಶಾಸನದಿಂದ ತಿಳಿದುಬರುತ್ತದೆ.

ದೇವಾಲಯದ ವಿವಿಧ ಬಗೆಯ ಕೆಲಸಗಳನ್ನು ನಿರ್ವಹಿಸಲು ಪರಿಚಾರಕರ ವರ್ಗ ಇತ್ತು. ಇವರನ್ನು ಸಗರ ನಾಡಿನ ಶಾಸನಗಳು ಈ ರೀತಿಯಾಗಿ ಕರೆದಿವೆ: ಮದ್ದಳಿಕಾರರು, ಹಾಡುವ ಸಮುದಾಯದವರು, ಕಲುಕುಟಿಗವೋಜಗ, ಪಾತ್ರಪಾವುಳಕ್ಕಂ, ಜಗಳೆ, ಕಂಬದ ಸೂಳೆ, ದೇವಾಲಯದಲ್ಲಿನ ದೇವದಾಸಿಯರು, ದೇವಾಲಯದಲ್ಲಿ ರಂಗಭೋಗದ ಸೇವೆಗಾಗಿ ದೇವದಾಸಿಯರನ್ನು ನೇಮಿಸುತ್ತಿದ್ದರು. ಅರ್ಚನೆ ಮಾಡುವ ಸಂದರ್ಭದಲ್ಲಿ ನೃತ್ಯ–ಸಂಗೀತದ ಮೂಲಕ ಅರ್ಪಣೆಯಾಗುತ್ತಿತ್ತು. ದೇವಾಲಯದ ಪ್ರತಿಯೊಂದು ಕಂಬದಲ್ಲಿ ನಿಂತು ನೃತ್ಯ ಮಾಡುತ್ತಿದ್ದರು. ಹಾಗಾಗಿ ಇವರನ್ನು ಕಂಬದ ಸೂಳೆಯರೆಂದು ಶಾಸನಗಳು ಕರೆದಿವೆ. ಇಂದಿಗೂ ದೇವಾಲಯದ ಕಂಬಗಳ ಮೇಲೆ ಕಂಡುಬರುವ ಶಿಲ್ಪಗಳು ಈ ಕಂಬದ ಸೂಳೆಯರೆ ಆಗಿದ್ದಾರೆ. ಈ ಶಿಲ್ಪಗಳು ವಿವಿಧ ಭಂಗಿಯಲ್ಲಿ ಇರುವುದು ಕಂಡುಬರುತ್ತದೆ.

ಹೀಗೆ ವಿವಿಧ ರೀತಿಯ ಪರಿಚಾರಕ ವರ್ಗದವರು ಸಗರನಾಡಿನ ಏವೂರು, ಮುದನೂರು, ಕೆಂಬಾವಿ, ಸಗರ, ಯಡ್ರಾಮಿ ಬೈಚಬಾಳ, ಎಡೆಯಪುರ ಶಿರವಾಳ, ಆಂದೋಲ ಹಗರಟಗಿ, ಎಮ್ಮವಾಡಗಿ, ಹೆಬ್ಬಾಳ ಹೀಗೆ ಮುಂತಾದ ಶಾಸನಗಳಲ್ಲಿ ಈ ವರ್ಗದವರು ಕಂಡುಬರುತ್ತಾರೆ. ಇವರ ಸೇವೆಯನ್ನು ಪರಿಗಣಿಸಿ ದಾನ ದತ್ತಿಗಳು ಕೊಟ್ಟಿದ್ದು ಈ ನಾಡಿನ ಶಾಸನಗಳಿಂದ ತಿಳಿದುಬರುತ್ತದೆ.

ಪಾದಮೂಲ ಪರಿವಾರ ಪಾತ್ರ ಪಾವುಳ ಎಂದರೆ ದೇವರ ಸೇವಾ ಪರಿಚಾರಕರು ಎಂದು ಇವರನ್ನು ಕರೆಯುತ್ತಿದ್ದರು. ಮುದನೂರ ತೀರ್ಥದ ರಾಮೇಶ್ವರ ದೇವಾಲಯದ ಮಲೆಯಾಳ ಪಂಡಿತ ದೇವರ ಮಠದಲ್ಲಿ ತಪೋಧನರ, ವಿದ್ಯಾರ್ಥಿಗಳ ಆಶನ ಆಚ್ಛಾದನಗಳಿಗಾಗಿ ಪರೆಕಾರರು, ಪಾತ್ರಗಳು, ಹಾಡುವವರು ಹೀಗೆ ಇವರಿಗೆ ಮೂರು ಭಾಗವಾಗಿ ನಡೆಯಬೇಕೆಂದು ಕೆಲ ಶಾಸನಗಳು ಉಲ್ಲೇಖಿಸಿವೆ.

## ೭.೭. ದೇವಾಲಯದ ಶಿಲ್ಪಿಗಳು :

ಸಗರ ನಾಡಿನ ದೇವಾಯಗಳು ಬಹಳ ಸುಂದರ ಹಾಗೂ ಸೂಕ್ಷ್ಮ ಕೆತ್ತನೆಯಿಂದ ಕೂಡಿವೆ. ಈ ದೇವಾಲಯಗಳು ಹೆಚ್ಚಾಗಿ ಕಲ್ಯಾಣ ಚಾಲುಕ್ಯರ ಕಾಲದ ದೇವಾಲಯಗಳಾಗಿವೆ. ದೇವಾಲಯ ಕಟ್ಟಿಸಿದ ರಾಜ ಪ್ರಸಿದ್ಧಿಗೆ ಬರುತ್ತಾನೆ. ಆದರೆ ಅದರ ಹಿಂದೆ ಪರಿಶ್ರಮದಿಂದ ಕಟ್ಟಿದ ಜೀವಿಗಳನ್ನು ಯಾರೂ ನೆನೆಯುವುದಿಲ್ಲ. ಆದರೆ ಇಂತಹ ಅಂಶಗಳು ಶಾಸನದಲ್ಲಿ ಸೂಕ್ಷ್ಮವಾಗಿ ಗಮನಿಸಿದಾಗ ಶಿಲ್ಪಿಗಳು, ರೂವಾರಿಗಳ ಹೆಸರು ಶಾಸನಗಳಲ್ಲಿ ಕಂಡುಬರುತ್ತವೆ. "ಕಲುಕುಟಿಗ ಮಾರೋಜಗೆ ಸುಸ್ರುಷೆಗೆಯ್ದುಂಬ ಕೆಯಿ ಮತ್ತರೊಂದು ಮನೆಯ ನಿವೇಸನ ೧"[೨೩] ದಾನವಾಗಿ ಕೊಟ್ಟಿದ್ದು ಶಾಸನದಿಂದ ತಿಳಿದುಬರುತ್ತದೆ.

"ದೇವರ ಧ್ವಜಾರೋಹಣದ ತೀರ್ಥದುದ್ಯಾಪನದನ್ದು ಒಡ್ಡರ ಕೋಟಬೋವಂಗೆ ದೇವರ ತಳವೃತ್ತಿಯಿಂ ಪಡುವಲು ಮತ್ತರ ೬ ಅಂಕದೊಳು ಮತ್ತರ ೬ಮನೆಗೆ"[೨೬] ದಾನವಾಗಿ ಕೊಟ್ಟಿರುವ ವಿಷಯ ಏವೂರು ಶಾಸನದಿಂದ ತಿಳಿದುಬರುತ್ತದೆ. ಈ ಶಾಸನದ ಮಂಟಪ ಈತನೇ ಕಟ್ಟಿರಬಹುದೆಂದು ಊಹಿಸಬಹುದು. ಅಜಮೋಜಂಗಂ, ಕಾಳೋಜಂಗಂ ಮತ್ತರು ೧೦೦ ದಾನವಾಗಿ ಕೊಟ್ಟಿದ್ದು ಕೆಂಬಾವಿ ಶಾಸನದಿಂದ ತಿಳಿದುಬರುತ್ತದೆ. ಈ ಶಾಸನದಲ್ಲಿ ಈ ಶಿಲ್ಪಿಗಳಿಗೆ ಕೊಟ್ಟಿರುವ ಭೂ ದತ್ತಿಯ ಪ್ರಮಾಣ ಹೆಚ್ಚಿರುವುದರಿಂದ ಇವರು ಶಾಸನವನ್ನು ಕೆತ್ತಿರುವುದರ ಜೊತೆಗೆ, ಮಾಳಿಬೇಶ್ವರ ದೇವಾಲಯವನ್ನು ಕಟ್ಟಿರಬಹುದೆಂದು ಊಹಿಸಲಾಗಿದೆ. ಯಾತನೂರಿನ ಶ್ರೀರಂಗ ದೇವರಿಗೆ ದೇವಾಲಯದ ಖಂಡಸ್ಫುಟಿತ ವಂಮಾರ್ಪ್ಪ ಮೂಪೋಜರರ್ಗ್ಗೆ ನಿವೇಶನ ಒಂದು ದಾನವಾಗಿ ಕೊಟ್ಟಿದ್ದು ಯಾತನೂರು ಶಾಸನದಲ್ಲಿದೆ. ಕಲುಕುಟಿಗ ಮಾರೋಜನಿಗೆ ಮತ್ತರ ೧, ಮನೆ ೧ ದಾನವಾಗಿ ಕೊಟ್ಟಿದ್ದು ಹೆಬ್ಬಾಳ ಶಾಸನದಿಂದ ತಿಳಿದು ಬರುತ್ತದೆ. ಕಲುಕುಟಿಗ ಚೌಡೋಜಂಗೆ ಗುಂಡಲೂರ ಹೊಲದಲ್ಲಿ ಮತ್ತರ ೨ ಗದ್ದೆ ದಾನವಾಗಿ ಕೊಟ್ಟಿದ್ದು ಸಂಗಮ ಶಾಸನದಿಂದ ತಿಳಿದು ಬರುತ್ತದೆ. ದುಗ್ಗೋಜನ ಮಗ ವೋಜನಿಗೆ ಮತ್ತರು ೧೦, ಮನೆ ನಿವೇಶನ ಒಂದು ದಾನವಾಗಿ ಕೊಟ್ಟಿದ್ದು ದೋರನಹಳ್ಳಿ ಶಾಸನದಿಂದ ತಿಳಿದುಬರುತ್ತದೆ. "ಕಲ್ಕುಟಿಗ ಶಾಸನ ಕೆತ್ತಿದ ರೂವಾರಿಗೆ ದೇವರ ತಳವೃತ್ತಿಯಿಂ ಮತ್ತರು ೧೨, ಹಾಗೂ ದೇವರ ಕೇರಿ ದಾನವಾಗಿ"[೨೭] ಕೊಟ್ಟಿದ್ದು ಏವೂರು ಶಾಸನದ ವಿಷಯವಾಗಿದೆ. ರೂವಾರಿಗಳು, ಶಿಲ್ಪಿಗಳು ಶಾಸನ ಕೆತ್ತಿದ್ದರಿಂದ ಇವರಿಗೆ ರಾಜರು, ಮಹಾಮಂಡಳೇಶ್ವರರು ಹಾಗೂ ಇತರರು ದಾನವಾಗಿ ಕೊಟ್ಟಿದ್ದು ಈ ನಾಡಿನ ಶಾಸನಗಳಿಂದ ತಿಳಿದುಬರುತ್ತದೆ. ಇವರು ತಮ್ಮದೇ ಆದ

ವೃತ್ತಿ ಸಂಘಗಳನ್ನು ಕಟ್ಟಿಕೊಂಡಿದ್ದರು. "ಕಲ್ಕುಟಿಗ ಗೊತ್ತಳಿ"[೨೮] ಎಂಬ ಸಂಘವಿತ್ತು. ಈ ಸಂಘದವರು ಏವೂರ ಕಮ್ಮಟೇಶ್ವರ ದೇವರಿಗೆ ದಾನಬಿಟ್ಟಿದ್ದು ಏವೂರು ಶಾಸನದಿಂದ ತಿಳಿದುಬರುತ್ತದೆ.

ದೇವಾಲಯದಲ್ಲಿ ಇತರ ವೃತ್ತಿಯವರು ಕೂಡ ಇದ್ದರು. ಅವರು ಸಹ ತಮ್ಮದೇ ಆದ ವೃತ್ತಿ ಸಂಘಗಳನ್ನು ಕಟ್ಟಿಕೊಂಡಿದ್ದು ಶಾಸನಗಳಿಂದ ತಿಳಿದುಬರುತ್ತದೆ. ಕಂಚಗಾರ ಗೊತ್ತಳಿ, ಸುಣ್ಣವನಿತು, ಬಡಿಗ, ಕಮ್ಮಾರ, ಅಕ್ಕಸಾಲೆಯರು ಹೀಗೆ ಅನೇಕ ವೃತ್ತಿಯವರು ಏವೂರ ಕಮ್ಮಟೇಶ್ವರ ದೇವಾಲಯಕ್ಕೆ ದಾನ-ದತ್ತಿ ಕೊಟ್ಟಿದ್ದು ಸಗರ ನಾಡಿನ ಭವ್ಯ ಸಂಸ್ಕೃತಿಯ ಕುರುಹಾಗಿದೆ.

ಹೀಗೆ ದೇವಾಲಯದ ಎಲ್ಲ ಕಾರ್ಯ ಚಟುವಟಿಕೆಗಳು ನಡೆಯುತ್ತಿದ್ದವು. ಇವುಗಳ ಜೊತೆಗೆ ನಿತ್ಯ ನೈವೇದ್ಯ, ಧೂಪದೀಪ, ಚೈತ್ರ, ಪವಿತ್ರ, ಆರೋಹಣ, ಹೋಮ, ಬಲಿ, ಕ್ರಿಯಾದಿ ಪೂಜೆ, ಹಬ್ಬ, ಉತ್ಸವ ವಿವಿಧ ಬಗೆಯ ಕಾರ್ಯಚಟುವಟಿಕೆಗಳು ಕಂಡುಬರುತ್ತವೆ. ಇವುಗಳನ್ನು ನೋಡಿಕೊಳ್ಳಲು ಕೇವಲ ಸ್ಥಾನಾಚಾರ್ಯ ಅಷ್ಟೇ ಅಲ್ಲ, ಇತರ ಆಡಳಿತ ವರ್ಗದವರು ಇರುತ್ತಿದ್ದರು. ಆಡಳಿತದಲ್ಲಿ ಅಧಿಕಾರಿಗಳನ್ನು ನೇಮಿಸಿಕೊಂಡು ದೇವಾಲಯದ ಚಟುವಟಿಕೆಗಳು ಬಹು ಸುಗಮವಾಗಿ ನಡೆಯಿಸಿಕೊಂಡು ಹೋಗುತ್ತಿದ್ದರು. ಇವರನ್ನು ಯಾರು ನೇಮಿಸುತ್ತಿದ್ದರೆಂದು ತಿಳಿದು ಬರುವುದಿಲ್ಲ. ಯಾವುದೇ ರಾಜಕೀಯ ಪರಿಣಾಮ ಈ ದೇವಾಲಯಗಳ ಮೇಲೆ ಬೀಳುತ್ತಿರಲಿಲ್ಲ. ಒಟ್ಟಾರೆ ಸಾಮಾಜಿಕವಾಗಿ ಹಾಗೂ ಧಾರ್ಮಿಕವಾಗಿ ದೇವಾಲಯದ ಪರಿಚಾರಕ ವರ್ಗದ ಪಾತ್ರ ಬಹು ಮಹತ್ವದ್ದಾಗಿದೆ.

## ೭.೮. ವಿದ್ಯಾಕೇಂದ್ರವಾಗಿರುವ ದೇವಾಲಯಗಳು :

ದೇವಾಲಯಗಳು ಕೇವಲ ಮುನಿಗಳು ಮಾತ್ರ ವಾಸವಾಗಿದ್ದ ಸ್ಥಳಗಳಷ್ಟೇ ಅಲ್ಲದೇ, ಇವು ವಿದ್ಯಾಕೇಂದ್ರಗಳು ಆಗಿದ್ದವು. ಕೆಲ ಸಂದರ್ಭದಲ್ಲಿ ದೇವಾಲಯಕ್ಕೆ ಹೊಂದಿಕೊಂಡ ಮಠಗಳು ಕಂಡುಬರುತ್ತವೆ. ಹಾಗಾಗಿ ದೇವಾಲಯಗಳಿಗೆ ಮಠಗಳು ಎಂದು ಸಹ ಕರೆಯುತ್ತಿದ್ದರು.

ದೇವಾಲಯಗಳು ಹಾಗೂ ಮಠಗಳು ವಿದ್ಯಾಭ್ಯಾಸದ ಸಂಪೂರ್ಣ ಜವಾಬ್ದಾರಿಯನ್ನು ಹೊತ್ತಿದ್ದವು. ಸ್ಥಾನಾಚಾರ್ಯರು, ಪಂಡಿತರು, ಆಚಾರ್ಯರು, ವಿದ್ಯಾಪಕ್ಷಪಾತಿಗಳಾಗಿದ್ದರು. ಇಂತಹ ಅನೇಕ ಶಾಸನಗಳು ಈ ನಾಡಿನಲ್ಲಿ ಕಂಡು ಬರುತ್ತವೆ. ಮಹಾಮಂಡಳೇಶ್ವರ ರೇವರಸನ ಹೆಂಡತಿ ಮಾಳಿಯಬ್ಬರಸಿಯು ಮಾಳಿಬೇಶ್ವರ

ದೇವಾಲಯವನ್ನು ನಿರ್ಮಿಸಿ "ಪೊದ್ದವರ್ಗ್ಗಂ ಪರೆಕಾರರ್ಗ್ಗವೊಂದು ಭೋಗಂ ತಪೋಧನರ್ಕ್ಕಂ ಮಠದಲೋದುವ ವಿದ್ಯಾರ್ತ್ಥಿ ಗಳ್ಗಮಾಹರಕ್ಕಂ ಪ್ರತಿದಿನಕ್ಕವೊಂದು ಭೋಗಮಿಂತು"[೧೯] ದಾನವಾಗಿ ಕೊಟ್ಟಿದ್ದಾಳೆ. ಕಿಟ್ಟಗಾವೆ ಸಂತತಿಯ ಶಿವಲಿಂಗ ಭಟ್ಟಾರಕರ ಶಿಷ್ಯ ಕಳೇಶ್ವರ ಪಂಡಿತನು ತರ್ಕ, ನಾಡಿ ಶಾಸ್ತ್ರಗಳಲ್ಲಿ ಪಾರಾಂಗತನಾಗಿದ್ದನು. ನಖರೇಶ್ವರ ದೇವಾಲಯದ ಸ್ಥಾನಚಾರ್ಯ ಅನಂತ ಶಕ್ತಿ ಸಿದ್ಧಾಂತ ದೇವರು ಲಾಕುಳ ಸಿದ್ಧಾಂತ ಶಾಸ್ತ್ರಾರ್ತ್ಥ ಸಮುದ್ಧರಣರು, ತರ್ಕಶಾಸ್ತ್ರ ವಿದ್ಯಾ ಪಂಡಿತರು ಆಗಿದ್ದರು.

ಸ್ಥಾನಾಚಾರ್ಯರ ಜೊತೆ ಕೆಲ ಉಪ್ಪಾಧ್ಯಾಯರು ಇರುತ್ತಿರುವುದು ಕಂಡುಬರುತ್ತದೆ. "ಚಂದ್ರಾದಿತ್ಯ ಭಟ್ಟೋಪಾದ್ಯಾಯ"[೨೦] "ಅಪ್ಪಣ ಭಟ್ಟೋಪಾಧ್ಯಾಯ"[೨೧] ಬೋವಣ ಭಟ್ಟೋಪಾಧ್ಯಾಯ ಹೀಗೆ ಅನೇಕ ಉಪಾದ್ಯಾಯರು ವಿದ್ಯಾರ್ಥಿಗಳಿಗೆ ವಿದ್ಯಾಭ್ಯಾಸ ನೀಡುತ್ತಿದ್ದರು. ಆದರೆ ಶಾಸನಗಳಲ್ಲಿ ಪಠ್ಯದ ಬಗ್ಗೆ ತಿಳಿದು ಬರುವುದಿಲ್ಲ. ಇವರು ವಿದ್ಯಾರ್ಥಿಗಳಿಗೆ ಪಾಠ ಪ್ರವಚನ ಮಾಡಿರುವುದಕ್ಕಾಗಿ ಈ ಉಪ್ಪಾಧ್ಯಾಯರಿಗೆ ದಾನ-ದತ್ತಿಗಳನ್ನು ಕೊಡುತ್ತಿದ್ದರು. ಹಾಗಾಗಿ ಅಂದಿನ ಕಾಲದಲ್ಲಿ ಮುದುನೂರು ಹಾಗೂ ಯಡ್ರಾಮಿ ವಿದ್ಯಾಕೇಂದ್ರಗಳಾಗಿದ್ದವು. ಹಾಗಾಗಿ ಮೋನಿ ಪಂಡಿತರ ಮಠವು "ಬಲ್ಲದ ಕನ್ನಡಕ್ಕರದ ವಿದ್ಯಾಸ್ಥಾನ"[೨೨] ಆಗಿತ್ತೆಂದು ಯಡ್ರಾಮಿ ಶಾಸನದಿಂದ ತಿಳಿದುಬರುತ್ತದೆ.

ರಾಜರ ವಿದ್ಯಾಭ್ಯಾಸಕ್ಕೂ ಅನುಕೂಲವಿತ್ತು "ರಾಜ ಯುವರಾಜ, ಕುಮಾರರು ಮತ್ತು ಸಾಮಂತ ರಾಜರ ಪುತ್ರರು ನಿರ್ದಿಷ್ಟ ಗುರುಗಳಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದರು. ಗುರುಗಳನ್ನು ರಾಜಗುರು ಮತ್ತು ವಿದ್ಯಾಗುರುಗಳೆಂದು ಎರಡು ಭಾಗವಾಗಿ ವಿಂಗಡಿಸಬಹುದು."[೨೩] ಕಲಿಸಿದ ಗುರುಗಳನ್ನು ಭಟ್ಟೋಪಾಧ್ಯಾಯ, ಶ್ರೀಮದಯ್ಯಂಗಳು ಎಂದು ಕರೆಯುತ್ತಿದ್ದರು. ಇವರು ರಾಜರುಗಳಿಗೆ ರಾಜಗುರು ಹಾಗೂ ಧರ್ಮ ಗುರುಗಳೂ ಆಗಿದ್ದರು. ಈ ಶಿಕ್ಷಕ ವೃತ್ತಿ ವಂಶಪರಾಂಗತವಾಗಿ ಮುಂದುವರೆದಿತ್ತು. ಇಂತಹ ಅನೇಕ ವಿದ್ಯಾ ಗುರುಗಳ ಉಲ್ಲೇಖ ಸಗರ ನಾಡಿನ ಶಾಸನಗಳಲ್ಲಿ ಕಂಡು ಬರುತ್ತವೆ. "ಬ್ರಹ್ಮಪ್ರಕಾಶ ಭಟ್ಟಾರಕ ದೇವ ಹಾಗೂ ಸತ್ಯ ಪ್ರಚಾರ ಭಟ್ಟಾರಕದೇವರು"[೨೪] ಕಲ್ಯಾಣ ಚಾಲುಕ್ಯ ಆರನೇ ವಿಕ್ರಮಾದಿತ್ಯನ ಗುರುಗಳಾಗಿದ್ದರು ಎಂಬುದು ಏವೂರು ಶಾಸನದಿಂದ ತಿಳಿದುಬರುತ್ತದೆ. ಭಾಸ್ಕರ ಭಟ್ಟ ದಂಡನಾಥ, ಸೋಮಯಾಜಿ ಭಟ್ಟೋಪಾಧ್ಯಾಯ ಮತ್ತು ಆಚಾರ್ಯ ಚೆಲ್ಲೆಯರು, ಆರನೇ ವಿಕ್ರಮಾದಿತ್ಯನ ರಾಜ ಗುರುಗಳಾಗಿದ್ದರು. ಇವರಿಗೆ ಕೆಲ್ಲೂರು ಗ್ರಾಮವನ್ನು ದಾನವಾಗಿ ಬಿಟ್ಟಿದ್ದು ಇಲ್ಲಿನ ಶಾಸನದಿಂದ ತಿಳಿದು ಬರುತ್ತದೆ. ಹೀಗೆ ದೇವಾಲಯಗಳು ಬಹು ಚಟುವಟಿಕೆಗಳಿಂದ ಕೂಡಿದ್ದವು. ಗ್ರಾಮಸ್ಥರು ಸಹ ಈ

ದೇವಾಲಯದ ಎಲ್ಲ ಕಾರ್ಯ ಚಟುವಟಿಕೆಯಲ್ಲಿ ಪಾಲ್ಗೊಂಡಿದ್ದನ್ನು ಗಮನಿಸಿದರೆ ಇಲ್ಲಿನ ಜನ ಹಾಗೂ ದೇವಾಲಯಗಳು ಒಂದಕ್ಕೊಂದು ಅನ್ಯೋನ್ಯ ಸಂಬಂಧದಿಂದ ಕೂಡಿದ್ದವು ಎಂಬುದಕ್ಕೆ ದೇವಾಲಯಗಳು ಅತ್ಯುತ್ತಮ ನಿದರ್ಶನಗಳಾಗಿವೆ.

**೭.೯. ವೈಷ್ಣವ ದೇವಾಲಯಗಳು :**

ವೈಯಕ್ತಿಕವಾಗಿ ರಾಜರು ಯಾವುದೇ ಧರ್ಮದವರಾಗಿದ್ದರೂ, ಇತರ ಧರ್ಮಗಳನ್ನು ಸಮಾನತೆಯಿಂದ ಕಾಣುತ್ತಿದ್ದರು. ದೇವಾಲಯಗಳಿಗೆ ದಾನ-ದತ್ತಿ, ಪೂಜೆ, ಪುನಸ್ಕಾರಗಳು, ಸಂಪ್ರದಾಯಗಳು ಮುಂದುವರೆಯುತ್ತಲೆ ಇದ್ದವು. ಸಾರ್ವಜನಿಕರ ಮನ್ನಣೆ, ಗೌರವ ಕೂಡ ದೊರಕುತ್ತಿತ್ತು. ಇಂತಹ ಶಾಸನೋಕ್ತ ವೈಷ್ಣವ ದೇವಾಲಯಗಳು ಈ ರೀತಿಯಾಗಿ ಕಂಡುಬರುತ್ತವೆ. ಭತ್ತಗ್ರಾಮ ಕೇಶವ ದೇವರು, ಏವೂರ ಕೇಶವದೇವರು, ಎಳರಾವೆ ಆದೀತ್ಯೇಶ್ವರ ದೇವರು, ವಿಕ್ರಮ ತೀರ್ಥದ ಕೇಶವ ದೇವರು, ಏವಂತನೂರು ಶ್ರೀರಂಗ ದೇವರು, ಚಂಡಪುರದ ಲಕ್ಕಣ್ಣೇಶ್ವರ ದೇವರು, ಯಳರಾಮೆಯ ತೀರ್ಥದ ರಾಮೇಶ್ವರ ದೇವರು, ಮುದನೂರ ಲಕ್ಷ್ಮಣೇಶ್ವರ ದೇವರು, ಏಳಿಗೆಯ ಚೆನ್ನಕೇಶವ ದೇವರು, ಮುಂತಾದವುಗಳು ಶಾಸನೋಕ್ತ ವೈಷ್ಣವ ದೇವಾಲಯಗಳಾಗಿವೆ. ಇವುಗಳಿಗೆ ದಾನ-ದತ್ತಿ ಕೊಟ್ಟ ನಿದರ್ಶನಗಳಿವೆ.

ಭತ್ತಗ್ರಾಮ ಕುಣಿಲಂಗೆರೆಯ ಹಂಪಕವಿ ಹೊಕ್ಕಣಿಯನ್ನು ದಾನ ಕೊಟ್ಟಿದ್ದು ಕುಳಗೇರಿ ಶಾಸನದಿಂದ ತಿಳಿದುಬರುತ್ತದೆ. ಕಲ್ಯಾಣ ಚಾಲುಕ್ಯ ಆರನೇ ವಿಕ್ರಮಾದಿತ್ಯನ ದಂಡನಾಯಕ ರವಿಯಣ ಭಟ್ಟನು ಕೇಶವ ದೇವರಿಗೆ ೬೦೦ ಮತ್ತರು ದಾನಕೊಟ್ಟಿದ್ದು, ಯಳರಾವೆಯ ಆದಿತ್ಯೇಶ್ವರ ದೇವರಿಗೆ ಮಹಾಮಂಡಳೇಶ್ವರ ರೇವರಸಗೊರವ ಗೇರಿಯಲು ಎಂಟುಹಿಟ್ಟು ದಾನ ಕೊಟ್ಟಿದ್ದು ಯಡ್ರಾಮಿ ಶಾಸನದಿಂದ ತಿಳಿದು ಬರುತ್ತದೆ. ಕಲ್ಯಾಣ ಚಾಲುಕ್ಯ ಆರನೇ ವಿಕ್ರಮಾದಿತ್ಯನ ದಂಡನಾಯಕ ಮಲ್ಲರಸಯ್ಯನು ವಿಕ್ರಮ ತೀರ್ಥದ ಕೇಶವ ದೇವರಿಗೆ ಬಿಟ್ಟ ಭೂದತ್ತಿ ಹುಣಸಗಿ ಶಾಸನದಿಂದ ತಿಳಿದು ಬರುತ್ತದೆ. ಏವಂತನೂರ ಶ್ರೀರಂಗದೇವರಿಗೆ ಮುದ್ದಿಗಲ್ಲ ಭಟ್ಟೋಪಾಧ್ಯಾಯರು ತುಪ್ಪಕೊಂಟೆ ಮದ್ದಿಗೆ ಎಂಟು ಹಿಟ್ಟು ದಾನ ಕೊಟ್ಟಿದ್ದು ಯಾತನೂರು ಶಾಸನದಿಂದ ತಿಳಿದುಬರುತ್ತದೆ. ತ್ರಿಭುವನ ಮಲ್ಲ ದೇವರ ಭೋಗಣ ಸಿಂಗನಾದ ಮಲ್ಲ ದೇವರಸರು ಚಂಡಪುರದ ಲಕ್ಷ್ಮಣೇಶ್ವರ ದೇವರ ದೀಪ, ಧೂಪ, ಭೋಗಕ್ಕೆ ಬಿಟ್ಟ ದತ್ತಿ ಕೊಟ್ಟಿದ್ದು, ಚನ್ನೂರು ಶಾಸನದಿಂದ ತಿಳಿದುಬರುತ್ತದೆ. ಯಡ್ರಾಮಿ ತೀರ್ಥದ ರಾಮೇಶ್ವರ ದೇವರಿಗೆ ಮಹಾಮಂಡಳೇಶ್ವರ "ಎಳಮೇಲ ಸೋವಿದೇವರಸರು ಹೆರ್ಗ್ಗಡೆ ವಾವಣಯ್ಯ ಮೂಡಕ್ಕೆ ಮಂಡಗೆ (ಗೋಧಿ, ಸಜ್ಜೆ) ದಾನ ಕೊಟ್ಟಿದ್ದು"[೩೮] ಮಲ್ಲಾಬಾದ

ಶಾಸನದಿಂದ ತಿಳಿದು ಬರುತ್ತದೆ. ಮುದನೂರಿನ ಮಹಾಜನರು ಲಕ್ಷ್ಮೇಶ್ವರ ದೇವರಿಗೆ ಅಂಗಭೋಗ, ನೈವೇದ್ಯಗಳಿಗಾಗಿ ಬಲ್ಲಜೀಯರಿಗೆ ಬಿಟ್ಟ ಭೂದತ್ತಿ ಮುದನೂರು ಶಾಸನದಿಂದ ತಿಳಿದುಬರುತ್ತದೆ.

ಏಳಿಗೆಯ ಚೆನ್ನಕೇಶವ ದೇವರಿಗೆ ಮಹಾಪ್ರಭುಗಳು ಅರವತ್ತೊಕ್ಕಲು, ಯಾದವ ಚಕ್ರವರ್ತಿ ಮಹಾದೇವರಾಯ ತೋಟ ೧, ನಿವೇಶನ, ಗಾಣದ ಎಣ್ಣೆ ದತ್ತಿಯಾಗಿ ಬಿಟ್ಟಿದ್ದು ಯಾಳಗಿ ಶಾಸನದಿಂದ ತಿಳಿದು ಬರುತ್ತದೆ. ವೈಷ್ಣವ ದೇವಾಲಯಗಳಲ್ಲಿ ನಿತ್ಯ ಪೂಜಾ ಕರ್ಮಗಳೊಂದಿಗೆ ಸಂದರ್ಭನುಸಾರ ಪವಿತ್ರಾ ರೋಹಣ, ಹೋಮ, ಹವನ, ಬಲಿಕ್ರಿಯಾದಿಗಳು ನಡೆಯುತ್ತಿದ್ದವು. ಕಲ್ಯಾಣ ಚಾಲುಕ್ಯ ಆರನೇ ವಿಕ್ರಮಾದಿತ್ಯನ ದಂಡನಾಯಕ ಮಲ್ಲರಸನು ಆಂದೋಲಾದಲ್ಲಿ ಚೆನ್ನಮಾಧವ ದೇವಾಲಯವನ್ನು ಕಟ್ಟಿಸಿದ್ದಾನೆ.

“ಧರೆಯುಂ ವಾರಿಧಿಯುಂ
ಭೂಧರಕುಲಮುಂ ಗಗನಮುಂ
ದಿಶಾಗಜಮುಂ ಭಾಸ್ಕರನುಂ
ಸಸಿಯುಳ್ಳಿನೆಗ ನಿರನ್ತರಂ ನಿಲ್ಕೆ
ಮಾಧವಾಲಯ ಧರ್ಮ್ಮ ॥”[೩೬]

ಈ ರೀತಿ ದೇವಾಲಯದ ವರ್ಣನೆ ಮಾಡಿದ್ದು ತಿಳಿದುಬರುತ್ತದೆ. ರೇವಣ ಭಟ್ಟರು ಸಂಗಮದಲ್ಲಿ ವಿಷ್ಣು ದೇವರನ್ನು ಪ್ರತಿಷ್ಠೆ ಗೈದು ಪಂಡಿತ ದೇವರಿಗೆ ಉಳಿದ ವ್ಯವಸ್ಥೆ ಮಾಡಲು ಜವಾಬ್ದಾರಿ ವಹಿಸಿದ್ದರು. ಹಿರಿಯ ಹೆಬ್ಬಾಳದಲ್ಲಿ ನಾರಾಯಣ ದೇವರನ್ನು ಹಡಪವಳ ದಂಡನಾಯಕನ ಸಹೋದರ ಮಾಧವರಾಜ ಬಿಟ್ಟ ಭೂ ದತ್ತಿಯನ್ನು ಹೆಬ್ಬಾಳ ಶಾಸನದಿಂದ ತಿಳಿದುಬರುತ್ತದೆ. ಶಂಕರ ನಾರಾಯಣ ದೇವರಿಗೆ ಚಂದಲ ಮಹಾದೇವಿ ಭೂಮಿ, ತೋಟ, ಗಾಣ, ನಿವೇಶನವನ್ನು ದತ್ತಿಯಾಗಿ ಬಿಟ್ಟಿದ್ದು, ರಾಜನ ಕೋಳೂರು ಶಾಸನದಿಂದ ತಿಳಿದು ಬರುತ್ತದೆ. ದೇವಾಯಗಳಿಗೆ ದಾನ-ದತ್ತಿ ಕೊಟ್ಟಿದ್ದು ಸಗರನಾಡಿನ ಹಲವಾರು ಶಾಸನಗಳಿಂದ ತಿಳಿದುಬರುತ್ತದೆ.

## ವೀರಗಲ್ಲುಗಳು :

"ಜೀತೇನ ಲಭ್ಯತೇ ಲಕ್ಷ್ಮೀ ಮೃತೇನಾಪಿ ಸುರಾಂಗನಾ ಕ್ಷಣ ವಿಧ್ವಂಸಿನೀ ಕಾಯೇ ಕಾ ಚಿಂತಾ ಮರಣೇ ರಣೇ" ಅಂದರೆ ಯುದ್ಧದಲ್ಲಿ ಸತ್ತರೇ ಸ್ವರ್ಗ, ಗೆದ್ದರೆ ರಾಜ್ಯಲಕ್ಷ್ಮೀ. ಕ್ಷಣದಲ್ಲಿ ನಾಶವಾಗುವ ಈ ಕಾಯ ಯುದ್ಧದಲ್ಲಿ ಸಾಯಲು ಚಿಂತಿಸುವುದೇಕೆ? ಇಂತಹ ಧ್ಯೇಯ ಉದ್ದೇಶಗಳು ಅಂದಿನ ವೀರರಲ್ಲಿ ಕಂಡುಬರುತ್ತವೆ. ನಮ್ಮ ಹಿರಿಯರು ಇಂಥ ಉದಾತ್ತ, ಉನ್ನತ, ಆದರ್ಶಗಳಿಗಾಗಿ ಬದುಕಿದವರು. ಜನರ ಹಾಗೂ ನಾಡಿನ ಉನ್ನತಿಗಾಗಿ ಹಲವಾರು ಕಾರ್ಯಗಳನ್ನು ಮಾಡುವುದರ ಮೂಲಕ ತ್ಯಾಗ, ಬಲಿದಾನ ಮಾಡಿದ ನಾಡು ಅವರ ನೆನಪಿಗಾಗಿ ಅನೇಕ ವೀರಗಲ್ಲುಗಳನ್ನು ಕೆತ್ತಿಸಿ ಅಮರರನ್ನಾಗಿಸಿದ್ದಾರೆ. ನಾಡಿಗಾಗಿ ಪ್ರಾಣಾರ್ಪಣೆ ಮಾಡುವುದು ಅಂದಿನ ಜನರ ಜೀವನದ ಮೌಲ್ಯವಾಗಿತ್ತು. ಈ ಮಾತಿಗೆ ಇಂಬು ಕೊಡುವಂತೆ ಸಗರ ನಾಡಿನಲ್ಲಿ ಕೆಲ ಹಳ್ಳಿಗಳಲ್ಲಿ ವೀರಗಲ್ಲುಗಳು ದೊರೆಯುತ್ತವೆ.

ಗರುಡ ನಾಗೋಜ, ಲೆಂಕ ನಾಗಣ, ಲೆಂಕ ಬಾಚಣ ಇವರು ಶಾಸನೋಕ್ತ ವೀರರು. ಕೆಂಬಾವಿ ಮಾಳಿಬೇಶ್ವರ ದೇವರಿಗೆ ಪೊದ್ದವರ್ಗ (ವೇಳೆವಾಳಿ) ಪಡೆ, ಇದ್ದಿತ್ತು, ವೀರಗರುಡ "ಬಿಲರಸನೆಂಬಭಿದಾನವಂ ಮೞ್ಚದಿಪ್ಪರೆ ತ್ರಿಭುವನ ಮಲ್ಲದೇವ ಬೆಸ ಕೂಡಿಯೆರಂಗ ಭೂಪನಂ ರಭಸದೆ ವೆಳ್ದದೆ ಕಾದಿ ಕೊಂದು ಜಯರಾಮನನಂಜಿಸಿ",[೩೭] "ತೆಲುಗರ ಸೈಂನ್ಯ ಲಕ್ಕಬಲವೆತ್ತಿಬರಲು ಇದಿರಾಂತ ವೀರರ ಪಲಬರಕೊಂದು ದಿಬ್ಯ ತುರಗಂಗಳುಮಂ"[೩೮] ಎದುರಿಸಿದ್ದಾನೆ. ಕಲ್ಯಾಣ ಚಾಲುಕ್ಯ ಚಕ್ರವರ್ತಿ ವೀರಸೋಮೇಶ್ವರನ ದಂಡನಾಯಕ ಬಮ್ಮರಸನು ತನ್ನ ನಾಡಿನ ಸುತ್ತ ಆವರಿಸಿದ ವೈರಿ ಪಡೆಯನ್ನು ಓಡಿಸಿದ್ದನು. ಹಾಗಾಗಿ ಶಾಸನದಲ್ಲಿ ಈತನನ್ನು ಬಮ್ಮರಸ ಜಗದೇಕ ವೀರ ಎಂಬ ಉಲ್ಲೇಖ ಹೆಮ್ಮಡಗಿ ಶಾಸನದಿಂದ ತಿಳಿದುಬರುತ್ತದೆ. ಹೀಗೆ ನಾಡಿನಾದ್ಯಂತ ವೀರರ, ಶೂರರ ಸ್ಮರಣೆಯನ್ನು ಸ್ಮರಿಸಬಹುದು. ಶಿರವಾಳ, ಹರಸಗುಂಡಗಿ, ಕೇಶಿರಾಜ ಕೊಂಡಗುಳಿ, ಸಗರ, ಬೈಚಬಾಳ ಹೀಗೆ ನಾಡಿನುದ್ದಗಲಕ್ಕೂ ವೀರರ, ಶೌರ್ಯ, ಪರಾಕ್ರಮ ತಿಳಿದುಬರುತ್ತದೆ. ಆದರೆ ಶಾಸನಗಳ ಮೇಲೆ ಲಿಪಿ ಕಂಡುಬರುದಿಲ್ಲ. ಹಾಗಾಗಿ ಕೆಲ ವೀರಗಲ್ಲುಗಳು ಅರ್ಥವಾಗುವುದಿಲ್ಲ. ದೊರೆತ ವೀರಗಲ್ಲುಗಳನ್ನು ನೋಡಿದರೆ, ಅವು ಮಣ್ಣಿಲ್ಲಿ ಹೂತುಹೋಗಿವೆ.

ಇನ್ನು ತುರುಗೊಳಿಗೆ ಸಂಬಂಧಿಸಿದ ವೀರಗಲ್ಲುಗಳ ಬಗ್ಗೆ ಹೇಳುವುದಾದರೆ, ಶಿಲ್ಪವಿರುವ ವೀರಗಲ್ಲುಗಳು ಕ್ರಿ.ಶ.ಸು.೧೦-೧೧ನೇ ಶತಮಾನದವರೆಗೂ ಈ ನಾಡಿನಲ್ಲಿ ಕಂಡುಬರುತ್ತವೆ. ಆದರೆ ಲಿಪಿಗಳು ಅಸ್ಪಷ್ಟವಾಗಿವೆ. ಇಂತಹ ಅನೇಕ ವೀರರ ತ್ಯಾಗ, ಬಲಿದಾನ ಶಾಸನಗಳಿಂದ ತಿಳಿದುಬರುತ್ತವೆ. ಅವರ ಜೀವನ, ತ್ಯಾಗ, ಆದರ್ಶ, ವೈರಾಗ್ಯ

ವೀರತನವನ್ನು ವೀರಗಲ್ಲುಗಳು ಕೊಂಡಾಡುತ್ತವೆ. ಅನೇಕ ಗ್ರಾಮಗಳಲ್ಲಿ ಇವು ಕಂಡುಬಂದರು ಅಲ್ಲಲ್ಲಿ ಚದುರಿ ಹೋಗಿವೆ. ಇಂತಹ ಇತಿಹಾಸ ಪರಂಪರೆ ನಮ್ಮ ಬಾಳನ್ನು ಉಜ್ವಲಗೊಳಿಸುತ್ತವೆ. ಆದರ್ಶ ಬದುಕಿಗೆ ಮಾರ್ಗದರ್ಶನ ಮಾಡುತ್ತದೆ.

**ಶಾಪಾಶಯ :**

ಸಗರನಾಡಿನಲ್ಲಿ ದೊರೆತ ಶಾಸನಗಳು ಶ್ಲೋಕದೊಂದಿಗೆ ಪ್ರಾರಂಭಗೊಂಡು, ಅಂತ್ಯದಲ್ಲಿ ಶಾಪಶಯದೊಂದಿಗೆ ಕೊನೆಗೊಳ್ಳುತ್ತವೆ. ಯಾವುದೇ ಜನಾಂಗದ ವರ್ಗವಾಗಲಿ, ಯಾವುದೇ ಧರ್ಮವಾಗಲಿ, ಅದರಲ್ಲಿ ನಂಬಿಕೆ, ಶ್ರದ್ಧೆ, ಭಕ್ತಿ ಪ್ರಮುಖವಾಗಿರುತ್ತದೆ. ಇವುಗಳನ್ನು ಅನುಸರಿಸಿದರೆ ಪುಣ್ಯ, ಇವುಗಳ ವಿರುದ್ಧವಾಗಿ ನಡೆದರೆ ಪಾಪ ಎಂಬುದು ಎಲ್ಲರ ಪರಿಕಲ್ಪನೆ. ಹಾಗಾಗಿ ಪ್ರಾಚೀನ ಕಾಲದಿಂದಲೂ ಈ ಪಾಪ-ಪುಣ್ಯಗಳು ಮುಂದುವರೆಯುತ್ತಲೇ ಇವೆ. ಇವುಗಳು ಶಾಸನದ ಕೊನೆ ಭಾಗದಲ್ಲಿ ಕಂಡುಬರುತ್ತವೆ.

"ಸ್ವದತ್ತಂ ಪರದತ್ತಂ ವಾಯೋ ಹರೇತಿ
ವಸುಂಧರಾ ಷಷ್ಟಿರ್ವ್ವರ್ಷ ಸಹಸ್ರಾಣಿ
ಮ್ರಿಷ್ಟಾಯಾಂ ಜ್ಯಾಯತೇ ಕ್ರಿಮಿ ॥
ಈಂತೀ ಧಂರ್ಮ್ಮವಂ ಸಕಲ ಸಾಂಮ್ಯದವರು
ಪ್ರತಿಪಾಳಿಸುವರು ॥"

ಎಂಬ ಉಲ್ಲೇಖ ಕೆಲ್ಲೂರು ಶಾಸನದಿಂದ ತಿಳಿದು ಬರುತ್ತದೆ. ಈ ನಾಡಿನ ಪ್ರತಿ ಶಾಸನದ ಕೊನೆಭಾಗದಲ್ಲಿ ಕಂಡುಬರುತ್ತವೆ. ಪ್ರಾಚೀನ ಧರ್ಮ ಹಾಗೂ ದೇವಾಲಯಗಳು ಸಾಮಾಜಿಕ ಸಂಘಗಳಾಗಿವೆ. ವ್ಯಕ್ತಿ ಧರ್ಮದ ಮುಖಾಂತರ ಮೋಕ್ಷ ಹೊಂದುತ್ತಾನೆ. ಹಾಗಾಗಿ ಅವನು ಮಾಡಿದ ಪಾಪ ಕರ್ಮಗಳೇ ಕಾರಣವಾಗಿರುತ್ತವೆ. ಅದಕ್ಕಾಗಿ ಧರ್ಮ ಉಳಿಯಬೇಕಾದರೆ ಸಂಘ ಸಂಸ್ಥೆಗಳನ್ನು ಕಟ್ಟಬೇಕು. ಈ ಸಂಸ್ಥೆಗಳಿಂದ ಜನರಲ್ಲಿ ಪರಸ್ಪರ ಹೊಂದಾಣಿಕ ಸ್ನೇಹ, ಪ್ರೀತಿ, ವಿಶ್ವಾಸ ಬೆಳೆಯುತ್ತದೆ. ಅಲ್ಲದೆ ವ್ಯಕ್ತಿ ಸಮಾಜದಲ್ಲಿ ಜಾಗೃತನಾಗಿ ಪರೋಪಕಾರ ಮಾಡುವ ಸಹಜಗುಣ ಬೆಳೆಯುತ್ತದೆ.

## ೭.೧೦. ಶಿಲ್ಪಗಳು :

ಪಾರಂಪರಿಕ ಶಿಲ್ಪಗಳ ಸ್ವರೂಪ ಮತ್ತು ಲಕ್ಷಣಗಳನ್ನು ನಮ್ಮ ಪ್ರಾಚೀನ ಶಿಲ್ಪಶಾಸ್ತ್ರ ಗ್ರಂಥಗಳು ಉದಾಹರಣೆಯಾಗಿ ನಿಂತಿವೆ. ಆದರೆ ವಿವರಣೆಯನ್ನು ವಿವರಿಸಲು ಸಾಧ್ಯವಾಗುವುದಿಲ್ಲ. ಕಾರಣ ಶಾಸನ ಶಿಲ್ಪದಲ್ಲಿ ಶಿಲ್ಪಶಾಸ್ತ್ರದ ಶೈಲಿಯ ಅನುಕರಣೆ ಕಂಡುಬರುತ್ತದೆಯೇ ಹೊರತು, ಅಲ್ಲಿನ ಶಾಸ್ತ್ರಬದ್ಧ ನಿರೂಪಣೆ, ಚೌಕಟ್ಟು ಕಂಡುಬರುವುದಿಲ್ಲ. ಇಂತಹ ಕನ್ನಡ ನಾಡಿನಲ್ಲಿ ಚರಿತ್ರೆಗೆ ಚಾರಿತ್ರಿಕವಾಗಿ ಹಲವಾರು ನಾಡುಗಳು ಕಂಡುಬರುತ್ತವೆ. ಅಂತವುಗಳಲ್ಲಿ ಈ ಸಗರನಾಡಿನ ಚರಿತ್ರೆಯು ಹಿರಿದಾದದ್ದು, ಸಾಹಿತ್ಯ, ಸಂಗೀತ, ಶಿಲ್ಪಗಳು ಹೀಗೆ ಇಲ್ಲಿಯ ಸಾಂಸ್ಕೃತಿಕ ಬದುಕಿಗೆ ಸ್ಪಂದಿಸಿದ ಜನರ ಕುರುಹುಗಳಾಗಿ ಗತ ವೈಭವವನ್ನು ಸಾರಿ, ಸಾರಿ ಹೇಳುತ್ತವೆ.

ವ್ಯಕ್ತಿಯ ಹುಟಿನೊಂದಿಗೆ ಬೆಳೆದು ಬರುವುದು ಆತನಲ್ಲಿರುವ ಕಲಾ ಪ್ರತಿಭೆ. ಇವುಗಳನ್ನು ವ್ಯಕ್ತಿ ಅನೇಕ ಮಾಧ್ಯಮಗಳ ಮುಖಾಂತರ ಹೊರ ಹಾಕುತ್ತಾನೆ. ಈ ಕಲೆಯಿಂದ ತನ್ನ ದುಃಖ ದುಮ್ಮಾನಗಳನ್ನು ಮರೆತು ಸಂತೋಷ, ಸಂತೃಪ್ತಿ ಕಾಣುತ್ತಾನೆ. ಹೀಗೆ ಕಲೆ ಮಾನವನ ಬದುಕಿಗೆ ನೆಮ್ಮದಿ ನೀಡುತ್ತದೆ. ಸಾಹಿತ್ಯ, ಸಂಗೀತ, ಶಿಲ್ಪ, ವಾಸ್ತುಶಿಲ್ಪವೂ ಒಂದು ಕಲೆ. ಇಂಥ ಅತ್ಯಂತ ಕಲಾ ಸಂಪತ್ತಿನ ನಾಡು ಈ ಸಗರನಾಡು, ಈ ನಾಡಿನ ಬಹುತೇಕ ಶಿಲ್ಪಗಳು ಪೂಜೆಗೆ ಒಳಗೊಂಡಿವೆ. ಶಿಲ್ಪಗಳು ಯಾವುದಾದರೂ ಒಂದು ಘಟನೆ, ಚರಿತ್ರೆಯನ್ನು ಒಳಗೊಂಡಿರುತ್ತವೆ. ಜನರ ರೀತಿ ನೀತಿಗಳನ್ನು ತಿಳಿಸಿಕೊಡುತ್ತವೆ. ಇಂತಹ ಶಿಲ್ಪಗಳು ದಾನ ಶಾಸನಗಳಲ್ಲಿ ಸೂರ್ಯ, ಚಂದ್ರ, ಆಕಳು, ಕರು ಹಾಗೂ ಮಹಾಸತಿ ಶಿಲ್ಪಗಳು ನಿಷಧಿಕಲ್ಲುಗಳು ಈ ನಾಡಿನಲ್ಲಿ ಕಂಡುಬರುತ್ತವೆ. ಹೆಚ್ಚಾಗಿ ಶಿಲ್ಪಗಳು ಪುರಾಣ ಹಾಗೂ ಕಾವ್ಯಗಳಿಂದ ಕೂಡಿವೆ. ಶಾಸನಶಿಲ್ಪಗಳು ಜನರ ಬದುಕಿನ ಮೇಲೆ ಹೆಚ್ಚಿ ಪರಿಣಾಮ ಉಂಟುಮಾಡುತ್ತವೆ. ಎಲ್ಲೆಲ್ಲೂ ಚೆಲುವಿಹದು ಬಲ್ಲವನ ಗೋಚರಕೆ' ಎಂಬ ಕವಿ ನುಡಿಯಂತೆ ಶಿಲ್ಪಗಳಲ್ಲಿ ಕಲೆ, ಸೌಂದರ್ಯ, ಆಭರಣಗಳು ಹೆಚ್ಚಾಗಿ ಕಂಡುಬಂದರೆ, ಶಾಸನ ಶಿಲ್ಪಗಳಲ್ಲಿ ಮಾನವೀಯ ಮೌಲ್ಯಗಳು, ಸಂಪ್ರದಾಯ, ರೀತಿ–ನೀತಿ ಆಚರಣೆಗಳು ಪರಂಪರಾಗತವಾಗಿ ಮುಂದುವರೆದಿರುತ್ತವೆ. ಹಾಗೂ ಸಾಮಾಜಿಕ ಕಳಕಳಿಯು ಮುಖ್ಯವಾಗಿ ಕಂಡುಬರುತ್ತದೆ.

"ನಮ್ಮ ನಾಡಿನ ಜನಜೀವನವನ್ನರಿಯಬೇಕಾದರೆ ಶಾಸನಗಳಿಗಿಂತ ಉತ್ತಮ ಸಾಧನಗಳಿಲ್ಲ' (ಕ.ಶಾ.ಸಾ.ಅ.ಪು.ಸಂ–೧೧) ಶಾಸನಗಳಂತೆ ಶಾಸನಶಿಲ್ಪಗಳ ಮೇಲೆ ಬೆಳಕು ಚೆಲ್ಲುತ್ತವೆ. ಇಂತಹ ಬೆಳಕು ಚೆಲ್ಲುವ ಶಿಲ್ಪಗಳು ಆಯಾ ರಾಜರ ಕಾಲದಲ್ಲಿ ಬೆಳೆದು ಬಂದಿದ್ದು ಅಗ್ನಿ, ಅಣಬಿ, ಆಂದೋಲ, ಇಜೇರಿ, ಕುಳಗೇರಿ, ಯಡ್ರಾಮಿ, ಗೋಗಿ, ಕೆಂಬಾವಿ,

ಸಗರ, ಏವೂರು, ಮುದನೂರು, ಹಗರಟಗಿ, ಕೊಂಡಗುಳಿ ಮುಂತಾದ ಕಡೆ ಜೈನ ಶಿಲ್ಪಗಳು ಹಾಗೂ ಶೈವ ಶಿಲ್ಪಗಳು ಕಂಡುಬರುತ್ತವೆ. ರಾಷ್ಟ್ರಕೂಟರ ಕಾಲದಿಂದ ಕಲ್ಯಾಣ ಚಾಲುಕ್ಯ ಹಾಗೂ ಅವರ ಮಹಾಮಂಡಳೇಶ್ವರರ ಕಾಲದವರೆಗೂ ಅನೇಕ ಶಿಲ್ಪಗಳು ಕಂಡುಬರುತ್ತವೆ. ಕೆಲ ಶಿಲ್ಪಗಳು ಹಿಂದಿನ ಸ್ಥಿತಿಯಲ್ಲಿ ಇರದೇ ಅವು ಅಲ್ಲಲ್ಲಿ ಚದುರಿ ಬಿದ್ದಿವೆ. ಸಗರನಾಡಿನ ಕುಳಗೇರಿಯ ನಾಗೇಶ್ವರ ದೇವಾಲಯದ ಕ್ರಿ.ಶ. ೧೧೩೮, ಹಾಗೂ ಕ್ರಿ.ಶ. ೧೧೫೬ರ ಶಾಸನಗಳು ಜೈನ ಮುನಿಗಳಾದ ನರೇಂದ್ರ ಕೀರ್ತಿ ಹಾಗೂ ಈತನ ಶಿಷ್ಯ ಕನಕನಂದಿಯರ ಸಮಾಧಿ ಮರಣ ಹೊಂದಿದ್ದ ಶಿಲ್ಪಗಳಾಗಿವೆ. ಕುಳಗೇರಿಯಲ್ಲಿರುವ ಇನ್ನೊಂದು ಶಾಸನ ಕನಕಸಿರಿಯವ್ವೆ ಜೈನ ಧರ್ಮದವಳಾಗಿದ್ದು, ಅವಳು ಸಮಾಧಿ ಮರಣ ಹೊಂದಿದ್ದು ಶಿಲ್ಪ ಬಹಳ ಸುಂದರವಾಗಿದೆ. ಆದರೆ ಶಿಲ್ಪ ಹಾಳು ಮಾಡಿದ್ದಾರೆ. ಈ ನಿಶಧಿ ಮೂರ್ತಿ ಶಿಲ್ಪವನ್ನು ಮಾಧವನು ಮಾಡಿಸಿದ್ದು ಕುಳಗೇರಿ ಶಾಸನದಿಂದ ತಿಳಿದುಬರುತ್ತದೆ. ರಾಷ್ಟ್ರಕೂಟರ ಕಾಲದಲ್ಲಿ ೨೩ನೇ ತೀರ್ಥಂಕರನಾದ ಪಾರ್ಶ್ವನಾಥನ ವಿಗ್ರಹ ಗೋಗಿಯಲ್ಲಿದೆ. ಪಾರ್ಶ್ವನಾಥನ ಎಡ ಹಾಗೂ ಬಲ ಭಾಗದಲ್ಲಿ ಧರಣೇಂದ್ರ ಯಕ್ಷ, ಪದ್ಮಾವತಿ ಯಕ್ಷಿಯರ ಶಿಲ್ಪಗಳು ಬಹಳ ಸುಂದರವಾಗಿವೆ.

೨೪ನೇ ತೀರ್ಥಂಕರ ಮಹಾವೀರನ ಶಿಲ್ಪವು ಅಗ್ನಿಯಲ್ಲಿ ಕಂಡುಬರುತ್ತದೆ. ಸಿಂಹ ಪೀಠದ ಮೇಲೆ ಪದ್ಮಾಸೀನ ಹಾಕಿದ ಶಿಲ್ಪ ಬಹಳ ಸುಂದರವಾಗಿದೆ. ಇದರ ಬಾಗಿಲವಾಡವು ನಾಲ್ಕು ಶಾಖೆಗಳನ್ನು ಹೊಂದಿದ್ದು, ಲಲಾಟದಲ್ಲಿ ಮಹಾವೀರನ ಕಿರು ಶಿಲ್ಪವಿದೆ. ಎರಡು ದ್ವಾರದ ಶಿಲ್ಪಗಳೂ ಬಹಳ ಆಕರ್ಷಕವಾಗಿ ಕಂಡುಬರುತ್ತವೆ. ಶಾಸನೋಕ್ತ ಆದಿನಾಥನ ಮುಕ್ಕಾದ ಜಿನ ತೀರ್ಥಂಕರನ ಶಿಲ್ಪ ಆಂದೋಲದಲ್ಲಿದೆ. ಸೋಮೇಶ್ವರ ದೇವಾಲಯದಲ್ಲಿ ಯಕ್ಷ, ಪದ್ಮಾವತಿ, ಅಂಬಿಕಾ ಅಥವಾ ಕೂಷ್ಮಾಂಡಿನಿ ಯಕ್ಷಿಯರ ಶಿಲ್ಪಗಳು ಏವೂರಿನಲ್ಲಿವೆ.

ಸಗರನಾಡಿನಲ್ಲಿ ಜೈನ ಶಿಲ್ಪದೊಂದಿಗೆ ಶೈವ ಶಿಲ್ಪಗಳು ಕಂಡುಬರುತ್ತವೆ. ಶಾಸನೋಕ್ತ ನಾಗೇಶ್ವರ ದೇವಾಲಯ ಕುಳಗೇರಿಯಲ್ಲಿ ಕಂಡುಬರುತ್ತದೆ. ಈ ದೇವಾಲಯವು ಕಲ್ಯಾಣ ಚಾಲುಕ್ಯರ ಕಾಲದ್ದಾಗಿದೆ. ಈ ದೇವಾಲಯ ನೋಡಿದರೆ ತ್ರಿಕೂಟವೆನಿಸುತ್ತದೆ. ಅದರೆ ಏಕಕೂಟವಾಗಿ ನಿರ್ಮಾಣಗೊಂಡಿದೆ. ಗರ್ಭಗ್ರಹದ ಆಳದಲ್ಲಿ ಶಿವಲಿಂಗವಿದೆ. ದ್ವಾರಗಳು ಪಂಚಶಾಖೆಗಳಿಂದ ಕೂಡಿವೆ. ಲಲಾಟದಲ್ಲಿ ಗಜಲಕ್ಷ್ಮಿ ಕಂಡು ಬರುತ್ತಾಳೆ. ಈ ದೇವಾಲಯದ ಅಂತರಾಳದ ಮೇಲ್ಭಾವಣಿ ಮಕರ (ಮೀನು, ಮೊಸಳೆ) ತೋರಣದಿಂದ ಕೂಡಿದೆ. ಬ್ರಹ್ಮ, ವಿಷ್ಣು, ಮಹೇಶ್ವರ ಶಿಲ್ಪಗಳು ಬಹಳ ಆಕರ್ಷಕವಾಗಿ ಕಂಡುಬರುತ್ತವೆ. ಸುತ್ತಲೂ ಚೌರಿಧಾರಿ ಪರಿಚಾರಿಕೆಯರ ಶಿಲ್ಪಗಳು, ನವರಂಗದಲ್ಲಿ ಉಮಾ-ಮಹೇಶ್ವರರ ಶಿಲ್ಪಗಳು ಅತಿ ಅಕರ್ಷಣೆಯವಾಗಿವೆ. ಈ ದೇವಾಲಯದ ಹೊರ ಭಿತ್ತಿಯಲ್ಲಿ ವಾಮನ, ವಿಷ್ಣು, ನಟರಾಜ,

ಅರ್ಜುನ, ವರಾಹ, ವೀಣಾಧಾರಿ ಶಿವ, ಭೈರವಿ ಮುಂತಾದ ಉಬ್ಬು ಕೆತ್ತನೆಯ ಶಿಲ್ಪಗಳು ಕಣ್ಣ-ಮನಗಳನ್ನು ಸೆಳೆಯುತ್ತವೆ. ಇನ್ನೊಂದು ಶಾಸನೋಕ್ತ ಮಲ್ಲಿಕಾರ್ಜುನ ದೇವಾಲಯ ಕೊಂಡಗುಳಿಯಲ್ಲಿ ಕಂಡುಬರುತ್ತದೆ. ಈ ದೇವಾಲಯದ ಪೂರ್ವ ಭಾಗದಲ್ಲಿ ಗರ್ಭಗ್ರಹ, ತೆರೆದ ಅಂತರಾಳ, ನವರಂಗ, ಮುಖಮಂಟಪ ಹಾಗೂ ನಂದಿ ಮಂಟಪಗಳು ಕಂಡುಬರುತ್ತವೆ. ದೇವಾಲಯವನ್ನು ಪ್ರವೇಶಿಸಲು ಮೂರು ದಿಕ್ಕಿನ ಕಡೆ ದ್ವಾರಗಳು ಇವೆ. ಇವು ಜನರನ್ನು ಭಕ್ತಿಯಿಂದ ಸ್ವಾಗತಿಸುತ್ತವೆ. ಕಲ್ಯಾಣ ಚಾಲುಕ್ಯರ ಕಾಲದಲ್ಲಿ ೩೬೫ ಶಿವ ಲಿಂಗಗಳು ಶಿರವಾಳದಲ್ಲಿವೆ. ಆದರೆ ಇಂದು ಇವು ಅವನತಿಯ ಅಂಚಿನಲ್ಲಿವೆ. ಶಿರವಾಳದಲ್ಲಿ ಸುಜ್ಞಾನೇಶ್ವರನ ದೇವಾಲಯ ಪ್ರಸಿದ್ಧಿಪಡೆದಿದೆ. ‘‘ಸುಜ್ಞಾನೇಶ್ವರನ ಸಚ್ಚಾರಿತ್ರ್ಯದಿಂದ ಕುಖ್ಯಾತ ಬೇಡ ಮಾತಂಗನನ್ನು ಪರಿವರ್ತಿಸಿದ ಕೀರ್ತಿ ಈ ಸದ್ಗುರುವಿನದು. ಈ ದೇವಾಲಯದ ಹತ್ತಿರವೇ ನನ್ನಯ್ಯ ನಾಗಯ್ಯರ ಭವ್ಯ ಅವಳಿ ದೇವಾಲಯಗಳಿದ್ದು ಅಲ್ಲಿ ಭವ್ಯ ಶಿವಲಿಂಗವೊಂದಿದೆ. ಹೊನ್ನಲಿಂಗೇಶ್ವರ ದೇವಾಲಯ ಅಗ್ನಿಯಲ್ಲಿದೆ. ಈ ದೇವಾಲಯವು ಕಲ್ಯಾಣ ಚಾಲುಕ್ಯರ ಕಾಲಕ್ಕೆ ಸಂಬಂಧಿಸಿದೆ. ಈ ದೇವಾಲಯದ ಗರ್ಭಗ್ರಹದಲ್ಲಿ ಲಿಂಗವಿದೆ. ಹೊರಭಾಗದಲ್ಲಿ ವೀರಗಲ್ಲುಗಳು ಅಲಲ್ಲಿ ಚೆದುರಿ ಬಿದ್ದಿವೆ. ಮಲ್ಲಿಕಾರ್ಜುನ ದೇವಾಲಯ ಗರ್ಭಗ್ರಹದಲ್ಲಿ ಶಿವಲಿಂಗವಿದೆ. ಇನ್ನು ಕೆಲ ಶಿಲ್ಪಗಳು ಹಾಳು ಬಿದ್ದಿವೆ.

ಶಾಂತಲಿಂಗೇಶ್ವರ ದೇವಾಲಯ ಅಂದೋಲದಲ್ಲಿ ಕಂಡುಬರುತ್ತದೆ. ಈ ದೇವಾಲಯದ ನವರಂಗದ ಕಂಬಗಳ ಮೇಲೆ ಶಿವ, ಪಾರ್ವತಿ, ವಾಲಿ, ಸುಗ್ರೀವರ ಉಬ್ಬು ಶಿಲ್ಪಗಳು ಕಂಡುಬರುತ್ತವೆ. ಹೀಗೆ ಈ ನಾಡಿನಾದ್ಯಂತ ಅನೇಕ ಶಿಲ್ಪಗಳು ಕಂಡುಬರುತ್ತವೆ. ಇಂದು ಇವುಗಳ ಸ್ಥಿತಿ ಮೊದಲಿನ ಸ್ಥಿತಿಯಲ್ಲಿ ಕಂಡುಬರುವುದಿಲ್ಲ.

## ೨.೧೧. ಶಿವಶರಣರು:

ಚರಿತ್ರೆಗಿಂತ ಚಾರಿತ್ರ್ಯ ದೊಡ್ಡದು. ಹೀಗಾಗಿ ಸಚ್ಚಾರಿತ್ರ್ಯದ ಸಾಕಾರ ಮೂರ್ತಿ ಎನಿಸಿದ ಶಿವಶರಣರು ತಮ್ಮ ಚರಿತ್ರೆ ಅರಿಯಲಿಲ್ಲ. ಬೇರಯಲಿಲ್ಲ, ಅದರ ಬದಲಾಗಿ ಉದಾತ್ತ ಆಚರಣೆ ಬದುಕಿಗೆ ಆದರ್ಶವಾಗಿ ನಿಲ್ಲಲಿ ಎಂಬ ನಿಲ್ಲವು ಕವಿಗಳದಾಗಿತ್ತು. ಹಾಗಾಗಿ ಇವರ ಬದಕನ್ನು ಬರಹಕ್ಕೆ ಇಳಿಸಿದವರು ಕವಿಗಳು. ತಮ್ಮ ಪೂರ್ವದ ವ್ಯವಸ್ಥೆಯ ವಿರುದ್ಧ ಬಂಡೆದ್ದ ಹನ್ನೆರಡನೇ ಶತಮಾನದ ಶಿವಶರಣರು ಹೊಸ ಸಮಾಜ ರಚಿಸುವಲ್ಲಿ ಅತುರರಾಗಿದ್ದರು. ಕೀಳುವರ್ಗದವರ ಹಾಗೂ ಜನಸಾಮಾನ್ಯರ ಸಮೀಪಕ್ಕೆ ಹೋದರು. ಈ ವೇಳೇಗಾಗಲೇ ವೀರಶೈವರಲ್ಲಿ ಪಾಶುಪತ ಕಾಳಾಮುಖ ಶೈವರಲ್ಲಿ ಒಂದು ಶಾಖೆ ಉದಯಗೊಂಡಿದ್ದು, ಕಾಳಾಮುಖ, ಶೈವ-ವೀರಶೈವ, ಹಾಗೂ ಇಲ್ಲಿನ ಹೊಸ ಶಾಖೆಯ

ಮುಂದಾಳತ್ವಕ್ಕೆ ಕೊರತೆ ಉಂಟಾಯಿತು. ಆಗ ಸಮಾಜದಲ್ಲಿ ಶೋಷಣೆಗೆ ಒಳಗಾದವರನ್ನು ಹೊರ ತಂದು ಹೊಸ ಧರ್ಮದ ಕಡೆ ಮುನ್ನಡೆಸುವ ಕಾರ್ಯ ಸಗರನಾಡಿನ ಶಿವಶರಣದಾಗಿತ್ತು. ಕೆಂಬಾವಿ ಭೋಗಣ್ಣ, ಜೇಡರ ದಾಸಿಮಯ್ಯ, ಕೊಂಡಗುಳಿ ಕೇಶಿರಾಜ, ಸಗರದ ಬ್ರಹ್ಮಯ್ಯ, ಕಡಿಕೋಳ ಮಡಿವಾಳಪ್ಪ ಹೀಗೆ ಅನೇಕ ಶಿವಶರಣರು ಕಂಡುಬರುತ್ತಾರೆ.

### ಮುದುನೂರಿನ ಜೇಡರ ದಾಸಿಯ್ಯ ಕ್ರಿ.ಶ.೯೮೦–೧೦೪೦:

ಮುದನೂರಿನ ಜೇಡರ ದಾಸಿಮಯ್ಯ ಕಲ್ಯಾಣ ಚಾಲುಕ್ಯ ಇಮ್ಮಡಿ ಜಯಸಿಂಹನ ಕಾಲದಲ್ಲಿದ್ದನು. ದಾಸಿಮಯ್ಯನ ಕಾಲಾವಧಿಯ ಬಗ್ಗೆ ಇತಿಹಾಸಕಾರರಲ್ಲಿ ಭಿನ್ನಾಭಿಪ್ರಾಯಗಳಿವೆ. ಗೋವಿಂದ ಪೈ ಅವರು ಕ್ರಿ.ಶ.೯೮೦–೧೦೪೦ ಎಂದು ನಿರ್ಣಯಿಸಿದ್ದಾರೆ. ದಾಸಿಮಯ್ಯನಿಗೆ ದೇವರ ದಾಸಿಮಯ್ಯ ಹಾಗೂ ಜೇಡರ ದಾಸಿಮಯ್ಯ ಎಂದು ಕರೆಯಲಾಗುತ್ತದೆ. ಮುದನೂರು ಎಂಬ ಗ್ರಾಮದಲ್ಲಿ "ಕಾಮಯ್ಯ ಮತ್ತು ಶಂಕರಿ ಎಂಬ ದಂಪತಿಗಳಿಗೆ ದಾಸಿಮಯ್ಯ"[೩೯] ಮಗನಾಗಿ ಹುಟ್ಟಿದನು.

ತನ್ನ ಬಾಲ್ಯದ ದಿನಗಳನ್ನು ಮುದನೂರಿನಲ್ಲಿ ಕಳೆದನು. ನಂತರ ಈತ ಶ್ರೀಶೈಲಕ್ಕೆ ತೆರಳಿ ಅಲ್ಲಿರುವ ಅಧ್ಯಾತ್ಮಿಕ ಗುರುವಾದ ಚಂದ್ರಗುಂಡರಿಂದ ಲಿಂಗದೀಕ್ಷೆ ಪಡೆದನು. ಅಷ್ಟಾವರಣಗಳನ್ನು ಅಳವಡಿಸಿಕೊಂಡು ಶರಣರ ಕಾಯಕ ತತ್ವಗಳನ್ನು ಮೈಗೂಡಿಸಿಕೊಂಡು, ನಾಡಿನಾದ್ಯಂತ ಸಂಚರಿಸಿ ಧರ್ಮದ ತತ್ವಗಳನ್ನು ಭೋದಿಸುತ್ತಾ ನಡೆದನು. ಕಾಯಕಯೋಗದ ದರ್ಶನವನ್ನು ಸ್ಪಷ್ಟವಾಗಿ ವ್ಯಕ್ತಿಪಡಿಸಿದ. ಜನಸಾಮಾನ್ಯರ ನಡುವಿನ ಮೊದಲ ಮಹಾನ್ ಸಂತರಲ್ಲಿ ದಾಸಿಮಯ್ಯ ಪ್ರಮುಖನಾಗಿದ್ದಾನೆ. ಮುಂದೆ ಈತ ದುಗ್ಗಳೆ ಎಂಬುವಳನ್ನು ವಿವಾಹವಾಗುತ್ತಾನೆ. ದಾಂಪತ್ಯದ ಜೊತೆಗೆ ಕಾಯಕ, ಭಕ್ತಿ, ನಿಷ್ಠೆ, ಸಾದಾಚಾರಗಳಂತಹ ತತ್ವಗಳನ್ನು ಅಳವಡಿಸಿಕೊಂಡಿದ್ದನು. ವೀರಶೈವ ಧರ್ಮದ ಸಂಘಟಕನಾಗಿ, ಸಮಾಜದಲ್ಲಿರುವ ಮೇಲು ಕೀಳು, ಅಸಮಾನತೆ, ಮೂಢನಂಬಿಕೆಯನ್ನು ಹೊಗಲಾಡಿಸಿ, 'ರಾಮನಾಥ' ಎಂಬ ಅಂಕಿತನಾಮದೊಂದಿಗೆ ಇನ್ನೂರಕ್ಕೂ ಹೆಚ್ಚು ವಚನಗಳನ್ನು ರಚಿಸಿದ್ದಾನೆ.

### ಕೆಂಬಾವಿ ಭೋಗಣ್ಣ ಕ್ರಿ.ಶ. ೧೧೦೦೦–೧೨೦೦ :

ಕೆಂಬಾವಿ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಪ್ರಸಿದ್ಧ ಅಗ್ರಹಾರವಾಗಿತ್ತು. ಕೆಂಪು+ಬಾವಿ=ಕೆಂಬಾವಿ ಎಂದು ಈ ಗ್ರಾಮಕ್ಕೆ ಹೆಸರು ಬಂದಿರಬೇಕು. ಈ ಗ್ರಾಮದ

ಮುಂದೆ ಕೆರೆ ಇದೆ. ಕೆಮ್ಮಣಿನಿಂದ ಕೂಡಿದೆ. ಕೆಂಪು+ಮಣ್ಣು=ಕೆಮ್ಮಣ್ಣು, ಕೆಂಪು+ಕಣ್ಣು (ಉಳ್ಳವನು)=ಕೆಂಗಣ್ಣ (ಶಿವ) ಎಂಬ ದೇವರು ಇದೆ. ಈ ಕೆರೆಗೆ ಕೆಂಪು+ಕೆರೆ=ಕೆಂಗೆರೆ."[೪೦] ಈ ರೀತಿ ವಿವಿಧ ಹೆಸರುಗಳಿಂದ ಈ ಗ್ರಾಮವನ್ನು ಕರೆಯುತ್ತಾರೆ. ಹನ್ನೊಂದನೇ ಶತಮಾನದ ಕೊನೆ ಅವಧಿಯಲ್ಲಿ ಹಾಗೂ ಹನ್ನರಡನೇ ಶತಮಾನದ ಪ್ರಾರಂಭದ ಅವಧಿ ಕೆಂಭಾವಿ ಭೋಗಣ್ಣನದಾಗಿತ್ತು. ಭೋಗಣ್ಣ 'ಬೆಡಗಿನ' ವಚನಗಳನ್ನು ರಚಿಸಿರುವನು. ಈತನ ಬಗ್ಗೆ ಒಂದು ಐತಿಹ್ಯವೇ ಇದೆ. ಭೋಗಣ್ಣ ಗ್ರಾಮದಲ್ಲಿರುವ ಕೆಳ ವರ್ಗದವರ ಉದ್ಧಾರಕ್ಕಾಗಿ ಶ್ರಮಿಸುತ್ತಿದ್ದನು. ಅಂದರೆ ದಲಿತೋದ್ಧಾರ. ಆದರೆ ಶ್ರೇಷ್ಠ ವರ್ಗದವರು ಇದನ್ನು ಸಹಿಸಿಕೊಳ್ಳಲಿಲ್ಲ. ಹಾಗಾಗಿ ಊರಿನ ಜನ ರಾಜ ಚಂದಿಮರಸನಿಗೆ ಇವನ ಬಗ್ಗೆ ಇಲ್ಲ ಸಲ್ಲದ ಸುಳ್ಳು ಆರೋಪಗಳನ್ನು ಹೊರಿಸಿ ಗ್ರಾಮದಿಂದ ಹೊರಹಾಕಿದರು.

ಮರುದಿನ ಬೆಳಗ್ಗೆ ಬ್ರಾಹ್ಮಣರು (ವಿಪ್ರರೂ) ದೇವಾಲಯದ ಪೂಜೆಗೆಂದು ಒಳಹೊಕ್ಕಾಗ ಅಲ್ಲಿರುವ ಲಿಂಗಗಳು ಮಾಯಾವಾಗಿದ್ದು ಭೋಗಣ್ಣನ ಹಿಂದೆ ಹೋಗಿದ್ದವು. ಭೋಗಣ್ಣ ಲಿಂಗ ಪ್ರೇಮಿ. ಆತನಿಲ್ಲದಿದ್ದರೆ ಪ್ರಳಯ ಖಂಡಿತ ಎಂದು ಬಾವಿಸಿದ್ದರು. ಈ ವಿಷಯ ರಾಜನಿಗೆ ತಿಳಿಸಿದರು. ಆಗ ರಾಜ ಚಂದಿಮರಸ "ಶಿವನರಿಯದ ಪಾತಕರ್ಗೆ ಕರುಣಿಸುವದಯ್ಯಾ"[೪೧] ಎಂದು ಭೋಗಣ್ಣನಿಗೆ ಕ್ಷಮೆಯಾಚಿಸಿ ಆತನನ್ನು ಮತ್ತೆ ವೈಭವದಿಂದ ಕೆಂಬಾವಿಗೆ ಕರೆದುಕೊಂಡು ಬಂದರು. ಇದರಿಂದ ಭೋಗಣ್ಣ ಶರಣರೊಂದಿಗೆ ಒಡನಾಟ ಬೆಳೆಸಿದ. "ನಿಜಗುರು ಭೋಗನಾಥ" ಎಂಬ ಅಂಕಿತ ನಾಮದಲ್ಲಿ ಗುರು ವಚನಗಳನ್ನು ರಚಿಸಿದನು. "ಪರಸಮಯಿಗಳಂ ಪಡಲ್ವಡಿಸಿ ಶಿವಲಿಂಗ ಸಿಂಹಾಸನಮಂ (ಕ) ಣ್ಣೊಳಿಸಿದ"[೪೨] ವೀರಶರಣರ ಗ್ರಾಮಗಳನ್ನು ಹೆಸರಿಸುವ ತಾಳಿಕೋಟೆ ಶಾಸನದಲ್ಲಿ ಕಂಡುಬರುವ ಕೆಂಭಾವಿಯು ಈ ಭೋಗಣ್ಣನಿಂದ ಖ್ಯಾತವಾಗಿದೆ. ಹೀಗೆ ಸಗರನಾಡಿನ ಬಸವಪೂರ್ವದ ಶರಣರಲ್ಲಿ ಅಪ್ರತಿಮ ಪವಾಡಪುರುಷನಾಗಿ, ವಚನಕಾರನಾಗಿ ವೈದಿಕ ಧರ್ಮದ ವಿರುದ್ಧ ಹೋರಾಡಿ ಸಮಾಜದಲ್ಲಿರುವ ಮೇಲು-ಕೀಳು ಎಂಬ ಬೇದ-ಭಾವವನ್ನು ಹೋಗಲಾಡಿಸಿದನು. ಅಂತೆಯೇ "ಕೆಂಭಾವಿಯಂತಹ ಊರಿಲ್ಲ, ನಂಬಿಯಣ್ಣನಂತಹ ದೇವರಿಲ್ಲ, ಭೋಗಣ್ಣನಂತ ಶರಣನಿಲ್ಲ" ಎಂದು ಜನರು ಹೇಳುತ್ತಾರೆ. ರಾಜ ಚಂದಿಮರಸ ಭೋಗಣ್ಣನ ಅಪ್ರತಿಮ ಮಹಿಮೆಗೆ ಮೆಚ್ಚಿ ಅವನ ಶಿಷ್ಯನಾಗಿ ಲಿಂಗದೀಕ್ಷೆ ಪಡೆಯುತ್ತಾನೆ. ಈತನು ಸಹ "ಸಿಮ್ಮಲಿಗೆಯ ಚೆನ್ನರಾಮ" ಎಂಬ ಅಂಕಿತನಾಮದಿಂದ ವಚನಗಳನ್ನು ರಚಿಸುತ್ತಾನೆ. ಹೀಗೆ ಸಗರನಾಡಿನ ಶಿವಶರಣರಲ್ಲಿ ಒಬ್ಬನಾಗಿದ್ದ ಕೆಂಭಾವಿ ಭೋಗಣ್ಣ,

ಸಮಾಜದಲ್ಲಿರುವ ವರ್ಣ ಸಂಘರ್ಷಗಳ ವಿರುದ್ಧ ಹೋರಾಡಿ ಅಧ್ಯಾತ್ಮಿಕವಾಗಿ, ನೈತಿಕವಾಗಿ ಹಾಗೂ ದೈವಿಕವಾಗಿ ಭಕ್ತಿಯ ಮೌಲ್ಯವನ್ನು ಎತ್ತಿ ಹಿಡಿದಿದ್ದಾನೆ.

## ನಾಗಚಂದ್ರ ಕ್ರಿ.ಶ.೧೧೦೦:

ನಾಗಚಂದ್ರನು ಸಗರನಾಡಿನ ಕುಳಗೇರಿ ಗ್ರಾಮದಲ್ಲಿ ಜನಿಸಿದನು. ಕುಳಗೇರಿ, ಕುಳಗೇರೆ ಎಂಬುದು ಶಾಸನಗಳಿಂದ ತಿಳಿದುಬರುತ್ತದೆ. ಈ ಕುಳಗೇರಿಯನ್ನು ಹಿಂದೆ ಕುಂತಳ ನಗರವೆಂದು ಕರೆಯಲಾಗುತ್ತಿತ್ತು. ಚಂದ್ರಹಾಸನೆಂಬ ಪ್ರಸಿದ್ಧ ರಾಜನ ಆಡಳಿತಕ್ಕೆ ಈ ಗ್ರಾಮ ಒಳಪಟ್ಟಿತು. ಇದರಿಂದ ಈ ಗ್ರಾಮ ಹೆಚ್ಚು ಪ್ರಸಿದ್ಧಿ ಪಡೆದುಕೊಂಡಿತು. ನಾಗಚಂದ್ರ ಜೈನ ಕವಿಯಾಗಿದ್ದ. ಸಾಹಿತ್ಯದಲ್ಲಿ ಹೆಚ್ಚು ಕೃಷಿ ಮಾಡಿದ ಈತ, "ಅಭಿನವ ಪಂಪ" ಎಂದು ಕರೆಯಿಸಿಕೊಂಡಿದ್ದಾನೆ. ಈತ ಎರಡು ಕಾವ್ಯಗಳನ್ನು ರಚಿಸಿದ್ದಾನೆ. ಒಂದು "ರಾಮಚಂದ್ರ ಚರಿತ ಪುರಾಣ. ಈ ಪುರಾಣವನ್ನು ಪಂಪರಾಮಾಯಣವೆಂದು, ಜೈರಾಮಾಯಣವಂತಲೂ ಹೇಳಲಾಗಿದೆ. ಇದರಲ್ಲಿ ಹದಿನಾರು ಆಶ್ವಾಸಗಳವೆ. ಇನ್ನೊಂದು ಮಲ್ಲಿನಾಥ ಪುರಾಣ. ಇದು ಜೈನ ಧರ್ಮದ ಮಲ್ಲಿನಾಥ ಜಿನೇಂದ್ರನ ಕಥೆಯಾಗಿದೆ. ಇದರಲ್ಲಿ ಹದಿನಾಲ್ಕು ಆಶ್ವಾಸಗಳಿವೆ."[೪೩] ಕೆಲ ಇತಿಹಾಸಕಾರರು ಈತ ಬಿಜಾಪುರದವನು ಎಂದು ಅಭಿಪ್ರಾಯಪಟ್ಟಿದ್ದಾರೆ. ಕಾರಣ ಈತ ಅಲ್ಲಿ ಮಲ್ಲಿನಾಥ ಜಿನ ಮಂದಿರವನ್ನು ಕಟ್ಟಿಸಿದ್ದರಿಂದ ಈ ಅಭಿಪ್ರಾಯಕ್ಕೆ ಬಂದಿದ್ದಾರೆ. ಆದರೆ ಈತ ಮೂಲತಃ ಕುಳಗೇರಿ ಗ್ರಾಮದವನು ಎಂಬುದು ಇಲ್ಲಿನ ಜೈನಕವಿಗಳಿಂದ ತಿಳಿದುಬರುತ್ತದೆ.

ಈತನ ಗುರು ಬಾಲಚಂದ್ರಮುನಿ. ನಾಗಚಂದ್ರನು ಬರೆದ ಕಾವ್ಯಗಳು ಸೀತೆಯ ಸ್ವಯಂವರದ ಸನ್ನಿವೇಶ, ಸೀತೆಯನ್ನು ಕಳೆದುಕೊಂಡು ರಾಮ ಶೋಕಿಸಿದ ಸನ್ನಿವೇಶ ಹೀಗೆ ಅನೇಕ ಪದ್ಯಗಳನ್ನು ರಚಿಸಿದ್ದಾನೆ.

## ಕೊಂಡಗುಳಿ ಕೇಶಿರಾಜ ಕ್ರಿ.ಶ.೧೦೫೦–೧೧೧೦ :

ಕೊಂಡಗುಳಿ ಕೇಶಿರಾಜನ ಜನನದ ಬಗ್ಗೆ ಇತಿಹಾಸಕಾರರಲ್ಲಿ ಒಮ್ಮತದ ಅಭಿಪ್ರಾಯಗಳಿಲ್ಲ. ಈತನ ಜನನ ಶಿವಮೊಗ್ಗ ಜಿಲ್ಲೆಯ ಷಿಕಾರಿಪುರ ಅಗಿತ್ತು ಎಂಬುದು ಷಿಕಾರಿಪುರ ಶಾಸನದಿಂದ ತಿಳಿದು ಬರುತ್ತದೆ. ಆದರೆ ಇತ್ತೀಚಿನ ಸಂಶೋಧನೆಯಿಂದ ಕೊಂಡಗುಳಿಯೇ ಈತನ ಜನ್ಮ ಸ್ಥಳವಾಗಿತ್ತು ಎಂಬುದು ಕೊಂಡಗುಳಿ ಕ್ರಿ.ಶ೧೧೦೭ರ ಶಾಸನದಿಂದ ತಿಳಿದು ಬರುತ್ತದೆ. ಈ ಶಾಸನದಿಂದ ಈತನ ಚರಿತ್ರೆಯ ಮೇಲೆ ಹೊಸ

ಬೆಳಕು ಚೆಲ್ಲಿದೆ. ಈತ ಪರಮ ಸದ್ಭಕ್ತನೂ, ಕವಿಯೂ, ಸತ್ಯವ್ರತನೂ ಆದ ಶಿವಶರಣ. ಬಸವ ಪೂರ್ವ ಯುಗದ ಶಿವಶರಣರಲ್ಲಿ ಮೊಟ್ಟ ಮೊದಲ ಶರಣ ಕೊಂಡಗುಳಿ ಕೇಶಿರಾಜ. ಈತನ ಗುರುಗಳು ವಿರುಪಾಕ್ಷ ದೇವರು. ಸೋಮನಾಥ ಈತನ ಆರಾಧ್ಯ ದೈವನಾಗಿದ್ದ. ಪೂಜೆ ಮಾಡುವುದೇ ಈತನ ನಿತ್ಯ ಕಾಯಕ. ಈತ ಕೊಂಡಗುಳಿಯಲ್ಲಿರುವಾಗ ಕಲ್ಯಾಣ ಚಾಲುಕ್ಯ ಆರನೇ ವಿಕ್ರಮಾದಿತ್ಯನ ದಂಡನಾಯಕನಾಗಿದ್ದನು ಎಂಬುದು ಕೊಂಡಗುಳಿ ಶಾಸನದಿಂದ ತಿಳಿದುಬರುತ್ತದೆ.

"ಶ್ರೀಮತ್ತ್ರಿಭುವನ ಮಲ್ಲದೇವ ಪದಾರಾಧಕಂ
ಪಂXXXಕನಾಮಾದಿ ಸಮಸ್ತ ಪ್ರಶಸ್ತಿ ಸಹಿತXXX ಮನು
ಮಹಾಪ್ರಧಾನಂ ಮನೆವೆರ್ಗಡೆ ದಂಡXXXX ಬಣಯ್ಯಂಗಳ್
ರಾಯನಾರಾಯಣಪುXXXಯು (ದ್ಯಾಪ)ನದಲು ಕೆರೆಯಪುರದೊ XXX
ಧರ್ಮವಾಗಿ ಶ್ರೀಮತ್ತ್ರಿಭುವನಮ XXXಲು ಧಾರಾಪೂವ್ವ XXX
ಶ್ಯದಗ್ರ (ಹಾ) XXX ಮಾಗಿರೆ ಪಡೆದ ಸಹಿ XX ಕೊಣ್ಡಗುಳಿಯಲು
ನಿಂಬ XXಗಳಮಗ ಶ್ರೀ ಸ್ವಸ್ತಿ ಸಮಧಿಗತ ಪಂಚಮಹಾಶಬ್ದ
ಮಹಾಸಾಮನ್ತಾಧಿಪತಿ(ಮ) XX ಮಹಾಪ್ರಚಂಡ ದಣ್ಡನಾಯಕ
ದುಷ್ಟವಿದ್ವಿಷ್ಟವಿಧೇಯಕ ವಾಜಿಕುಳಾರ್ಣ್ನವ ಪಾರಿಜಾತ
ಸುಕವಿಶುಕಚೂತಬನ್ಧುವನವಸನ್ತ ವಚಶ್ರೀವಧೂಕಾನ್ತ
ಸಾಹಿತ್ಯಸರೋರುಹ ಮಧುಬ್ರತ ಸತ್ಯಸತ್ಯಬ್ರತ ಹರಚರಣ
ರಜೋರಂಜಿತೋತ್ತಮಾಂಗ ನಯ್ಯನಸಿಂಗ ನಾಮಾದಿ ಸಮಸ್ತ
ಪ್ರಶಸ್ತಿ ಸಹಿತಂ ಶ್ರೀ ಮನ್ಮಹಾಪ್ರಧಾನಂ ಹೇರಿಲಾಳ ಸಂಧಿವಿಗ್ರಹಿ
ದಣ್ಡನಾ(ಯ)ಕಂ ಕೇಸಿರಾಜರಸರು ಶ್ರೀಮತ್ ಚಾಳುಕ್ಯ ವಿಕ್ರಮ
ವರ್ಷದ ೩೩ನೆಯ ಸರ್ವ್ವಜಿತ್ ಸಂವತ್ಸರದ ಮಾರ್ಗ
ಸಿರದಮವಾಸ್ಯೆ ಸೋಮವಾರದಂದಿನ ಸೂರ್ಯ್ಯಗ್ರಹಣ
ಪರ್ವ್ವನಿಮಿತ್ತದಲು ತಾವು ಮಾಡಿಸಿದ ಶಿವಾಲೆಯದ
ಮೂಲ ಸ್ಥಾನದ ಶ್ರೀ ಸೋಮೇಶರದೇವರ್ಗ್ಗೆ ||"[೪೪]

ಈ ಶಾಸನದಿಂದ "ಮನೆವೆರ್ಗಡೆ ದಂಡ XXX ಬಣಯ್ಯಂಗಳ್" ಮತ್ತು "ನಿಂಬ XX ಗಳ ಮಗ" ಎಂಬ ಎರಡು ತ್ರುಟಿತ ಭಾಗಗಳನ್ನು ಸರಿಯಾಗಿ ಹೋಲಿಸಿ ನೋಡಿದರೆ, ನಿಂಬಣಯ್ಯ ಎಂಬುದು ಸ್ಪಷ್ಟವಾಗುತ್ತದೆ. ಕಲ್ಯಾಣ ಚಾಲುಕ್ಯ ಆರನೇ ವಿಕ್ರಮಾದಿತ್ಯನ ಮಹಾಸಾಮಂತಾಧಿಪತಿ, ಮಹಾಪ್ರಚಂಡ ದಂಡನಾಯಕ, ಮಹಾಪ್ರಧಾನ, ಪೆರ್ಮಾಡಿ ಆಗಿದ್ದನೆಂಬುದು ಈ ಕೊಂಡಗುಳಿ ಶಾಸನದಿಂದ ತಿಳಿದುಬರುತ್ತದೆ. ಕೊಂಡಗುಳಿಯ ನಿಂಬಣಯ್ಯನ ಮಗ ಶ್ರೀ ಕೇಶಿರಾಜರಸ ಎಂಬುದು ಈ ಶಾಸನದಿಂದ ಸ್ಪಷ್ಟವಾಗುತ್ತದೆ. ನಿಂಬಣಯ್ಯನನ್ನು ಈ ಶಾಸನದಲ್ಲಿ 'ವಾಜಿಕುಳಾಂಬರದ್ಯುಮಣಿ' ಎಂದು ಕೇಶಿರಾಜನನ್ನು 'ವಾಜಿಕುಳಾಂಬರ ಪಾರಿಜಾತ' ನೆಂದು ಕರೆದಿದ್ದು ಈ ಶಾಸನದಿಂದ ತಿಳಿದುಬರುತ್ತದೆ. ಅಲ್ಲದೆ. ಹನ್ನೆರಡನೇ ಶತಮಾನದ ಶಿವಶರಣರ ಮೇಲೆ ಅಗಾಧವಾದ ಪ್ರಭಾವವನ್ನು ಬೀರಿದ್ದಾನೆ. ಹಂಪೆಯ ಕವಿ ಹರಿಹರನು ಈತನನ್ನು ತಮ್ಮ ರಗಳೆಯಲ್ಲಿ ನೆನಪಿಸಿಕೊಂಡಿದ್ದಾರೆ. ಕೇಶಿರಾಜ, ಜೇಡರ ದಾಸಿಮಯ್ಯನ ಸಮಕಾಲೀನಾಗಿದ್ದನು.

ಕೊಂಡಗುಳಿ ಕೇಶಿರಾಜ ಕಲ್ಯಾಣ ಚಾಲುಕ್ಯ ಆರನೇ ವಿಕ್ರಮಾದಿತ್ಯನ ರಾಜ್ಯದಲ್ಲಿ ದಂಡನಾಯಕನಾಗಿದ್ದನು. ರಾಜಕೀಯ ವೃತ್ತಿಯಲ್ಲಿ ತನ್ನ ಸೇವೆ ಸಲ್ಲಿಸಿದ. ಇದರಿಂದ "ಪೆರ್ಮಾಡಿ" ಎಂಬ ಬಿರುದು ದೊರಕಿತು. ವೃತ್ತಿ ಲೌಕಿಕವಾದರೂ, ಪ್ರವೃತ್ತಿ ಆಧ್ಯಾತ್ಮಿಕವಾಗಿ, ಶಿವನ ಆರಾಧ್ಯ ಭಕ್ತನಾಗಿದ್ದನು. "ಸತ್ಯಸತ್ಯಬ್ರತ, ಹರ ಚರಣ ರಜೋರಂಜಿ ತೋತ್ತಮಾಂಗಂ" ಎಂಬುದು ಶಾಸನದಿಂದ ತಿಳಿದುಬರುತ್ತದೆ. ಕೇಶಿರಾಜ ಶಿವಶರಣನಾಗಿ ಶಿವಪೂಜೆ ಮಾಡುತ್ತಿದ್ದನೆಂಬುದು ಸ್ಪಷ್ಟಪಡಿಸುತ್ತದೆ. ಶಿವಪೂಜೆ, ಶಿವಧ್ಯಾನ, ಶಿವನಿಷ್ಠೆ, ಶಿವಮತಗಳನ್ನು ಕಡೆಗಣಿಸಲಿಲ್ಲ. ಇದನ್ನು ಸಹಿಸದ ಅಲ್ಲಿನ ಜನ ಈತನನ್ನು ವಿಷ್ಣುನಿಂದಕ ಎಂದು ಆರೋಪಿಸಿದರು. ಇದರಿಂದ ಈತ ತನ್ನ ವೃತ್ತಿಯನ್ನು ಬಿಟ್ಟು ಶಿವಪುರಕ್ಕೆ ಬಂದು ನೆಲೆಸಿದನು. ಈತನ ಹೆಂಡತಿ ಗಂಗಾದೇವಿಯೊಡನೆ ಶಿವಪೂಜೆಯಲ್ಲಿ ಕಾಲ ಕಳೆದನು. ಮತ್ತೆ ಪ್ರಜೆಗಳ ಪ್ರೀತಿ ಅವನಷ್ಟಕ್ಕೆ ಬಿಡಲಿಲ್ಲ. ರಾಜ ಹಾಗೂ ಪ್ರಜೆಗಳು ಬಂದು ಮನವಿ ಮಾಡಿಕೊಂಡು ಕ್ಷಮೆ ಕೇಳಿದರು. ಮತ್ತೆ ಅಧಿಕಾರ ಒಪ್ಪಿಕೊಳ್ಳಲು ಭಿನ್ನವಿಸಿಕೊಂಡರು. ಆಗ ದಂಡನಾಯಕ ಕೇಶಿರಾಜ ತನ್ನ ವೃತ್ತಿಯನ್ನು ಮತ್ತೆ ಪ್ರಾರಂಭಿಸಿದ. ಕೊಂಡಗುಳಿ ಕೇಶಿರಾಜನು "ಷಡಕ್ಷರ ಮಹಿಮೆ" ಎಂಬ ಗ್ರಂಥವನ್ನು ಬರೆದಿದ್ದಾನೆ. ಈತ ವೀರಶೈವ ಧರ್ಮದ ಮೊಟ್ಟ ಮೊದಲನೆಯ ಕವಿಯಾಗಿದ್ದಾನೆ.

ಕೇಶಿರಾಜ ಬಿಡುವಿನ ವೇಳೆ ಶಿವಾನುಭವ ಕಾರ್ಯವನ್ನು ಕೈಗೊಳ್ಳುತ್ತಿದ್ದನು. ಕೊಂಡಗುಳಿ ಕೇಶಿರಾಜ ಸತ್ಯವಂತನೂ ಸದ್ಭಕ್ತನೂ, ಕವಿಯೂ ಹಾಗೂ ಶಿವಶರಣನು ಆಗಿದ್ದನು. ವೀರುಪಾಕ್ಷ ದೇವರು ಈತನ ಗುರುಗಳಾಗಿದ್ದರು. ಸೋಮನಾಥ ಈತನ ಆರಾಧ್ಯ ದೈವನಾಗಿದ್ದ. ಇಂದಿನ ಬಸವಕಲ್ಯಾಣದ ಸಮೀಪ ತ್ರಿಪುರಾಂತಕ ಹಳ್ಳಿಯಲ್ಲಿ ತ್ರಿಪುರಾಂತಕೇಶ್ವರ ದೇವಾಲಯದಲ್ಲಿ ಕೇಶಿರಾಜನ ಸ್ಮರಣಾರ್ಥವಾಗಿ ಶಿವಭಜನೆ, ಕೀರ್ತನೆ, ಮೆರವಣಿಗೆಗಳು ಇಂದಿಗೂ ನಡೆಯುತ್ತವೆ. ಕೇಶಿರಾಜ ಶಿವನನ್ನು ಧ್ಯಾನಿಸುತ್ತಾ, ವಚನಗಳನ್ನು ರಚಿಸಿರುವನು. ಭಕ್ತಿಯೇ ಪ್ರಧಾನವಾಗಿತ್ತು. ಇವುಗಳಲ್ಲಿ ಮಂತ್ರ ಮಹತ್ವದ ಕಂದ, ಲಿಂಗ ಸೂತ್ರದ ಕಂದ, ಶೀಲ ಮಹತ್ವದ ಕಂದ, ನವರತ್ನ ಮಾಲಾ ಮುಂತಾದ ಕೃತಿಗಳನ್ನು ರಚಿಸಿದ್ದಾನೆ. ಕೇಶಿರಾಜನ ಶಿವಭಕ್ತಿಯನ್ನು ಅನೇಕರು ಕೊಂಡಾಡಿದ್ದಾರೆ. "ಶಿವ ಮಂತ್ರ ಮಹಿಮೆ" ವೀರಶೈವ ಕಾವ್ಯಗಳಲ್ಲಿ ಮೊದಲನೆಯ ಕೃತಿ ಎಂದು ಹೇಳಬಹುದು. ಕೇಶೀರಾಜ ಕೊಂಡಗುಳಿಗೆ ಬಂದು ಮುಂದೆ ಸೋಮನಾಥನ ಸಾನಿಧ್ಯದಲ್ಲಿ ಕಾಲವಾದನು.

ನಿವೃತ್ತನಾದ ಮೇಲೆ ಆರಾಧ್ಯ ದೈವನಾದ ಸೋಮನಾಥನ ನೆಲೆವೀಡಾದ ಕೊಂಡಗುಳಿಗೆ ಬಂದು ನೆಲೆಸಿದ. ಈತನ ಜನ್ಮಸ್ಥಳವು ಕೊಂಡಗುಳಿ ಗ್ರಾಮವೇ ಆಗಿತ್ತು. ಇಲ್ಲೇ ಶಿವನನ್ನು ಧ್ಯಾನಿಸುತ್ತಾ ಕಾಲ ಕಳೆದನು. ಡಾ.ಹಳಕಟ್ಟಿ ಅವರ ಪ್ರಕಾರ ಈತ ಒಬ್ಬ ಚಾರಿತ್ರಿಕ ವ್ಯಕ್ತಿ ಎಂದು ಅಭಿಪ್ರಾಯ ಪಟ್ಟಿದ್ದಾರೆ.

ಕೇಶಿರಾಜ ಕವಿಯಾಗಿ, ದಂಡನಾಯಕನಾಗಿ, ಶಿವಶರಣನಾಗಿ, ಕರ್ನಾಟಕದ ರಾಜಕೀಯ, ಧಾರ್ಮಿಕ ಹಾಗೂ ಸಾಹಿತ್ಯದಲ್ಲಿ ತನ್ನದೇ ಆದ ಛಾಪನ್ನು ಮೂಡಿಸಿದ್ದಾನೆ. ಸಗರನಾಡಿನ ಶಾಸನೋಕ್ತ ಶಿವಶರಣರಲ್ಲಿ ಪ್ರಮುಖ ಶರಣನಾಗಿದ್ದಾನೆ. ಬಸವಪೂರ್ವ ಕಾಲದಲ್ಲಿನ ಶೈವ-ವೀರಶೈವ ಸಾಹಿತ್ಯ, ಧರ್ಮ, ಸಂಸ್ಕೃತಿಯ ಮೇಲೆ ಬೆಳಕನ್ನು ಬೀರಿದ ಮಹಾಶರಣನಾಗಿದ್ದಾನೆ.

### ಸಗರದ ಬ್ರಹ್ಮಯ್ಯ – ಕ್ರಿ.ಶ.೧೧೬೦ :

ಹನ್ನೆರಡನೇ ಶತಮಾನದ ಕಲ್ಯಾಣದ ಶಿವಶರಣರ ಸಮಕಾಲಿನಾಗಿದ್ದ ಬ್ರಹ್ಮಯ್ಯ. ಶಹಾಪುರ ತಾಲೂಕಿನ ಸಗರ ಗ್ರಾಮದವನು. ಈತನ ಹೆಂಡತಿ ಶಿವದೇವಿ. ಶಿವಧರ್ಮದಲ್ಲಿ ನಂಬಿಕೆ ಇಟ್ಟಿದ್ದನು. ಸಗರನಾಡಿನಲ್ಲಿ ವಿವಿಧ ಧರ್ಮದವರು ವಾಸವಾಗಿದ್ದರು. ಇವರಲ್ಲಿರುವ ಧರ್ಮದ ಭಿನ್ನಾಭಿಪ್ರಾಯಗಳನ್ನು ಬ್ರಹ್ಮಯ್ಯ ಬಗೆ ಹರಿಸಿದನು. ಇದಕ್ಕೆ ಒಂದು ಉದಾಹರಣೆ ವಿವರಿಸಬಹುದು, ಜೈನ ಹಾಗೂ ವೀರಶೈವರಲ್ಲಿ ಆಗಾಗ ಧಾರ್ಮಿಕ ಸಂಘರ್ಷಗಳು

ನಡೆಯುತ್ತಲೇ ಇದ್ದವು. ಜೈನರೆಲ್ಲ ಒಂದು ಗೂಡಿ, ಒಂದು ಸಲ ಬ್ರಹ್ಮಯ್ಯನ ಬಳಿ ಬಂದು "ಶಿವನೇ ಸರ್ವಶ್ರೇಷ್ಠ ಎನ್ನಲು ಪ್ರಮಾಣವೇನು"? ಎಂದು ಕೇಳುತ್ತಾರೆ. ಆಗ ಬ್ರಹ್ಮಯ್ಯ ಕಾದ ಎಣ್ಣೆಯಲ್ಲಿ ತನ್ನ ಕೈಯನ್ನು ಎದ್ದಿ ತೋರಿಸುತ್ತಾನೆ. ಇದರಿಂದ ಜೈನರು ನಿಜವಾದ ಸತ್ಯವನ್ನು ಅರಿತು ಹಿಂತಿರುಗಿದರು. ಅಂದರೆ ಸಗರದ ಬ್ರಹ್ಮಯ್ಯನ ಮೈ-ಮನವೆಲ್ಲ ಶಿವಮಯದಿಂದ ಕೂಡಿತ್ತು. ಇಂತಹ ಒಬ್ಬ ದಿವ್ಯ ಶಿವಶರಣನಾಗಿದ್ದನು. "ಸಗರದ ಬೊಮ್ಮನೊಡೆಯ ತನುಮನ ಸಂಗಮೇಶ್ವರಾ" ಎಂಬ ಅಂಕಿತನಾಮದಿಂದ ಒಟ್ಟು ೬೬ ವಚನಗಳು ರಚಿಸಿದ್ದಾನೆ.

ಹೀಗೆ ಬ್ರಹ್ಮಯ್ಯ ತನ್ನ ಕೊನೆ ದಿನಗಳನ್ನು ಸಗರದಲ್ಲೇ ಕಳೆದನು. ಬ್ರಹ್ಮಯ್ಯ ತನ್ನ ತಲೆನೋವಿನಿಂದ ನರಳುತ್ತಿರುವಾಗ ಆತನ ಹೆಂಡತಿ ಶಿವದೇವಿ "ಪ್ರಸಾದವೇ ತನಗೆ ವೈದ್ಯ, ಪಂಚಾಕ್ಷರಿಯೇ ಪ್ರಾಣ" ಎಂದು ಹೇಳಿದಾಗ, ಬ್ರಹ್ಮಯ್ಯ ಇದನ್ನು ಅರಿತು ಪಂಚಾಕ್ಷರಿ ಮಂತ್ರ ಜಪಿಸಿದನು. ಇದರಿಂದ ಈತನ ತಲೆ ನೋವು ಕಡಿಮೆಯಾಯಿತು. ಹೀಗೆ ಪ್ರಾಣಕ್ಕಿಂತ ಹೆಚ್ಚಾಗಿ ಧರ್ಮವೇ ತನ್ನ ಜೀವ ಎಂದು ಜೀವಿಸಿದ.

## ರೇವಣಸಿದ್ಧ :

ಕನ್ನಡ ಸಾಹಿತ್ಯ ಶಾಸನ ಮತ್ತು ಐತಿಹ್ಯಗಳಲ್ಲಿ ಉಲ್ಲೇಖಗೊಂಡ ಅನೇಕ ಸಿದ್ಧರೇವಣರು ಕಂಡುಬರುತ್ತಾರೆ. ಸಿದ್ಧರಾಮ ಶಿವಯೋಗಿಯ ಜನನದ ಬಗ್ಗೆ ಭವಿಷ್ಯ ನುಡಿದ ರೇವಣ, ವೀರಶೈವ ಪಂಚಾಚಾರ್ಯರಲ್ಲಿ ಬರುವ ರೇಣುಕಾಚಾರ್ಯ. ಹೀಗೆ ಅನೇಕ ರೇವಣ, ರೇವಣಸಿದ್ಧರ ಉಲ್ಲೇಖ ಕಂಡುಬರುತ್ತದಲ್ಲದೆ, ಇವರಿಬ್ಬರೂ ಭಿನ್ನರೋ, ಅಭಿನ್ನರೋ ಎಂಬುದೇ ಇನ್ನು ಸ್ಪಷ್ಟವಾಗಿ ತಿಳಿದುಬಂದಿಲ್ಲ. ಸಗರನಾಡಿನ ಶಿರವಾಳ ಶಾಸನದಲ್ಲಿ ರೇವಣಸಿದ್ಧನ ಉಲ್ಲೇಖ ಈ ರೀತಿಯಾಗಿ ತಿಳಿದುಬರುತ್ತದೆ.

"ಶ್ರೀ ಮದಣಿಮಾದ್ಯಷ್ಟಗುಣಸಂಪಂನರುಂ ತತ್ವಜ್ಞಾನಪ್ರಸನ್ನರುಂ
ಷಡಂಗಯೋಗಸಂಗದರುಂ ಸಸಾರಭ್ಯಸಂಗ ನಿಸಂಗರುಮಪ್ಪ ಶಿವಯೋಗಿ
ಶಾನ್ತಿಮಯ್ಯದೇವಂಗಳ ಪುತ್ರ ರೇವಣದೇವಯ್ಯಂಗಳ
ಪ್ರಸಿದ್ಧತಿಕೆಯೆಂತೆನೆ ॥ ಒಬ್ಬಳ ತಂಡುಳದಿಂದಮ್ದುರ್ಬ್ಬೀಶನ
ರಾಯಕಟಕಮಂ ತಣಿಪಿದನಾ ಸರ್ಬ್ಬಜ್ಞಮೂರ್ತ್ತಿ ಜಗದೊಳಗೊರ್ಬ್ಬನೆ

ಶಿವಸಿಧ ಚಕ್ರಿ ರೇವಣದೇವಂ ॥ ತೊರೆ ತುಂಬಿ ಬಂದಡರೆ ತಾ
ಹರಗೋಲಂ ತನ್ನಿವೆಂನದಾಜ್ಞಾಬಲದಿಂ ತೊರೆಯಂ ದಾಂಟುವನಿಂತೀ
ಕುರುಪಿನ ತತುಕಾರನೀ ರೇವಣದೇವಂ ॥ ಅಂದೊಂಮ್ಮೆ ಸಿದ್ಧನೆಂದೊಡೆ
ನಿಂದಿಸಿದರು ಮನುಜರೆಲ್ಲ ಧರೆ ಭೂರ್ಭುಗಿಲೆನೆ ಬೆಂದುದು
ಸತ್ವರಜಂ ತಮವಂದಿನ ಸಿದ್ಧಂ ಪ್ರಸಿದ್ಧ ರೇವಣದೇವಂ ॥
ಮುನ್ನೊಮ್ಮೆ ಸಿದ್ಧನಾಗಿಯುವನ್ನದ ತವನಿಧಿಯ ತೋರ
ಲೋಕದೊಳಂ ಮತ್ತಿನ್ನೊಮ್ಮೆ ನೋರ್ಪೆನೆಂದಂ ತಂನಂ
ತಾನರಪ್ಪ ನೆಗಳ್ದ ರೇವಣದೇವಂ ॥ ತಾರದ ಮಂದ್ರದ ಮಧುರದ
ಸಾರಾಯದ ಸಪ್ತಸರದಿಂದ ನರೇಶ್ವರನಂ ಭೋರೆನೆ
ಕೇಳಿಸುತಿಪ್ಪ ಧಾರಿಣಿ ತಳದೊಳಗೆ ನೆಗಳ್ದ ರೇವಣದೇವ ॥
ನ್ರಿತ್ಯಕ್ಕೆ ನಿಂದಡೆವೆ ಬಲದತ್ಯದ್ಭುತ ಮರುಳತಂಡ ರೌದ್ರಮಿದೆನಲುಂ
ಪ್ರತ್ಯಕ್ಷ ಲಿಂಗ ಬೆಮರಲು ಸತ್ಯದಿಂದತ್ಯಂತ ಸಿದ್ಧರೇವಣದೇವ ॥
ಅನ್ತಾ ಭೂಲೋಕ ಸಿದ್ಧಪ್ರಸಿದ್ಧರಪ್ಪ ರೇವಣದೇವಯ್ಯಂಗಳ
ಪಾದಪ್ರಕ್ಷಾಳನಂ ಮಾಡಿ ॥"

ಎಂಬುದು ಕ್ರಿ.ಶ.೧೧೭೪ರ ಶಿರವಾಳ ಶಾಸನದಿಂದ ತಿಳಿದುಬರುತ್ತದೆ.ರೇವಣಸಿದ್ದನು ಪವಾಡಗಳನ್ನು ಮಾಡಿ ತೋರಿಸಿದ್ದು ಈ ಶಾಸನದಿಂದ ತಿಳಿದುಬರುತ್ತದೆ. ಈ ಶಾಸನದಲ್ಲಿ ಇಬ್ಬರು ರೇವಣಸಿದ್ದರು ಇದ್ದರೆಂಬುದು ಉಲ್ಲೇಖಗೊಂಡಿದೆ. "ಮುನ್ನೊಮ್ಮೆ ಸಿದ್ಧನಾಗಿಯುವನ್ನದ ತವನಿಧಿಯ ತೋರ" ಎಂಬ ಉಲ್ಲೇಖದಿಂದ ರೇವಣನಿಗಿಂತ ಹಿಂದೆ ಸಿದ್ಧರೇವಣ ಎಂಬುವವನು ಇದ್ದನೆಂಬುದು ಊಹಿಸಬಹುದಾಗಿದೆ. ಶಿರವಾಳ ಶಾಸನದಲ್ಲಿ ರೇವಣಸಿದ್ದನು ಪವಾಡಗಳನ್ನು ಲೀಲಾಜಾಲವಾಗಿ ಮಾಡಿ ತೋರಿಸಿದ್ದು ಶಾಸನ ಬಾಯ್ತುಂಬ ಹೊಗಳುತ್ತದೆ. ಆರು ಪವಾಡಗಳಲ್ಲಿ ಮೂರು ಪವಾಡಗಳು ರೇವಣನಿಗೆ ಸಂಬಂಧಿಸಿದ್ದಾಗಿವೆ. ತವನಿಧಿಯ ಪವಾಡ, ಒರ್ಬುಳ ತಂಡುಳ ಪವಾಡ ಮತ್ತು ಧರೆ ಬೆಂದ ಪವಾಡಗಳು ಈತನಿಗೆ ಹೋಲುತ್ತವೆ. ಇನ್ನುಳಿದ ಮೂರು ಪವಾಡಗಳಾದ ತೊರೆ ದಾಟಿದ ಪವಾಡ, ಗೀತ ಪವಾಡ ಮತ್ತು ನೃತ್ಯ ಪವಾಡಗಳು ಸಿದ್ಧರೇವಣನಿಗೆ ಸಂಬಂಧಿಸಿವೆ. ಆದರೆ ಸಿದ್ಧರೇವಣ

ಈತನಿಗಿಂತಲು ಹಿಂದಿನವನೆಂಬುದು ಶಿರವಾಳ ಶಾಸನದಿಂದ ತಿಳಿದು ಬರುತ್ತದೆ. ರೇವಣ ಹಾಗೂ ಈತನ ತಂದೆ ಶಾಂತಿಮಯ್ಯರ ವ್ಯಕ್ತಿತ್ವ ಈ ಶಾಸನ ಎತ್ತಿ ತೋರಿಸುತ್ತದೆ.

ಸಿದ್ಧರೇವಣನನ್ನು ಉಲ್ಲೇಖಿಸುವ ಇನ್ನೊಂದು ಶಾಸನ ಈ ನಾಡಿನ ಕಕ್ಕೇರಿಯಲ್ಲಿ ದೊರೆತಿದೆ. "ಹಗರಟಗೆಯ ಶ್ರೀ ಸ್ವಯಂ ಭೂ ಉಗ್ರಭೀಮೇಶ್ವರ ದೇವರ ಮುದನೀರ ಕುಮಾರೇಶ್ವರ ದೇವರ ಕಕ್ಕೇಶ್ವರ ದೇವರ ಮಹಾಸ್ಥಾನಂಗಳಾಚಾರ್ಯರಾದ ಸಿದ್ಧರೇವಣದೇವನ ಶಿಷ್ಯ ಬ್ರಹ್ಮರಾಶಿಪಂಡಿತರ ಕಾಲಂ ಕರ್ಚಿ"[೪೫] ಎಂಬ ಉಲ್ಲೇಖ ಕಕ್ಕೇರಿ ಶಾಸನದಿಂದ ತಿಳಿದುಬರುತ್ತದೆ. ಒಟ್ಟಿನಲ್ಲಿ ಬಸವಾದಿ ಶಿವಶರಣರ ಸಮಕಾಲೀನರಾಗಿ, ಪವಾಡ ಪುರುಷರಾಗಿದ್ದರು ಎಂಬುದು ಶಿರವಾಳ ಶಾಸನದಿಂದ ತಿಳಿದುಬರುತ್ತದೆ.

ಹೀಗೆ ಸಗರನಾಡಿನ ಧರ್ಮದ ನಾಡಿನಲ್ಲಿ ಸಗರದ ಬ್ರಹ್ಮಯ್ಯ, ಉಂಡುಪವಾಸಿ ಬ್ರಹ್ಮಚಾರಿವಾ, ಕೋಳಕೂರ ಸೊಪ್ಪೆಯ ಸಿದ್ದಬಸವ, ಜೇವರ್ಗಿಯ ಷಣ್ಮುಖ ಶಿವಯೋಗಿ, ಸೊನ್ನದ ಸಿದ್ಧಲಿಂಗಯೋಗಿ, ರಾಮಪುರದ ಬೊಕ್ಕಪ್ಪ, ಕಡಕೋಳ ಮಡಿವಾಳಪ್ಪ, ಅಂದೇಲಿಯ ಕರುಣೇಶ್ವರರು, ಹೀಗೆ ವಿವಿಧ ಶಿವಶರಣರು ನಡೆದಾಡಿದ ನಾಡು ಸಗರನಾಡು.

## ೭.೧೨ ಸಾಹಿತ್ಯ :

ಸಗರ ನಾಡಿನ ರಾಜಕೀಯ ಸಾಮಾಜಿಕ, ಆರ್ಥಿಕ ಹಾಗೂ ಧಾರ್ಮಿಕ ಅಂಶಗಳಿಗೆ ಶಾಸನಗಳು ಎಷ್ಟು ಮಹತ್ವ ಕೊಟ್ಟಿವೆಯೋ ಅಷ್ಟೇ, ಮಹತ್ವ ಸಾಹಿತ್ಯ ಕ್ಷೇತ್ರದಲ್ಲಿಯೂ ಕಂಡುಬರುತ್ತದೆ. ಶಾಸನಗಳು ಸತ್ಯದ ಘಟನೆಗಳನ್ನು ತಿಳಿಸುತ್ತವೆ. ಇವುಗಳಲ್ಲಿ ಹೆಚ್ಚಾಗಿ ಕಂಡುಬರುವುದು ದಾನ ಶಾಸನಗಳು. ಸಗರನಾಡಿನಲ್ಲಿ ಮುನ್ನೂರಕ್ಕೂ ಹೆಚ್ಚು ಶಾಸನಗಳು ಲಭ್ಯವಾಗಿವೆ. ಅದರಲ್ಲಿ ಇನ್ನೂರಕ್ಕೂ ಹೆಚ್ಚು ಶಾಸನಗಳು ದಾನಕ್ಕೆ ಸಂಬಂಧ ಪಟ್ಟಿವೆ. ಹಾಗಾಗಿ ಶಾಸನಗಳಲ್ಲಿ ಹೆಚ್ಚು ವೈವಿದ್ಯತೆ ಇರುವುದಿಲ್ಲ. ಈ ಸೀಮಿತಗಳ ಮಧ್ಯದಲ್ಲಿಯೂ ಕೆಲ ಶಾಸನ ಕವಿಗಳು ತಮ್ಮ ಪ್ರತಿಭೆ ಪಾಂಡಿತ್ಯ ಮೆರೆದಿದ್ದಾರೆ. ಪ್ರಾರಂಭದಲ್ಲಿ ಕವಿಗಳು ರಾಜನ ಆಡಳಿತ, ದಾನ ಕೊಟ್ಟವರ ಹೆಸರು, ದಾನದ ವಿವರ ಮಾತ್ರ ಒಳಗೊಂಡಿರುತ್ತಿತ್ತು. ಆದರೆ ಕ್ರಮೇಣ ರಾಜರ ಆಡಳಿತ, ದಾನದ ವಿವರ ಹಾಗೂ ಪ್ರದೇಶಗಳ ವರ್ಣನೆ ಹೆಚ್ಚುತ್ತಾ ಹೋಯಿತು. ಇದರಿಂದ ಶಾಸನಗಳು ಗದ್ಯ, ಪದ್ಯ, ಚಂಪೂ, ಕಾವ್ಯ ಶೈಲಿಯನ್ನು ಅಳವಡಿಸಿಕೊಂಡವು. ಕೆಲ ಶಾಸನಗಳು ಸಂಸ್ಕೃತ, ಪಾರ್ಸಿ, ಹಳಗನ್ನಡ ಭಾಷಾ ಶೈಲಿಯಲ್ಲಿ ಕಂಡು ಬಂದರೆ, ಇನ್ನು ಕೆಲ ಶಾಸನಗಳು ನಡುಗನ್ನಡ ಭಾಷಾ ಶೈಲಿಯಲ್ಲಿವೆ.

ಸಾಹಿತ್ಯದ ದೃಷ್ಟಿಯಲ್ಲಿ ಶಾಸನಗಳನ್ನು ಗಮನಿಸಿ ಹೇಳುವುದಾದರೆ ದೇವಾಲಯಗಳ ವರ್ಣನೆ, ವ್ಯಕ್ತಿ ವರ್ಣನೆ, ಹಾಗೂ ದಾನದ ಬಗ್ಗೆ ತಿಳಿದು ಬರುತ್ತದೆ. ಶಾಸನಗಳ ಪ್ರಾರಂಭದಲ್ಲಿ ಇಷ್ಟ ದೇವತಾಸ್ತುತಿ, ಕೊನೆ ಭಾಗದಲ್ಲಿ ಫಲಶ್ರುತಿ ವಾಕ್ಯಗಳು ಸಂಸ್ಕೃತದಲ್ಲಿರುತ್ತವೆ. ಕೆಲ ಶಾಸನಗಳಲ್ಲಿ ವಿರಳ ಎನ್ನುವಂತೆ ಕನ್ನಡದಲ್ಲಿಯೂ ಇವೆ. ರಾಜರ ಬಿರುದು, ದಾನ-ದತ್ತಿ ಇವು ಗದ್ಯದಲ್ಲಿರುತ್ತವೆ. ದೇಶದ ವರ್ಣನೆ, ನಾಡಿನ ವರ್ಣನೆ, ರಾಜ ಹಾಗೂ ಇತರ ಅಧಿಕಾರಿಗಳ ಶೌರ್ಯ, ಗುಣಗಾನ, ದಾನ ಕೊಡುವವನ ಔದಾರ್ಯ, ಸ್ವೀಕರಿಸುವವನ ಅರ್ಹತೆ ಇವೆಲ್ಲ ಪದ್ಯದಲ್ಲಿರುತ್ತವೆ. ಅಲ್ಲಲ್ಲಿ ಶಾಸನಗಳಲ್ಲಿ ಕೆಲ ಬಾರಿ ಕವಿ ಕಲ್ಪನೆ ಕಂಡುಬರುತ್ತದೆ. ಶಾಸನ ಕವಿಗಳಿಗೆ ಹೆಚ್ಚು ಸ್ವಾತಂತ್ರ್ಯವಿರುವುದು ಈ ಭಾಗದಲ್ಲಿಯೇ, ಹೀಗಾಗಿ ಶಾಸನಗಳ ವರ್ಣನೆ ಮಾಡುವಲ್ಲಿ ಕೆಲ ಬಾರಿ ವಾಸ್ತವಾಂಶಗಳನ್ನು ತಿಳಿಸಿಕೊಡದೆ, ಅತಿಶಯೋಕ್ತಿ ಮತ್ತು ಉತ್ಪ್ರೇಕ್ಷೆಗೆ ಎಡೆಮಾಡಿ ಕೊಡುತ್ತವೆ.

ಸಗರನಾಡಿನ ಹೆಮ್ಮಡಗಿ, ಏವೂರು, ಮುದನೂರು ಶಾಸನಗಳು ಸುಧೀರ್ಘವಾದ ದೇವಾಲಯದ ವರ್ಣನೆ ಹಾಗೂ ವ್ಯಕ್ತಿಗಳ ವರ್ಣನೆಗಳಿಂದ ಕೂಡಿವೆ. ಈ ನಾಡಿನ ಏವೂರ ಶಾಸನದಲ್ಲಿ ಕೊಪ್ಪದೇವನ ವರ್ಣನೆ ಈ ರೀತಿ ಇದೆ.

> "ಆತಂ ಪುಟ್ಟೆ ಗುಣೋರ್ವ್ವೀ
> ಜಾತಂ ನೆರೆ ಪೂತು ಕಾಯ್ತು ಪಣ್ತು ಸಮಸ್ತ
> ಪ್ರೀತಿಯನೊದವಿಸಿತೆನೆ ವಿ
> ಖ್ಯಾತಿಯನೆಯ್ದಿದನಶೇಷ ವಿಶ್ವಂಭರೆಯೊಳ್ ॥
> ಆದಲ್ಲದೆಯುಂ ವೃ ॥ ನೆಲೆ ಸೌಜನ್ಯ ಗುಣಕ್ಕು ದಾರ
> ಚರಿತಕ್ಕಾವಾಸ ಸದ್ಮಂ ಸಮುಜ್ವಳಕೀರ್ತ್ತಿ
> ಪ್ರಸರಕ್ಕಡರ್ಪ್ಪು ಕಣಿ ಶೌಚಾಚಾರತ್ನಕ್ಕೆ
> ನಿಶ್ಚಳ ವಾಗ್ವೃತ್ತಿಗೆ ಬಿತ್ತು ಮಾನ್ತನದ
> ಜನ್ಮ ಕ್ಷೇತ್ರನೆಂದಂದೆ ಕೇವಳಮೇ
> ವಾಗ್ಗಲನಾಮುಖೋಜ್ವಳಮಣಿ ಶ್ರೀದರ್ಪ್ಪಣಂ
> ಕೋಪ್ಪಣಂ ॥"

ಎಂಬ ಉಲ್ಲೇಖ ಏವೂರ ಶಾಸನದಿಂದ ತಿಳಿದುಬರುತ್ತದೆ. ಕಲ್ಯಾಣ ಚಾಲುಕ್ಯ ಆರನೇ ವಿಕ್ರಮಾದಿತ್ಯನ ವರ್ಣನೆಯು ಶಾಸನದಲ್ಲಿ ಈ ರೀತಿ ವರ್ಣನೆಗೊಂಡಿದೆ.

"ಎನಿಸಿರ್ದ್ಧಾಹವಮಲ್ಲದೇವನ ಮಗಂ
ಸೋಮೇಶ್ವರೋರ್ಬ್ಬೀಶ್ವರಂ ಗನುಜಂ
ವಿಕ್ರಮಚಕ್ರಿ ಚಕ್ರಧರರೂಪಂ ವಿಕ್ರಮಾದಿತ್ಯ
ನನ್ಯ ನರೇಂದ್ರರ್ಕ್ಕಳ ತೇಜಮಿಲ್ಲಿರ್ಪುದುವಿ
ನ್ನೇಕೆಂದು ತನ್ನಾಣೆ ಗೋಸಣೆಯಾಗಲ್ಸ ಕನಾಮವಂ
ಕಳೆದು ಚಾಳುಕ್ಯಾಂಕಮಮ್ಮಾಡಿದಂ ॥"

ಎಂಬ ಉಲ್ಲೇಖ ಯಡ್ರಾಮಿ ಶಾಸನದಲ್ಲಿ ಕಂಡುಬರುತ್ತದೆ. ಕಲ್ಯಾಣ ಚಾಲುಕ್ಯ ಆರನೇ ವಿಕ್ರಮಾದಿತ್ಯದನ ದಂಡನಾಯಕ ರವಿದೇವನ ಸದ್ಗುಣಗಳನ್ನು ಚಂಪೂಕಾವ್ಯದಲ್ಲಿ ಈ ರೀತಿ ವರ್ಣನೆಗೊಂಡಿದೆ.

"ಕವಿತಾ ಕಲ್ಪಲತಾರ್ಪ್ಪಣಕ್ಕೆ ಸುರಭೂಜಂ ಶಬ್ದವಿದ್ಯಾಪಯೋ
ಬ್ಧಿ ವಿಳಾಸಕ್ಕ ಮೃತಾಮೃತರ್ಕ್ಕ ವಿಮಳವ್ಯೋಮ ಪ್ರಕಾಶಕ್ಕೆ ಭಾ
ನು ವಿಶುದ್ಧಾಗಮ ತತ್ವಕೇಳಿ ಸದನೋದ್ಯೋತಕ್ಕೆ ರತ್ನಮುದೀ
ಪವೆನಿಪ್ಪಂ ಕುಳದೀಪಕಂ ರವಿಚಮೂಪಂ ಬನ್ದುಕರುದ್ರುಮಂ ॥"

ಎಂಬ ಉಲ್ಲೇಖ ಏವೂರು ಶಾಸನದಲ್ಲಿ ಕಂಡುಬರುತ್ತದೆ. ಪುರುಷರ ವರ್ಣನೆಯಂತೆ ಸ್ತ್ರೀವರ್ಣನೆಗಳು ಶಾಸನದಲ್ಲಿ ಮಹತ್ವ ಪಡೆದಿವೆ. ಕೊಪ್ಪದೇವನ ಹೆಂಡತಿ ಪಂಪಕಬ್ಬೆಯ ವರ್ಣನೆ ಶಾಸನದಲ್ಲಿ ಈ ರೀತಿ ವರ್ಣನೆಗೊಂಡಿದೆ.

"ಆತನ ಸತಿ ಸದ್ವಂಶೋ
ಪೇತೆ ಕಳ್ವಾನೀತೆ ವಿಮಳಚಾರಿತ್ರ ಗುಣೋ
ಪೇತೆ ಪತಿಭಕ್ತಿಯಿಂದಂ
ಸೀತೆಯೆನಲ್ಪಂಪಕಬ್ಬೆ ಪೆಂಪಂ ತಳೆದೊಳ್ ॥"

ಎಂಬ ಉಲ್ಲೇಖ ಏವೂರು ಶಾಸನದಲ್ಲಿ ಕಂಡುಬರುತ್ತದೆ. ಇದೇ ಏವೂರ ಶಾಸನದಲ್ಲಿ ರವಿದೇವನ ಹೆಂಡತಿ ದೇವಲಬ್ಬೆಯ ವರ್ಣನೆ ಶಾಸನದಲ್ಲಿ ಈ ರೀತಿ ವರ್ಣನೆಗೊಂಡಿದೆ.

"ಅಮರೇಂದ್ರಂಗೆ ಪುಲೋಮನನ್ದನೆ ಸುರಜ್ಯೇಷ್ಠಂಗೆ ವಾಗ್ಲಕ್ಷ್ಮಿ
ಸಿತಮಯೂಖಾಭರಣಂಗೆ ಗೌರಿ ವನಜಾಕ್ಷಂಗಂಬುಜಾವಾಸೆಯಂ
ತು ಮನೋವಲ್ಲಭೆಯನ್ತೆ ತದ್ವಿಭುಗೆ ಸಚ್ಚಾರಿತ್ರೆ ತಾಂ ದೇವಲ
ಬ್ಬೆ ಮನೋವಲ್ಲ ಭೆಯಾದೊಳೆಂದೊಡದನಿನ್ನೇವಣ್ಣಿಪೊಂ ಬಣ್ಣಿಪೊಂ ॥"

ಎಂಬ ಉಲ್ಲೇಖ ಏವೂರು ಶಾಸನದಲ್ಲಿ ಕಂಡುಬರುತ್ತದೆ. ಈ ಎಲ್ಲ ಹಳೆಗನ್ನಡ ಪದ್ಯಗಳು ಗದ್ಯ ಹಾಗೂ ಚಂಪುಕಾವ್ಯದಲ್ಲಿ ಕಂಡುಬರುತ್ತವೆ. ಕೆಲ ಶ್ರೇಷ್ಠ ಕವಿಗಳ ಕೆಲವು ಪದ್ಯಗಳು ಶಾಸನದಲ್ಲಿ ಬಳಕೆಯಾಗಿದ್ದು ಕಂಡುಬರುತ್ತದೆ.

**ಶಾಸನ ಕವಿಗಳು :**

ಸಾಮಾನ್ಯವಾಗಿ ಹೇಳುವುದಾದರೆ ಶಾಸನ ಬರೆದವರು ಎಲ್ಲಿಯೂ ತಮ್ಮ ಹೆಸರನ್ನು ಬರೆದಿಲ್ಲ. ಕೇವಲ ಬೆರಳೆಣಿಕೆಯಷ್ಟು ಶಾಸನದಲ್ಲಿ ಮಾತ್ರ ಕವಿಯ ಉಲ್ಲೇಖಕಂಡುಬರುತ್ತದೆ. ಉಳಿದ ಶಾಸನಗಳಲ್ಲಿ ಬರೆದಂ, ಬರಪಂ ಎಂಬ ಶಬ್ದಗಳನ್ನು ಬಳಸಿರುವುದರಿಂದ ಅವರು ಶಾಸನ ಕವಿಗಳೆಂದು ಗುರುತಿಸುವುದು ಕಷ್ಟವಾಗುತ್ತದೆ. ಕನ್ನಡದ ಕವಿಗಳು ಉಳಿದ ಭಾಷೆಯ ಕವಿಗಳಂತೆ ತಮ್ಮ ವೈಯಕ್ತಿಕ ಜೀವನದ ಬಗ್ಗೆ ಹೇಳಿಕೊಂಡಿದ್ದು ತೀರ ವಿರಳ.

ಸಗರನಾಡಿನ ಕೆಲ ಕವಿಗಳ ಉಲ್ಲೇಖ ಶಾಸನಗಳಲ್ಲಿ ಈ ರೀತಿ ಕಂಡುಬರುತ್ತದೆ. ಕೆಂಭಾವಿಯ ಶಾಸನದ ಕೊನೆಯ ಭಾಗದಲ್ಲಿ "ಶ್ರೀಮತ್ ಬರೆವರ ರುದ್ರಂಚಂಗದೇವಯ್ಯಂ ಬರೆದಂ" ಎಂದು ಕವಿ ಹೇಳಿಕೊಳ್ಳುತ್ತಾನೆ. ಹುಣಸಗಿ ಶಾಸನದ ಪ್ರಾರಂಭದಲ್ಲಿ "ಅತಿಚಪಳವೀರವೈರಿ ದಿಸಾಪಟ್ಟ ತನ್ದೆನುತ್ತ ವೈರಿಘರಟ್ಟ ಚತುರ ಕವೀಶ್ವರಲಲಾಟ ಪಟ್ಟಂ ಭಟ್ಟಂ" ಎಂದು ಕವಿಯ ಬಗ್ಗೆ ತಿಳಿಸುತ್ತದೆ. ಮುಂದಿನ ಸಾಲುಗಳನ್ನು ಗಮನಿಸಿದಾಗ, ಆದಿತ್ಯ ಭಟ್ಟ ಶಾಸನ ಕವಿ ಎಂದು ತಿಳಿದುಬರುತ್ತದೆ. ಏವೂರ ಶಾಸನದಲ್ಲಿ ರವಿದೇವ ತಾನೇ ಸ್ವತಃ ಕವಿಯಾಗಿದ್ದ ಎಂಬುದು ಶಾಸನ ಸಾಲುಗಳಿಂದ ತಿಳಿದುಬರುತ್ತದೆ. 'ತಾನೆ ನೆಟ್ಟನೆ ಬಲ್ಲಂ ಬರೆಯಲ್ಕನೇಕಲಿಪಿಯಂ' ಎಂಬ ಹೊಗಳಿಕೆಯ ಮಾತುಗಳು ಈ ಸಾಲಿನಿಂದ ತಿಳಿದುಬರುತ್ತದೆ. ಹಾವಿನಾಳ ಶಾಸನದ ಕೊನೆಯ ಭಾಗದಲ್ಲಿ "ಶ್ರೀಮತಿಯ ಮಲ್ಲಿಕಾರ್ಜುನ ವರದಾಸಿಯುಭಯಲಿಪಿ ಲಿಖಿತ ದಕ್ಷಪಾಳಕ ಪುರಾಗ್ರಹಾರ ಗಣಕಂ ಪಂಡಿತಮಲ್ಲಯ್ಯನ ಬರಪಂ" ಎಂದಿದೆ. ಈ ರೀತಿ ಸಗರನಾಡಿನ ಶಾಸನದಲ್ಲಿ ಸಾಹಿತ್ಯ ಒಳಗೊಂಡಿದೆ.

ಸಗರನಾಡಿನ ದೇವಾಲಯಗಳು ಬಹು ಪ್ರಮುಖವಾದವು. ಸರ್ವ ಧರ್ಮಗಳ ಸಮಾನತೆ ಇದ್ದದ್ದು ಈ ನಾಡಿನಲ್ಲಿ ಕಂಡು ಬರುತ್ತದೆ. ದೇವಾಲಯಗಳ ನಿರ್ಮಾಣದ ಜೊತೆಗೆ ದಾನ-ದತ್ತಿ ಕೊಟ್ಟಿದ್ದು ಕೂಡ ತಿಳಿದುಬರುತ್ತದೆ. ದೇವಾಲಯಗಳ ನಿರ್ಮಾಣ

ಮಾಡುವುದರ ಜೊತೆಗೆ ಧರ್ಮಕ್ಕೂ ಪ್ರೇರಣೆ ನೀಡಿದ್ದಾರೆ. ಕಲ್ಯಾಣ ಚಾಲುಕ್ಯ ಆರನೇ ವಿಕ್ರಮಾದಿತ್ಯನ ಮಹಾಮಂಡಳೇಶ್ವರ ಚಾವುಂಡರಾಯನ ಕನಸಿನಲ್ಲಿ ಶಂಬು(ಶಿವ) ಯತಿ ರೂಪದಲ್ಲಿ ಬಂದು ಕೆಂಬಾವಿಯ ದಾರಿಯಲ್ಲಿ ಬಾವಿಯನ್ನು ತೋಡಿಸಲು ತಿಳಿಸಿದ. ಹಾಗಾಗಿ ಚಾವುಂಡರಾಯ ಬಾವಿಯನ್ನು ತೋಡಿಸಿ ದೇವಾಲಯವನ್ನು ನಿರ್ಮಿಸಿದ್ದು ಕೆಂಬಾವಿ ಶಾಸನದಿಂದ ತಿಳಿದುಬರುತ್ತದೆ. ಅಂದಿನ ಜನರಲ್ಲಿ ಶ್ರದ್ಧೆ, ಭಕ್ತಿ, ನಂಬಿಕೆ, ಆಚರಣೆಗಳು ಹೆಚ್ಚಾಗಿ ಕಂಡುಬರುತ್ತವೆ. ಜನರ ಎಲ್ಲ ಸಮಸ್ಯೆಗಳ ನಿವಾರಣೆಯ ಚಿಕಿತ್ಸಾ ಕೇಂದ್ರಗಳೆಂಬಂತೆ, ಭಾವನಾತ್ಮಕ ಬೆಸುಗೆ ಜನರಲ್ಲಿ ಬೆಸೆದಿದ್ದವು. ಏವೂರಿನ ಸ್ವಯಂಭೂ ದೇವಾಲಯವು ಹಾವು ಕಚ್ಚಿದರೆ, ಚೇಳು ಕಡಿದರೆ, ಬೆಂಕಿ ಹತ್ತಿದರೆ, ತಕ್ಷಣವೇ ದೇವಾಲಯದ ಬಲಕ್ಕೆ ಸುತ್ತು ಹಾಕಿದರೆ ಕ್ಷಣಾರ್ಧದಲ್ಲಿ ಕಷ್ಟಗಳು ದೂರವಾಗುತ್ತಿದ್ದವಂತೆ. ಅನಾರೋಗ್ಯದಿಂದ ನರಳುವವರು ಸಹ ಈ ದೇವರ ಸ್ಮರಣೆ ಮಾಡಿದರೆ ಗುಣಮುಖರಾಗುತ್ತಿದ್ದರಂತೆ. ಇಂತಹ ನಂಬಿಕೆ, ಆಚರಣೆಗಳು ಅಂದಿನ ಜನರು ಮುಂದುವರೆಸಿಕೊಂಡು ಬಂದಿದ್ದು ಏವೂರು ಶಾಸನದಿಂದ ತಿಳಿದು ಬರುತ್ತದೆ. ಹಾಗಾಗಿ ಈ ನಾಡಿನ ಧರ್ಮ ಹಾಗೂ ದೇವಾಲಯಗಳು ಬಹು ಪ್ರಮುಖವಾಗಿವೆ. ಬೌದ್ಧ, ಜೈನ, ಶೈವ, ವೈಷ್ಣವ, ವೀರಶೈವ ಹೀಗೆ ವಿವಿಧ ಧರ್ಮಗಳ ಸ್ಮಮಿಲನದ ಜೊತೆಗೆ ಮುಸ್ಲಿಂ ಧರ್ಮದ ಪ್ರಭಾವ ಸ್ವಲ್ಪ ಮಟ್ಟಿಗೆ ಪ್ರಭಾವ ಬೀರಿದ್ದು ಈ ನಾಡಿನಲ್ಲಿ ಕಂಡುಬರುತ್ತದೆ.

ಗೋಗಿಯಲ್ಲಿ ದೊರೆತ ಉರ್ದು ಶಾಸನ ಸಂತ ಚಂದಾಹುಸೇನಿಯು ಆ ಹಿ.೮೫೮ರಲ್ಲಿ ನಿಧನನಾದ ಬಗ್ಗೆ ತಿಳಿಸುತ್ತದೆ. ಇನ್ನೊಂದು ಶಾಸನ ಷಾಹಬೀಬುಲ್ಲಾ ಅವರು ಧ್ಯಾನ ಮಾಡುತ್ತಿದ್ದ ಸ್ಥಳದಲ್ಲಿ ಹಜ್ರಾ (ಕೋಣೆ) ಕಟ್ಟಿಸಿದ ಬಗ್ಗೆ ತಿಳಿಸುತ್ತದೆ. ಹೀಗೆ ದರ್ಗಾದಲ್ಲಿರುವ ಯುಸೂಫ್ ಆದಿಲ್ ಶಾ ಇಸ್ಮಾಯಿಲ್ ಆದಿಲ್ ಶಾ ಹಾಗೂ ಇಬ್ರಾಹಿಂ ಆದಿಲ್ ಶಾ ಇವರ ಗೋರಿಗಳೇ ಸಾಕ್ಷಿ, ಪ್ರತಿವರ್ಷ ಗಂಧ, ದೀಪೋತ್ಸವ ಹನ್ನೆರೆಡು ದಿನಗಳವರೆಗೆ ನಡೆಯುತ್ತವೆ. ಜಾತ್ರೆಯಲ್ಲಿ ಹಿಂದೂ-ಮುಸ್ಲಿಂರು ಒಂದಾಗಿ ಪಾಲ್ಗೊಳುತ್ತಾರೆ. ಹೀಗೆ ಮುಸ್ಲಿಂ ಧರ್ಮವು ಈ ನಾಡಿನಲ್ಲಿ ಇತ್ತು ಎಂಬುದು ತಿಳಿದುಬರುತ್ತದೆ.

ಹಿಂದೂ ಮುಸ್ಲಿಂರು ಈ ನಾಡಿನಲ್ಲಿ ಸಹ ಬಾಳ್ವೆ ನಡೆಸುತ್ತಿದ್ದರು ಎಂಬುದು ಹಲವಾರು ಶಾಸನಗಳಿಂದ ತಿಳಿದುಬರುತ್ತದೆ ಶಾಸನಗಳು ಗತಕಾಲದ ವರ್ತ ಮಾನಕ್ಕೆ ಕನ್ನಡಿ ಹಿಡಿದಿದ್ದು, ಹಿಂದಿನ ಜನರ ಸೇವಾಮನೋಭಾವ, ಉದಾತ್ತ ಮೌಲ್ಯಗಳಿಗೆ ಸಾಕ್ಷಿಯಾಗಿವೆ.

## ಟಿಪ್ಪಣಿಗಳು

೧. ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ೨೧೨.

೨. Epigraphi Indica, Vol XII, P.No.268

೩. Epigraphi Indica, Vol XII, P.No.329

೪. Epigraphi Indica, Vol XII, P.No.330.

೫. Epigraphi Indica, Vol XII, P.No.331.

೬. ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ. ೩೮

೭. ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ. ೦೫.

೮. ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ. ೫೩

೯. ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ. ೧೨೦.

೧೦. ಅನುಶಾಸನ : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೨೦೦೨, ಪು.ಸಂ.೨೧.

೧೧. ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ. ೧೬೦.

೧೨. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೪೬೨.

೧೩. ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ. ೧೮೦.

೧೪. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೨೭೩.

೧೫. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೪೫೬.

೧೬. ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ. ೮೨.

೧೭. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೨೭೫.

೧೮. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೩೯೯

೧೯. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೨೮೫.

೨೦. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೨೭೮.

೨೧. ತರ್ದವಾಡಿ ನಾಡು ಒಂದು ಅಧ್ಯಯನ : ಕೊಪ್ಪಾ ಎಸ್.ಕೆ, ಪ್ರತಿಭಾ ಪ್ರಕಾಶನ, ಇಂಡಿ, ೧೯೯೦, ಪು.ಸಂ.೩೦೮.

೨೨. ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ. ೧೩೨.

೨೩. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೩೫೬.

೨೪. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೩೬೮.

೨೫. ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ. ೧೦೧.

೨೬. ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ. ೫೦.

೨೭. ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ. ೨೭.

೨೮. ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ. ೩೮.

೨೯. ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ. ೮೦.

೩೦. ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ. ೭೩.

೩೧. ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ. ೧೪೬.

೩೨. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೧೬೭.

೩೩. ಎಡದೊರೆ ನಾಡು : ಹಿರೇಮಠ ಚನ್ನಬಸವ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ, ೨೦೦೦, ಪು.ಸಂ.೨೫.

೩೪. ಸುರಪುರ ತಾಲೂಕಿನ ಶಾಸನಗಳು : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫, ಪು.ಸಂ. ೪೦.

೩೫. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೩೪೧.

೩೬. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೨೮೧.

೩೭. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೩೩೬.

೩೮. ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬, ಪು.ಸಂ.೩೩೧.

೩೯. ಸಗರನಾಡ ದರ್ಶನ ಃ ಸಂಶೋಧನಾತ್ಮಕ ಲೇಖನ ಕವನಗಳ ಸಂಕಲನ, ಮಹಾಕವಿ ಲಕ್ಷ್ಮೀಶ ವಾಚನ ಸಂಘ, ಸುರಪುರ, ೧೯೮೫, ಪು.ಸಂ.೧೨೨.

೪೦. ಸಗರನಾಡ ದರ್ಶನ : ಸಂಶೋಧನಾತ್ಮಕ ಲೇಖನ–ಕವನಗಳ ಸಂಕಲನ, ಮಹಾಕವಿ ಲಕ್ಷ್ಮೀಶ ವಾಚನ ಸಂಘ, ಸುರಪುರ, ೧೯೮೫, ಪು.ಸಂ.೫೬.

೪೧. ಸಗರನಾಡ ಸಂಪದ: ಮಾನುಸಗರ, ಪ. ಮಹಾಕವಿ ಲಕ್ಷ್ಮೀಶ ಪ್ರಕಾಶನ, ಕನ್ನಡ ಸಾಹಿತ್ಯ ಸಂಘ, ಸುರಪುರ, ೨೦೦೯, ಪು.ಸಂ.೧೦೭.

೪೨. ಶಾಸನಗಳಲ್ಲಿ ಶಿವಶರಣರು : ಕಲಬುರ್ಗಿ ಎಂ.ಎಂ.ಸಿರಿಗನ್ನಡ ಪ್ರಕಾಶನ, ಕನ್ನಡ ವಿಭಾಗ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೦, ಪು.ಸಂ.೩೪.

೪೩. ಸಗರನಾಡ ಸಂಪದ: ಮಾನುಸಗರ, ಪ. ಮಹಾಕವಿ ಲಕ್ಷ್ಮೀಶ ಪ್ರಕಾಶನ, ಕನ್ನಡ ಸಾಹಿತ್ಯ ಸಂಘ, ಸುರಪುರ, ೨೦೦೯, ಪು.ಸಂ.೧೧.

೪೪. ಸೌಂಥ ಇಂಡಿಯನ್ ಇನ್‌ಸ್ಕ್ರಿಪಷನ್ಸ್ ಕ್ರಿ.ಶ.೧೧೦೭ ಪು.ಸಂ.೬೯.

೪೫. ಅನುಶಾಸನ : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೨೦೦೨, ಪು.ಸಂ.೫೨.

ಕನ್ನಡ ನಾಡಿನ ಭವ್ಯ ಪರಂಪರೆ ಕಾಲದಿಂದ ಕಾಲಕ್ಕೆ ಆಳಿ ಹೋದ ರಾಜಮನೆತನಗಳ ಬದುಕಿಗೆ ಸಾಕ್ಷಿಯಾಗಿ ನಿಂತಿರುವ ಶಾಸನಗಳು, ನಾಣ್ಯಗಳು, ದೇವಾಲಯಗಳು ನಾಡಿನಾದ್ಯಂತ ಕಂಡು ಬರುತ್ತವೆ. ಕೆಲವು ಅನಾಥವಾಗಿ, ಹಾಳು ಬಿದ್ದಿರುವುದು ಈಗಲೂ ಕಾಣಬಹುದು. ಈ ಅಧ್ಯಯನದ ಅವಧಿಯಲ್ಲಿ ಕೆಲ ತೊಂದರೆಗಳು ಕಂಡುಬರುತ್ತವೆ. ಪುಸ್ತಕದಲ್ಲಿ ಪ್ರಕಟಗೊಂಡಿರುವ ಕೆಲ ಶಾಸನಗಳು ಇಂದು ಕಂಡುಬರುವುದಿಲ್ಲ. ದೇವಾಲಯಗಳ ಸ್ಥಿತಿ ಇಂದು ಅವನತಿಯಂಚಿನಲ್ಲಿ ಕಂಡುಬರುತ್ತವೆ. ಶಾಸನಗಳಲ್ಲಿ ಉಲ್ಲೇಖಗೊಂಡ ಕೆಲ ಹಳ್ಳಿಗಳು ಇಂದು ಕಾಣುವುದಿಲ್ಲ. ಕೆಲವು ಇಂದು ಕಾಲನ ತುಳಿತಕ್ಕೆ ಒಳಗಾಗಿ ನಾಶ ಹೊಂದಿವೆ.

ಪುಸ್ತುತ ಪ್ರಬಂಧದ ವಿಷಯ ''ಸಗರನಾಡಿನ ಶಾಸನಗಳ ಸಾಂಸ್ಕೃತಿಕ ಅಧ್ಯಯನ''ವಾಗಿದೆ. ಈ ಪ್ರಬಂಧದಲ್ಲಿ ಒಟ್ಟು ಎಂಟು ಅಧ್ಯಾಯಗಳು ಒಳಗೊಂಡಿವೆ. ಪ್ರಥಮ ಅಧ್ಯಾಯ 'ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ'. ಈ ಅಧ್ಯಯನದಲ್ಲಿ ಕ್ರಿ.ಶ. ೯೩೯ ರಿಂದ ೧೪೨೬ ರ ವರೆಗೆಗಿನ ಕಾಲಾವಧಿ ಇದಾಗಿದ್ದು, ಒಟ್ಟು ೪೮೭ವರ್ಷಗಳ ಅವಧಿಯಾಗಿದೆ. ಈ ನಾಡಿನ ಸಂಸ್ಕೃತಿಯನ್ನು ಶಾಸನಗಳಿಂದ ತಿಳಿಸುವ ಪ್ರಯತ್ನ ಮಾಡಲಾಗಿದೆ. ಕೃಷ್ಣಾ–ಭೀಮಾ ನದಿಯ ನಡುವಿನ ಮಧ್ಯ ಪ್ರದೇಶವೇ ಸಗರನಾಡು. ಈ ನಾಡು ಬಿಜಾಪುರ ಜಿಲ್ಲೆಯ ಮುದ್ದೇಬಿಹಾಳ ಹಾಗೂ ಸಿಂದಗಿ ತಾಲೂಕುಗಳವರೆಗೆ ಇದರ ವ್ಯಾಪ್ತಿ ಹೊಂದಿದೆ. ''ಸಗರನಾಡಿನ ಪೂರ್ವಕ್ಕೆ ಎಡದೊರೆ ಎರಡು ಸಾಸಿರ, ಪಶ್ಚಿಮಕ್ಕೆ ತರ್ದವಾಡಿ ಸಾಸಿರ ಮತ್ತು ಉತ್ತರಕ್ಕೆ ಅಲಂದೆ ಸಾಸಿರ ಹಾಗೂ ದಕ್ಷಿಣಕ್ಕೆ ಕರಡುಕಲ್ಲು ಮುನ್ನೂರ ವ್ಯಾಪ್ತಿ ಹೊಂದ್ದಿತ್ತು ಎಂಬುದು ಪ್ರಥಮ ಅಧ್ಯಾಯದಲ್ಲಿ ತಿಳಿಸಲಾಗಿದೆ.

ಅಧ್ಯಾಯ–೨. 'ಭೌಗೋಳಿಕ ಮತ್ತು ಐತಿಹಾಸಿಕ ಹಿನ್ನಲೆ'. ಎಂಬ ಅಧ್ಯಾಯದಲ್ಲಿ ಪುರಾಣಗಳ ಪ್ರಕಾರ ಈ ನಾಡು ಹಿಂದೆ ಇಕ್ಷ್ವಾಕುವಂಶದ ಚಕ್ರವರ್ತಿಯ ಆಳ್ವಿಕೆಗೆ ಒಳಪಟ್ಟಿತ್ತು. ೯೬,೦೦೦ ಹೆಂಡತಿಯರನ್ನು ಈತ ಹೊಂದಿದ್ದನು ಎಂಬುದು ಪುರಾಣಗಳಿಂದ ತಿಳಿಸುವ ಪ್ರಯತ್ನ ಮಾಡಲಾಗಿದೆ. ಈ ನಾಡು ಛಾಯಾ ಭಗವತಿಯಿಂದ ಸೂರ್ಯ ನಾರಾಯಣ ದೇವಾಲಯ ಎಂಬ ಪ್ರಸಿದ್ಧಿ ಪಡೆದಿದೆ. ಇಂದಿಗೂ ಸುರಪುರದಲ್ಲಿರುವ ಈ ದೇವಾಲಯದಲ್ಲಿ ಛಾಯಾ ಭಗವತಿ ದೇವಿಯ ಹೆಸರಿನಿಂದ ಜಾತ್ರೆ ನಡೆಯುತ್ತದೆ. ಅನೇಕ ಪುಷ್ಕರಣಿಗಳು, ಗುಹೆ, ಬಂಡೆಗಳು ಕಂಡುಬರುತ್ತವೆ ಅಲ್ಲದೆ ಭೌಗೋಳಿಕವಾಗಿ ಆದಿ ಮಾನವನ ಉಪಕರಣಗಳಿಂದ ಹಿಡಿದು ಕಬ್ಬಿಣದ ಯುಗದವರೆಗೂ ಅನೇಕ ಆಯುಧಗಳ ಉಪಕರಣಗಳ, ಬಳಕೆ ಮಾಡುತ್ತಿದ್ದರು ಎಂಬುದು ಈ ಅಧ್ಯಯನದಲ್ಲಿ ತಿಳಿಸಲಾಗಿದೆ.

ಅಧ್ಯಾಯ-೩. 'ರಾಜಕೀಯ ವ್ಯವಸ್ಥೆ'. ಎಂಬ ಅಧ್ಯಯದಲ್ಲಿ ರಾಷ್ಟ್ರಕೂಟರಿಂದ ಕಲ್ಯಾಣ ಚಾಲುಕ್ಯರು ಆಳ್ವಿಕೆ ಮಾಡಿದ ರಾಜರ, ಯುವರಾಜರ ಉಲ್ಲೇಖ ಒಳಗೊಂಡಿದೆ. ಆರನೇ ವಿಕ್ರಮಾದಿತ್ಯನ ಹೆಚ್ಚು ಶಾಸನಗಳು ಈ ನಾಡಿನಲ್ಲಿ ಕಂಡು ಬಂದಿವೆ. ಕಲ್ಯಾಣ ಚಾಲುಕ್ಯರ ಮಹಾಮಂಡಳೇಶ್ವರರಾದ ಕಳಚೂರ್ಯರು, ಹೈಹಯರು, ದೇವಗಿರಿಯ ಯಾದವರು ಅಥವಾ ಸೇವುಣರ ಆಡಳಿತ ಬಗ್ಗೆ ತಿಳಿಸಲಾಗಿದೆ. ಸಾಮಂತರು, ಪ್ರಭುಗಳು, ಗಾವುಂಡರು, ಊರೊಡೆಯರ ಬಗ್ಗೆ ತಿಳಿಸಲಾಗಿದೆ. ಆಡಳಿತ ವಿಭಾಗಗಳಾದ ಸಗರ ಮುನ್ನೂರು ಹಾಗೂ ಸಗರ ಐದನೂರ ವಿವರಣೆ ಈ ಅಧ್ಯಯನದಲ್ಲಿ ತಿಳಿಸಲಾಗಿದೆ.

ಅಧ್ಯಾಯ-೪. 'ಸಾಮಾಜಿಕ ವ್ಯವಸ್ಥೆ'. ಎಂಬ ಅಧ್ಯಾಯದಲ್ಲಿ ನಾಡಿನ ಅಭಿವೃದ್ಧಿಗೆ ಶ್ರಮಿಕವರ್ಗ ಪ್ರಮುಖ ಪಾತ್ರವಹಿಸಿವೆ. ಒಬ್ಬ ರಾಜ ಒಂದು ದೇವಾಲಯ ಕಟ್ಟಿದರೆ ಆತನನ್ನು ಹೊಗಳಿ ಹೊಗಳಿ, ಹೊನ್ನ ಶೂಲಕ್ಕೆ ಏರಿಸುತ್ತಾರೆ. ಆದರೆ ದೇವಾಲಯದ ಕಟ್ಟಡಕ್ಕಾಗಿ ಶ್ರಮಿಸುತ್ತಿರುವ ಶ್ರಮಿಕರನ್ನು ಯಾರೂ ಪರಿಗಣನೆಗೆ ತೆಗೆದುಕೊಳ್ಳುವುದಿಲ್ಲ. ಆದರೆ ಕೆಲ ಶಾಸನಗಳು ಅವರನ್ನು ಪರಿಗಣನೆಗೆ ತೆಗೆದುಕೊಂಡಿದ್ದು ಈ ಮಹಾಪ್ರಬಂಧದಲ್ಲಿ ತಿಳಿಸಲಾಗಿದೆ. ಮನು "ನ ಸ್ತ್ರೀ ಸ್ವಾತಂತ್ರ್ಯ ಮರ್ಹತಿ" ಎಂದು ಹೇಳಿದ್ದಾನೆ. ಜನ ತಮಗೆ ಬೇಕಾದ ರೀತಿಯಲ್ಲಿ ಅರ್ಥೈಸಿಕೊಂಡಿದ್ದಾರೆ. ಆದರೆ ಈ ನಾಡಿನ ಶಾಸನಗಳು ಸ್ತ್ರೀಯರನ್ನು ಕಡೆಗಣಿಸಿಲ್ಲ. ಸಮಾಜದಲ್ಲಿರುವ ಕೆಟ್ಟ ಸಂಪ್ರದಾಯಗಳಾದ ಸೂಳೆಗಾರಿಕೆ, ತೊತ್ತುಗಳನ್ನು, ಹಬ್ಬ, ಹರಿದಿನಗಳನ್ನು, ಮೂಡನಂಬಿಕೆಗಳು, ಸಾರ್ವಜನಿಕ ಚಟುವಟಿಕೆಗಳ ಬಗ್ಗೆ ತಿಳಿಸಲಾಗಿದೆ. ಅಗ್ರಹಾರ, ಬ್ರಹ್ಮಪುರಿಗಳಿಗೆ ಪ್ರಧಾನ ಆಧ್ಯತೆ ನಡೆದಿಲ್ಲ. ಅಗ್ರಹಾರ, ಬ್ರಹ್ಮಪುರಿ ಹೆಸರು ಏನೇ ಇದ್ದರೂ ಶಿಕ್ಷಣದ ಚಟುವಟಿಕೆಗಳು ನಡೆದಿರುವುದು ದೇವಾಲಯಗಳಿಂದಲೇ ಎಂಬುದು ಈ ಅಧ್ಯಯನಲ್ಲಿ ಸ್ಪಷ್ಟವಾಗಿ ತಿಳಿಸಲಾಗಿದೆ.

ಅಧ್ಯಾಯ-೫. 'ಆರ್ಥಿಕ ವ್ಯವಸ್ಥೆ'. ಈ ನಾಡು ಸಮೃದ್ಧಿಯಿಂದ ಕೂಡಿತ್ತು. ಅನೇಕ ರೀತಿಯ ವ್ಯಾಪರ ಉದ್ಯೋಗಗಳು ಇಲ್ಲಿ ಕಂಡುಬಂದಿವೆ. ಕೃಷ್ಣಾ ಭೀಮಾ ನದಿಯ ನಡುವಿನ ಫಲವತ್ತಾದ ಪ್ರದೇಶವಾಗಿರುವುದರಿಂದ ನಾಡಿನ ಉದ್ದ ಅಗಲಕ್ಕೂ ವಿವಿಧ ರೀತಿಯ ಬೆಳೆಗಳು ಕಂಡುಬರುತ್ತವೆ. ನೈಸರ್ಗಿಕ ಸಂಪನ್ಮೂಲಗಳಿಂದ ಸಂಪದ್ಭರಿತವಾದ ಈ ನಾಡಿನ ಮೇಲೆ ತೆರಿಗೆ ಇತ್ತು ಎಂಬುದು ಈ ಅಧ್ಯಯನದಿಂದ ಸ್ಪಷ್ಟವಾಗಿ ತಿಳಿದುಬರುತ್ತದೆ. ವಡ್ಡರಾವುಳ, ತಿಪ್ಪೆಸುಂಕ, ಎತ್ತಿನೊಕ್ಕ, ಕಿರುಕುಳ ಎಂಬ ತೆರಿಗಳಿದ್ದರೆ, ಇನ್ನಿತರ ತೆರಿಗೆಗಳಾದ ಕಾಹು, ಸೇಸೆಗಳು ಇನ್ನು ಸ್ಪಷ್ಟಗೊಳ್ಳಬೇಕಾಗಿದೆ. ತೂಕ, ಅಳತೆ, ನಾಣ್ಯಗಳ ಉಲ್ಲೇಖ ಮೊದಲಾದವನ್ನು ಈ ಅಧ್ಯಾಯದಲ್ಲಿ ತಿಳಿಸಲಾಗಿದೆ.

ಅಧ್ಯಾಯ-೬. 'ಧಾರ್ಮಿಕ ವ್ಯವಸ್ಥೆ',ಗೆ ಸಂಬಂಧಿಸಿದೆ. ಈ ಅಧ್ಯಾಯದಲ್ಲಿ ಧಾರ್ಮಿಕ ವಿವರಣೆಯಿದೆ. ಹಲವು ಧರ್ಮಗಳಿಂದ ಕೂಡಿದ ನಾಡು ಸಗರ ನಾಡು. ಈ ನಾಡಿನ ಬೌದ್ಧ, ಜೈನ, ಶೈವ ಇತರ ಧರ್ಮಗಳ ಆಗರವಾಗಿತ್ತು. ಜೈನರ ಅನೇಕ ನಿಷಧ್ಧಿ ಶಿಲ್ಪಗಳು ಕಂಡುಬರುತ್ತವೆ. ಪಾಶುಪತ ಕಾಳಾಮುಖ ಶೈವರ ಕೇಂದ್ರ ಈ ನಾಡು. ಎಳಮೇಲ ಸಿಂಹಪರ್ಷೆ ನಾಡು ಯಡ್ರಾಮಿ ಆಗಿತ್ತು. ಅಂತೆಯೇ ಅನೇಕ ಆಚಾರ್ಯರು ಎಳಮೇಲ ಸಿಂಹಪರ್ಷೆ ಶಾಖೆಗೆ ಸೇರಿದ್ದನ್ನು ಇಲ್ಲಿ ಸ್ಪಷ್ಟ ಪಡಿಸಲಾಗಿದೆ. ಶೈವ ದೇವಾಲಯಗಳು, ವೈಷ್ಣವ ದೇವಾಲಯಗಳು, ತ್ರಿಕೂಟ ದೇವಾಲಯಗಳು, ಸ್ತ್ರೀ ದೇವಾಲಯಗಳು ಈ ನಾಡಿನಲ್ಲಿ ಕಂಡುಬರುತ್ತವೆ.

ಅಧ್ಯಾಯ-೭ 'ದೇವಾಲಯಗಳು', ಈ ಅಧ್ಯಾಯದಲ್ಲಿ ದೇವಾಲಯಗಳು ಕುರಿತು ವಿವರಿಸಲಾಗಿದೆ. ಈ ನಾಡಿನಲ್ಲಿರುವ ಪ್ರತಿ ಹಳ್ಳಿ ಹಳ್ಳಿಗಳಲ್ಲಿರುವ ದೇವಾಲಯದ ಕಲೆ ಮತ್ತು ವಾಸ್ತು ಶಿಲ್ಪಗಳು ಈಗ ಹಿಂದಿನ ಸ್ಥಿತಿಯಲ್ಲಿ ಇಲ್ಲ. ದೇವಾಲಯಗಳು ಹಾಳು ಕೊಂಪೆಯಾಗಿವೆ. ಕಸ ಎಸೆಯುವ ತಿಪ್ಪೆಗಳಾಗಿವೆ. ಸಧ್ಯ ಅಲ್ಲಿ ಶಾಸನಗಳೂ ಇಲ್ಲ, ಇವುಗಳ ಸಂರಕ್ಷಣೆ ಮಾಡಬೇಕಾದದ್ದು ಎಲ್ಲರ ಹೊಣೆಯಾಗಿದೆ. ಶೈವ, ಬ್ರಹ್ಮ, ವೈಷ್ಣವ ದೇವಾಲಯಗಳ ಬಗ್ಗೆ ಈ ಅಧ್ಯಾಯನದಲ್ಲಿ ತಿಳಿಸಲಾಗಿದೆ.

ಸಾಹಿತ್ಯಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ ಅನೇಕ ಶಾಸನ ಕವಿಗಳು ಈ ನಾಡಿನಲ್ಲಿ ಕಂಡುಬರುತ್ತಾರೆ. ಕಾವ್ಯಗಳನ್ನು ರಚಿಸಿದ ನಾಗಚಂದ್ರ, ಸಗರದ ಬ್ರಹ್ಮಯ್ಯ, ಸಗರದ ನಾಚಯ್ಯ, ಹೂವಿನಾಳ ಕಲ್ಲಯ್ಯ, ಈ ನಾಡಿನವರು. ಕಲ್ಯಾಣ ಮಂಟಪದಲ್ಲಿ ನಡೆಯುವಂತ ವಿದ್ವತ್ ಸಭೆ ಏವೂರಿನಲ್ಲಿ ಮಹಾಕವಿ ಲಕ್ಷ್ಮೀಶನಿಂದ ನಡೆಯುತಿತ್ತು. ಆದರೆ ಇಂದು ಏವೂರು ಹಾಳು ಹಳ್ಳಿಯಾಗಿದೆ. ಕಲ್ಯಾಣದ ಶಿವಶರಣರಾದ ಕೊಂಡಗುಳಿ ಕೇಳಿರಾಜ, ಜೇಡರ ದಾಸಿಮಯ್ಯ, ಕೆಂಬಾವಿ ಬೋಗಣ್ಣ, ಕೊಡೆಕಲ್ಲ ಬಸವಣ್ಣ ಇಂತಹ ಶರಣರಿಗೆ ಜನ್ಮ ಕೊಟ್ಟ ನಾಡು ಸಗರನಾಡು ಎಂಬದನ್ನು ಇಲ್ಲಿ ಸ್ಪಷ್ಟಪಡಿಸಲಾಗಿದೆ.

ಅಧ್ಯಾಯ-೮. 'ಸಮಾರೋಪ', ಈ ನಾಡಿನ ಅಧ್ಯಯನಕ್ಕಾಗಿ ಬೇಕಾದ ಸಂಗತಿಗಳನ್ನು ಇಲ್ಲಿ ಒಂದು ವ್ಯವಸ್ಥೆಗೆ ಅಳವಡಿಸಿ ಅಧ್ಯಯನ ಕೈಗೊಂಡು ಒಟ್ಟು ನಾಡಿನ ಸಂಸ್ಕೃತಿಯನ್ನು ಒಂದು ಕಡೆ ಕೂಡಿ ಹಾಕುವ ನಿಟ್ಟಿನಲ್ಲಿ ಪ್ರಯತ್ನ ಮಾಡಿದ್ದೇನೆ. ಇನ್ನೂ ಹೆಚ್ಚು-ಹೆಚ್ಚು ಅಗೆದು ತೆಗೆದಂತೆ ನಾಡಿನ ಸಂಸ್ಕೃತಿ ಹೊರ ಹೊಮ್ಮುತ್ತದೆ. ಇನ್ನು ಹೆಚ್ಚಿನ ಅಧ್ಯಯನ ಕೈಗೊಂಡರೆ ಹೆಚ್ಚು ಅವಕಾಶಗಳಿವೆ ಎಂಬುದು ತಿಳಿದುಬರುತ್ತದೆ. ಈ ರೀತಿ ಒಟ್ಟು ಎಂಟು ಅಧ್ಯಾಯಗಳಲ್ಲಿ ಸಗರನಾಡಿನ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಕೈಗೊಳ್ಳಲಾಗಿದೆ.

## ಪ್ರಕಟಿತ ಗ್ರಂಥಗಳು :


| | | |
|---|---|---|
| ೧ | ಅಜಿತ ಪುರಾಣ ಸಂಗ್ರಹ : | ಶಾಮರಾಯ ತ.ಸು.ತ. ವೆಂ. ಸ್ಮಾರಕ ಗ್ರಂಥಮಾಲೆ ಕೃಷ್ಣಮೂರ್ತಿಪುರಂ, ಮೈಸೂರು, ೧೯೬೯. |
| ೨ | ಅಜಿತ ಪುರಾಣ ಸಾರ : | ಪಾಟೀಲ, ಎಸ್.ಪಿ,ವೈಶಾಲಿ ಪ್ರಕಾಶನ, ಧಾರವಾಡ, ೧೯೮೨. |
| ೩ | ಅನುಶಾಸನ : | ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೨೦೦೨. |
| ೪ | ಆರನೇ ವಿಕ್ರಮಾದಿತ್ಯನ ಶಾಸನಗಳು ಒಂದು ಅಧ್ಯಯನ : | ನಾಗಯ್ಯ ಜೆ.ಎಂ, ವೀರಶೈವ ಅಧ್ಯಯನ ಅಕಾಡೆಮಿ, ಶ್ರೀ ನಾಗನೂರು ರುದ್ರಾಕ್ಷಿ ಮಠ, ಬೆಳಗಾವಿ, ೧೯೯೨. |
| ೫ | ಆದಿ ಬಣಜಿಗರು ಒಂದು ಅಧ್ಯಯನ : | ಜೇವರಗಿ ಮಲ್ಲಿಕಾರ್ಜುನ, ಶ್ರೀಶಾರದಾಂಬಿಕಾ ಪ್ರಕಾಶನ, ಶಹಪೂರ, ೨೦೦೩ |
| ೬ | ಇತಿಹಾಸ ದರ್ಶನ ಸಂ-೮ : | ಮೋತದಾರ ಡಿ.ವಿಠಲ, ಕರ್ನಾಟಕ ಇತಿಹಾಸ ಆಕಾಡೆಮಿ, ಬೆಂಗಳೂರು, ೧೯೯೩. |
| ೭ | ಎಡದೊರೆ ನಾಡು : | ಹಿರೇಮಠ ಚನ್ನಬಸವ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ, ೨೦೦೦. |
| ೮ | ಕರ್ನಾಟಕ ಇತಿಹಾಸ : | ಪಂಚಮುಖಿ ಆರ್.ಎಸ್, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೬೭. |
| ೯ | ಕನ್ನಡ ಶಾಸನ ಪರಿಚಯ : | ವೆಂಕಟಸುಬ್ಬಯ್ಯ ಜಿ, ಪ್ರತಿಭಾ ಪ್ರಕಟಣ ಮಂದಿರ ಜಯನಗರ, ಬೆಂಗಳೂರು, ೧೯೬೮. |
| ೧೦ | ಕರ್ನಾಟಕದ ಶಾಸನಗಳು : | ಪಂಚಮುಖಿ ಆರ್.ಎಸ್, ಕನ್ನಡ ಸಂಶೋಧನ ಸಂಸ್ಥೆ, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ, ೧೯೮೧. |
| ೧೧ | ಕರ್ನಾಟಕದಲ್ಲಿ ಪುರಾತನ ವಿದ್ಯಾಕೇಂದ್ರಗಳು : | ನಾಗರಾಜ ಮೈ.ನ,ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ನೃಪತುಂಗ ರಸ್ತೆ, ಬೆಂಗಳೂರು, ೧೯೮೩. |
| ೧೨ | ಕರ್ನಾಟಕದ ಕಲಚುರಿಗಳು : | ಪಾಂಡುರಂಗ ದೇಸಾಯಿ, ಆಲೂರ ವೆಂಕಟರಾವ ಪ್ರತಿಷ್ಠಾನ, ಧಾರವಾಡ, ೧೯೮೩. |

೧೩ ಕರ್ನಾಟಕದಲ್ಲಿ ನವಶಿಲಾಯುಗ : ಗೋಪಾಲ್ ಬಾ.ರಾ, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ, ೧೯೮೭.

೧೪ ಕನ್ನಡ ಶಾಸನ ಸಂಪದ : ಹಿರೇಮಠ ಆರ್.ಸಿ, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ, ೧೯೮೭.

೧೫ ಕರ್ನಾಟಕ ಸಂಸ್ಕೃತಿ ಸಮೀಕ್ಷೆ : ತಿಪ್ಪೇರುದ್ರಸ್ವಾಮಿ ಎಚ್, ಸರಸ್ವತಿಪುರಂ ಮೈಸೂರು, ೧೯೯೨.

೧೬ ಕರ್ನಾಟಕದ ಪರಂಪರೆ ಸಂ–೧ : ದಿವಾಕರ. ಆರ್.ಆರ್, ಕನ್ನಡ ಮತ್ತು ಸಂಸ್ಕೃತಿಕ ಇಲಾಖೆ, ಬೆಂಗಳೂರು.೧೯೯೨.

೧೭ ಕಲಬುರ್ಗಿ ಜಿಲ್ಲೆಯ ಶಾಸನಗಳು : ಗೋಗಿ ಹನುಮಾಕ್ಷಿ, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೬.

೧೮ ಕರ್ನಾಟಕ ಚರಿತ್ರೆ ಸಂ–೨. : ಷೇಕ್‌ಅಲಿ.ಬಿ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ, ೧೯೯೭.

೧೯ ಕರ್ನಾಟಕದ ಕಲೆ ಮತ್ತು ವಾಸ್ತುಶಿಲ್ಪ : ಮೂರ್ತಿ ಕೆ.ಎಲ್.ಎನ್, ರಂಜಿತಾ ಪ್ರಕಾಶನ, ತುಮಕೂರು, ೧೯೯೮.

೨೦ ಕನ್ನಡ ಶಾಸನ ಶಿಲ್ಪ : ಪರಮಶಿವಮೂರ್ತಿ ಡಿ.ವಿ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ, ೧೯೯೯.

೨೧ ಕರ್ನಾಟಕ ಕೋಟೆಗಳು ಸಂ–೧ : ಪಾಟೀಲ ಚನ್ನಬಸಪ್ಪ ಎಸ್, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ, ೧೯೯೯.

೨೨ ಕರ್ನಾಟಕ ರಾಜಕೀಯ ಚರಿತ್ರೆ ಮತ್ತು ಸಾಹಿತ್ಯ : ಸೋಸಲೆ ಎನ್.ಚಿನ್ನಸ್ವಾಮಿ, ಸಿ.ವಿ.ಜಿ.ಪಬ್ಲಿಕೇಷನ್ಸ್, ಬೆಂಗಳೂರು ೨೦೦೧.

೨೩ ಕರ್ನಾಟಕ ಪುರಾತತ್ವ ನೆಲೆಗಳು : ಶಿವತಾರಕ್ ಕೆ.ಬಿ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ, ೨೦೦೧.

೨೪ ಕೆರೆ ನೀರಾವರಿ ನಿರ್ವಹಣೆ ಚಾರಿತ್ರಿಕ ಅಧ್ಯಯನ : ಹೆಗಡೆ ರಾಜಾರಾಮ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ, ೨೦೦೨.

೨೫ ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ : ಚಿದಾನಂದ ಮೂರ್ತಿ ಎಂ, ಸಪ್ನ ಬುಕ್ ಹೌಸ್, ಬೆಂಗಳೂರು ೨೦೦೨.

೨೬ ಕನ್ನಡ ಶಾಸನಗಳು : ಗೋಪಾಲ ಬಾ.ರಾ,ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೪.

೨೭ ಕನ್ನಡದ ಕೆಲವು ಜೈನ ಶಾಸನ ಕವಿಗಳು : ಲೋಕಾಪುರ ಬಾಳಾಸಾಹೇಬ, ಸಿವಿಜಿ ಪಬ್ಲಿಕೇಷನ್ಸ್, ಬೆಂಗಳೂರು, ೨೦೦೪.

೨೮ ಕರ್ನಾಟಕದ ವೀರಗಲ್ಲುಗಳು: ಶೇಷಶಾಸ್ತ್ರೀ ಆರ್,ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೪.

೨೯ ಕರ್ನಾಟಕ ಗತವೈಭವ : ವೆಂಕಟರಾಯರು ಆಲೂರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೦೬.

೩೦ ಕರ್ನಾಟಕ ದೇವಾಲಯ ಕೋಶ ವಿಜಾಪುರ ಜಿಲ್ಲೆ : ಬಡಿಗೇರ ವಾಸುದೇವ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ ೨೦೦೬.

೩೧ ಕರ್ನಾಟಕದಲ್ಲಿ ಜೈನಧರ್ಮ: ಶಾರದಾ ಕೆ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ, ೨೦೦೬.

೩೨ ಕರ್ನಾಟಕ ಶಾಸನೋಕ್ತ ಮಹಿಳೆ ಸಂಸ್ಕೃತಿ–ಸಮೀಕ್ಷೆ: ಪಾವಟೆ ಚೆನ್ನಕ್ಕ, ಕರ್ನಾಟಕ ಇತಿಹಾಸ ಸಂಶೋಧನ ಮಂಡಲ, ಧಾರವಾಡ, ೨೦೦೭.

೩೩ ಕಸ್ತೂರೀ ಕೋಶ : ಕವಲಿ ಪಂಡಿತ ಚೆ.ಎ, ರಾಮಾಶ್ರಮ ಪಬ್ಲಿಕೇಶನ್ಸ್, ಧಾರವಾಡ, ೨೦೦೯.

೩೪ ಕಲಬುರ್ಗಿ ಜಿಲ್ಲಾ ಐತಿಹಾಸಿಕ ಮತ್ತು ಸಾಂಸ್ಕೃತಿಕ ಪರಂಪರೆ: ನೆಲೋಗಿ ವೀರಭದ್ರ ಸಿಂಪಿ, ಕಲಬುರ್ಗಿ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ಕಲಬುರ್ಗಿ, ೨೦೧೧.

೩೫ ಗುಲಬರ್ಗಾ ಜಿಲ್ಲೆಯ ಜೈನ ಪರಂಪರೆ : ಅಕ್ಕಿ ಡಿ.ಎನ್,ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ. ೨೦೧೦.

೩೬ ಚಾಲುಕ್ಯ ದರ್ಶನ : ಪಾಟೀಲ ಸುರೇಶ, ಪ್ರವಾಸಿ ಪ್ರಬಂಧ ಮಾಲಾ, ಬೆಂಗಳೂರು, ೧೯೯೩.

೩೭ ಜೈನ ವಿಗ್ರಹಗಳು : ಅಕ್ಕಿ ಡಿ.ಎನ್, ಕವಿಕುಂಚ ಪ್ರಕಾಶನ, ಶಹಾಪುರ,೨೦೦೦.

೩೮ ತರ್ದವಾಡಿ ನಾಡು ಒಂದು ಅಧ್ಯಯನ : ಕೊಪ್ಪಾ ಎಸ್.ಕೆ, ಪ್ರತಿಭಾ ಪ್ರಕಾಶನ, ಇಂಡಿ, ೧೯೯೦.

೩೯ ಪ್ರಾಚೀನ ಕರ್ನಾಟಕದಲ್ಲಿ ಶಿಲ್ಪಾಚಾರಿಯರು : ಕುಮಾರಸ್ವಾಮಿ ಕೆ.ಎಸ್,ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು, ೧೯೯೬.

೪೦ **ಪಾಂಚಾಳ ವೃತ್ತಿ ಪದಕೋಶ:** ಪಾಂಡುರಂಗಬಾಬು ಡಿ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ, ೨೦೦೦.

೪೧ **ಪ್ರಾಚೀನ ಕನ್ನಡ ಶಾಸನಗಳ ಭಾಷಿಕ ಅಧ್ಯಯನ** : ನೇಗಿನಹಾಳ ಎಂ.ಬಿ,ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ, ೧೯೮೨.

೪೨ **ಭಾರತೀಯ ಶಾಸನಶಾಸ್ತ್ರ ಪರಿಚಯ** : ಸಿ.ಪಿ.ಕೆ,ಲಕ್ಷ್ಮಿ ಪ್ರಿಂಟಿಂಗ್ ಆಂಡ್ ಪಬ್ಲಿಷಿಂಗ್ ಹೌಸ್, ಮೈಸೂರು, ೨೦೦೧.

೪೩ **ಬಿಡುಗಡೆ** : ಪೋಲಿಸ ಪಾಟೀಲ ಬಸವರಾಜ, ಅಮರ ಪ್ರಕಾಶನ, ಗುಲಬರ್ಗಾ, ೨೦೦೨.

೪೪ **ಬಾದಾಮಿ** : ಪತ್ತಾರ ಶಿಲಾಕಾಂತ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ, ೨೦೦೬.

೪೫ **ಭಾರತದ ಸಾಮಾಜಿಕ ಸಮಸ್ಯೆಗಳು–೩** : ಚೆಕ್ಕಿ ಶೋಭಾದೇವಿ, ಎಸ್.ಎಸ್.ಭಾವಿಕಟ್ಟಿ, ಪುಸ್ತಕ ವ್ಯಾಪಾರಿಗಳು ಮತ್ತು ಪ್ರಕಾಶನ, ಗುಲಬರ್ಗಾ. ೨೦೦೯.

೪೬ **ಬಾದಾಮಿ ಚಾಲುಕ್ಯರು** : ಮುರಿಗೆಪ್ಪ ಎ,ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ ೨೦೦೯.

೪೭ **ಮಾರ್ಗ ಸಂ–೪** : ಕಲಬುರ್ಗಿ ಎಂ.ಎಂ, ಸಪ್ನ ಬುಕ್ ಹೌಸ್, ಬೆಂಗಳೂರು,೧೯೬೭

೪೮ **ಮಾರ್ಗ ಸಂ–೨,** : ಕಲಬುರ್ಗಿ ಎಂ.ಎಂ, ಕರ್ನಾಟಕ ಬುಕ್ ಹೌಸ್, ಏಜನ್ಸಿ, ಬೆಂಗಳೂರು, ೧೯೮೮.

೪೯ **ಮುದನೂರು ಮತ್ತು ಯಡ್ರಾಮಿ ಶಾಸನಗಳು** : ಹಿರೇಮಠ ಬಿ.ಆರ್, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೪.

೫೦ **ರಾಯಚೂರು–ಕೊಪ್ಪಳ ಜಿಲ್ಲೆಯ ಶಾಸನಗಳು** : ಹಿರೇಮಠ ಚನ್ನಬಸವ, ಚೇತನ ಪ್ರಕಾಶನ, ಮಸ್ಕಿ, ೧೯೯೯.

೫೧ **ವಿಜಾಪುರ ಜಿಲ್ಲೆಯ ಶಾಸನ ಸೂಚಿ** : ಕಲಬುರ್ಗಿ ಎಂ.ಎಂ, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೬.

೫೨ **ವೈಶಿಷ್ಟ್ಯಪೂರ್ಣ ಕನ್ನಡ ಶಾಸನಗಳು** : ಮಂಜುನಾಥ ಎಂ.ಜಿ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೨೦೦೪.

೫೩ **ಶಾಸನಗಳಲ್ಲಿ ಶಿವಶರಣರು** : ಕಲಬುರ್ಗಿ ಎಂ.ಎಂ, ಸಿರಿಗನ್ನಡ ಪ್ರಕಾಶನ, ಕನ್ನಡ ವಿಭಾಗ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೦.

೫೪ **ಶಾಸನಗಳಲ್ಲಿ ಕರ್ನಾಟಕದ ವರ್ತಕರು** : ಹಿರೇಮಠ ಬಿ.ಆರ್, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೬.

೫೫ **ಶಾಸನಗಳಲ್ಲಿ ಕನಾಟಕದ ಸ್ತ್ರೀ ಸಮಾಜ** : ಎಲಿಗಾರ ಚೆನ್ನಕ್ಕ, ಕನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೦

೫೬ **ಶಾಸನ ಸಂಗ್ರಹ** : ಅಣ್ಣಿಗೇರಿ ಎ.ಎಂ, ಶೇಷಶಾಸ್ತ್ರಿ ಆರ್, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೩.

೫೭ **ಶಾಸನಗಳಲ್ಲಿ ಎರಡು ವಂಶಗಳು** : ನಾಗರಾಜಯ್ಯ ಹಂಪ, ಕನ್ನಡ ಅಧ್ಯಯನ ವಿಭಾಗ, ಮುಂಬಯಿ ವಿಶ್ವವಿದ್ಯಾಲಯ, ಮುಂಬಯಿ,೧೯೯೫

೫೮ **ಶಾಸನ ಪರಿಭಾಷೆ** : ಹಿರೇಮಠ ಎಸ್.ಎಂ, ವಿದ್ಯಾನಿಧಿ ಪ್ರಕಾಶನ, ಗದಗ, ೧೯೭೩.

೫೯ **ಶಹಮುರ ತಾಲೂಕಿನ ಶಾಸನಗಳು ಒಂದು ಸಮೀಕ್ಷೆ** : ವನದುರ್ಗ ರಂಗರಾಜ, ಸಗರನಾಡು ಅಧ್ಯಯನ ಸಂಸ್ಥೆ, ಶಹಮುರ, ೧೯೯೬.

೬೦ **ಶಾಸನ ಶಾಸ್ತ್ರ ಪ್ರವೇಶ** : ಸಿ.ಪಿಕೆ, ಚೇತನ ಬುಕ್ ಹೌಸ್, ಮೈಸೂರು, ೨೦೦೧.

೬೧ **ಶಾಸನ ಸಂಜೀವಿನಿ** : ಪಾವಟೆ ಚೆನ್ನಕ್ಕ, ಚೆನ್ನಗಂಗಾ ಪ್ರಕಾಶನ, ಧಾರವಾಡ, ೨೦೦೩

೬೨ **ಶಾಸನ ಅಧ್ಯಯನ ಸಂ–೨, ಸಂ–೧** : ಭಟಸೂರಿ ಕೆ. ಜಿ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ, ೨೦೦೫.

೬೩ **ಶಾಸನ ಮತ್ತು ಗದ್ಯ** : ಜಯದೇವ್, ಹು.ಕಾ, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೦೯.

೬೪ **ಸಮಾಧಿ–ಬಲಿದಾನ–ವೀರಮರಣ ಸ್ಮರಕಗಳು** : ಕಲಬುರ್ಗಿ ಎಂ. ಎಂ, ಐಬಿಎಚ್, ಪ್ರಕಾಶನ, ಬೆಂಗಳೂರು, ೧೯೮೦.

೬೫ **ಸುರಮುರ ತಾಲೂಕಿನ ಶಾಸನಗಳು** : ಗೋಗಿ ಹನುಮಾಕ್ಷಿ, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, ೧೯೯೫.

| | | | |
|---|---|---|---|
| ೧೬ | ಸಗರನಾಡ ಸಿರಿ | : | ಅಕ್ಕಿ ಡಿ.ಎನ್, ಕವಿಕುಂಚ ಪ್ರಕಾಶನ, ಶಹಾಪುರ, ೧೯೯೬. |
| ೧೭ | ಸಾಮ್ರಾಜ್ಯ ಮತ್ತು ಸಂಸ್ಥಾನ | : | ಸೋಸಲೆ ಎನ್. ಚಿನ್ನಸ್ವಾಮಿ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ, ೨೦೦೪. |
| ೧೮ | ಸಂಶೋಧಕರು ಮತ್ತು ಕ್ಷೇತ್ರಕಾರ್ಯ | : | ಚಂದ್ರಪೂಜಾರಿ ಎಂ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ, ೨೦೦೫. |
| ೧೯ | ಸಗರನಾಡ ಸಂಪದ | : | ಮಾನುಸಗರ ಪ, ಮಹಾಕವಿ ಲಕ್ಷ್ಮೀಶ ಪ್ರಕಾಶನ, ಕನ್ನಡ ಸಾಹಿತ್ಯ ಸಂಘ, ಸುರಪುರ, ೨೦೦೯. |
| ೨೦ | ಹೈದರಾಬಾದು ಕರ್ನಾಟಕ ಭಾಗದ ಕನ್ನಡ ಶಿಲಾ ಶಾಸನಗಳು | : | ಶಿವಾನಂದ ವಿ, ಬನಾರಸ ಹಿಂದೂ ವಿಶ್ವವಿದ್ಯಾಲಯ, ವಾರಣಾಸಿ, ೧೯೯೨. |
| ೨೧ | **The chalukyas of kalyana:** | | Nagaraja Rao, Bangalore the mythic socity, 1983. |

## ಗ್ಯಾಸೆಟಿಯರಗಳು :

| | | | |
|---|---|---|---|
| ೧ | ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಭಾಗ-೧ | : | ಕಾಮತ್ ಸೂರ್ಯನಾಥ, ಪರಿಶ್ರೀ ಪ್ರಿಂಟರ್ ಬೆಂಗಳೂರು, ೧೯೮೪. |
| ೨ | ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಭಾಗ-೩ | : | ಕಾಮತ್ ಸೂರ್ಯನಾಥ, ಕರ್ನಾಟಕ ರಾಜ್ಯ ಸರಕಾರ ಬೆಂಗಳೂರು, ೧೯೮೬. |
| ೩ | ಗುಲಬರ್ಗಾ ಜಿಲ್ಲೆ ಗ್ಯಾಸೆಟಿಯರ್ | : | ಪಾಟೀಲ ಎಂ.ಬಿ, ಕರ್ನಾಟಕ ರಾಜ್ಯ ಸರಕಾರ ಕರ್ನಾಟಕ ಗ್ಯಾಸೆಟಿಯರ್, ಬೆಂಗಳೂರು, ೧೯೯೭. |

## ತಾಲೂಕಾ ದರ್ಶನಗಳು :


೧ ಕಲಬುರ್ಗಿ ಜಿಲ್ಲಾ ದರ್ಶನ : ಪ್ರಧಾನ ಸಂಪಾದಕರು, ಬಸವರಾಜ ಸಬರದ, ಪ್ರಸಾರಂಗ ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ. ೨೦೦೫.

೨ ಶಹಾಪುರ ತಾಲ್ಲೂಕು ದರ್ಶನ: ಅಕ್ಕಿ ಡಿ.ಎನ್, ಐಬಿಎಚ್, ಪ್ರಕಾಶನ ಗಾಂಧಿನಗರ, ಬೆಂಗಳೂರು, ೧೯೮೬.

೩ ಶಹಾಪುರ ದರ್ಶನ : ಹಿರೇಮಠ ಸೂಗಯ್ಯ, ದರ್ಶನ ಪ್ರಕಾಶನ, ಶಹಾಪೂರ, ೧೯೯೪.

೪ ಶೋರಾಪುರ (ಸುರಪುರ) ತಾಲ್ಲೂಕು ದರ್ಶನ : ರೇವಣಸಿದ್ದಯ್ಯ ಆರ್.ಐಬಿಎಚ್, ಪ್ರಕಾಶನ ಗಾಂಧಿನಗರ, ಬೆಂಗಳೂರು, ೧೯೮೬.

೫ ಜೇವರ್ಗಿ ತಾಲ್ಲೂಕು ದರ್ಶನ : ಪಾಟೀಲ ಸದಾನಂದ ಎನ್, ತಾಲ್ಲೂಕ ಕನ್ನಡ ಸಾಹಿತ್ಯ ಪರಿಷತ್, ಜೇವರ್ಗಿ, ೨೦೦೩.


## ನಿಯತ ಕಾಲಿಕ ಪತ್ರಿಕೆಗಳು :


೧. ವಿಜಯಕರ್ನಾಟಕ : ಐತಿಹಾಸಿಕ ಆಂದೋಲ ಮಠ, ೨೦೦೯.

೨. ವಿಜಯಕರ್ನಾಟಕ : ಭಾವೈಕ್ಯದ ಚಿತಾಶಾವಲಿ ದರ್ಗಾ ಜಾತ್ರೆ ಇಂದಿನಿಂದ, ೨೦೦೯.

೩. ಸಂಜೆವಾಣಿ : ಅಳಿವಿನ ಅಂಚಿನಲ್ಲಿ ಕುಳಗೇರಿ ಸ್ಮಾರಕಗಳು, ೨೦೦೯.

೪. ಪ್ರಜಾವಾಣಿ : ತೀರ್ಥ ದೇವಸ್ಥಾನಗಳ ಸಂಗಮ 'ಮುದನೂರು', ೨೦೧೦.

೫. ಪ್ರಜಾವಾಣಿ : ಪವಾಡಪುರುಷ ತಿಂಥಣಿಯ ಜಗದ್ಗುರು ಮೌನೇಶ್ವರ, ೨೦೧೦.

೬. ಪ್ರಜಾವಾಣಿ : ಕಾಯಕ ಯೋಗದ ನೇತಾರ ದಾಸಿಮಯ್ಯ, ೨೦೧೦.

೭. ವಿಜಯಕರ್ನಾಟಕ : ಸಗರದಲ್ಲಿ ಶಿಲಾ ಶಾಸನ ಪತ್ತೆ, ೨೦೧೦.

೮. ವಿಜಯ ಕರ್ನಾಟಕ : ಕಲಿಕೆ ಕಮ್ಮಿಯಾದರೂ ಸಾಧನೆ ಮೆಟ್ಟಿಲು ಹತ್ತಿದ ಭೀಮಕವಿ, ೨೦೧೦.

೯. ಕರ್ಮವೀರ :ಮುಗಿಯದಿರಲಿ ಕೆರೆಗಳ ಆಯುಷ್ಯ, ೨೦೧೧.

೧೦. ವಿಜಯಕರ್ನಾಟಕ : ಎಲ್ಲೆಡೆ ಮಾತಾಗಲಿ ಏವೂರ ಶಿಲ್ಪಕಲೆ, ೨೦೧೦.

೧೧. ಪ್ರಜಾವಾಣಿ : ಮರೆಯಾಗಲಿದೆ ಯಡ್ರಾಮಿ ಇತಿಹಾಸ, ೨೦೧೨.

## ಪಿಹೆಚ್.ಡಿ. ಮಹಾಪ್ರಬಂಧಗಳು :

೧. ಕಲಬುರ್ಗಿ ಜಿಲ್ಲೆಯ ಶಾಸನಗಳ ಸಾಂಸ್ಕೃತಿಕ ಅಧ್ಯಯನ : ಮೋನಪ್ಪಾ ಶಿರವಾಳ, ೨೦೦೮.

೨. ಶಾಸನಗಳ ಹಿನ್ನೆಲೆಯಲ್ಲಿ ಕಲ್ಯಾಣ ಚಾಲುಕ್ಯ ದೇವಾಲಯಗಳು ಒಂದು ಸಾಂಸ್ಕೃತಿಕ ಅಧ್ಯಯನ : ಗೋಪಾಲರಾವ್, ಎಚ್.ಎಸ್, ೧೯೯೩.

೩. ಸಗರನಾಡು ಒಂದು ಸಾಂಸ್ಕೃತಿಕ ಅಧ್ಯಯನ: ಅಬ್ದುಲ ಕರಿಂ, ೧೯೯೯.

## ಶಬ್ಧಕೋಶಗಳು :

೧. ಕನ್ನಡ ನಿಘಂಟು ಸಂ–೧ : ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೭೦.

೨. ಕನ್ನಡ ನಿಘಂಟು ಸಂ–೨ : ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೭೬.

೩. ಕನ್ನಡ ನಿಘಂಟು ಸಂ–೩ : ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೭೭.

೪. ಕನ್ನಡ ನಿಘಂಟು ಸಂ–೪ : ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೭೯.

೫. ಶಬ್ದಮಂಜರಿ ಕೋಶ : ಹಾವನೂರ ಶ್ರೀನಿವಾಸ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೧೯೯೯.

೬. ಸಂಕ್ಷಿಪ್ತ ಕನ್ನಡ ನಿಘಂಟು : ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೧.

೭. ಶಾಸನ ಪರಿಭಾಷೆ : ಹಿರೇಮಠ ಎಸ್.ಎಂ, ವಿದ್ಯಾನಿಧಿ ಪ್ರಕಾಶನ, ಗದಗ, ೨೦೦೬.

೮. ಹಳಗನ್ನಡ ಶಬ್ದಾರ್ಥಕೋಶ : ಬಸವಾರಾಧ್ಯ, ಎನ್.ಡಿ.ವಿ.ಕೆ.ಮೂರ್ತಿ, ಪ್ರಕಾಶಕರು, ಮೈಸೂರು, ೨೦೦೮.

೯. ಕನ್ನಡ ಕಸ್ತೂರಿ ಕೋಶ : ರಾಮಾಶ್ರಯ ಪಬ್ಲಿಕೇಶನ್ಸ್, ಸುಭಾಷ ರಸ್ತೆ, ಧಾರವಾಡ, ೨೦೦೯.

## ಸ್ಮರಣ ಸಂಚಿಕೆಗಳು :

೧. ಬದುಕಿನ ಬುತ್ತಿ : ಜೇವರ್ಗಿ ಸಾಹಿತ್ಯ ಸಮ್ಮೇಳನ, ೨೦೦೫.

೨. ತವನಿಧಿ : ಸುರಪುರ ತಾಲೂಕ ಪ್ರಥಮ ಕನ್ನಡ ಸಾಹಿತ್ಯ ಸಮ್ಮೇಳನ, ಕೆಂಭಾವಿ,ತಾಲೂಕ ಕನ್ನಡ ಸಾಹಿತ್ಯ ಪರಿಷತ್ತು, ಸುರಪುರ, ೧೯೯೬.

೩. ಸಗರನಾಡ ದರ್ಶನ : ಸಂಶೋಧನಾತ್ಮಕ ಲೇಖನ–ಕವನಗಳ ಸಂಕಲನ, ಮಹಾಕವಿ ಲಕ್ಷ್ಮೀಶ ವಾಚನ ಸಂಘ, ಸುರಪುರ, ೧೯೮೫.

**ಶಾಸನ ಸಂಪುಟಗಳು :**

1. Epigraphia Carnatica, Vol-I-XII.
2. South Indian Inscriptions Vol-I-XII.
3. Epigraphia Indica.
4. Jainism in south India and some Jaina Epigraphs.
5. Kannada University Epigraphical Series-Vol-VIII.

# ನಕ್ಷೆಗಳು

೧. ಕರ್ನಾಟಕ

೨. ಕಲಬುರ್ಗಿ

೩. ಸಗರನಾಡು

೪. ಜೇವರ್ಗಿ

೫. ಶಹಾಪುರ

೬. ಸುರಪುರ

# ಕಲಬುರ್ಗಿ ಜಿಲ್ಲೆ



# ಜೇವರ್ಗಿ ತಾಲೂಕ


ಇಟಗಿ
ಕೂಡಿ
ಕೋಳಕೂರ
ಬಳುಂಡಗಿ
ಹರವಾಳ
ಮದರಿ
ಯನಗುಂಟಿ
ನೆಲೋಗಿ
ಜೇವರ್ಗಿ
ನರಬೋಳ
ಸೊನ್ನ
ಅಂದೋಲಾ
ಕಲ್ಲೂರ
ಗಂವ್ಹಾರ
ಮಂದೇವಾಲ
ಅರಳಗುಂಡಗಿ
ಇಜೇರಿ
ಆಲೂರ
ಯಳವಾರ
ಕಡಕೋಳ
ಯಡ್ರಾಮಿ
ಯಲಗೋಡ
ಕಾಚಾಪುರ
ಶಿವಪುರ
ಕೊಂಡಗುಳಿ
ಮಳ್ಳಿ
ವಡಗೇರಾ
ಕುಳಗೇರಿ

# ಸುರಪುರ ತಾಲೂಕ


ಏವೂರ
ಯಾಳಗಿ
ಕೆಂಭಾವಿ
ಮುದನೂರ
ಅರಕೇರಿ
ಪೇಟಅಮ್ಮಾಪುರ
ಶೋರಾಪುರ
ಹುಣಸಗಿ
ದೇವತ್ಕಲ್
ದೇವಾಪುರ
ಹಗರಟಗಿ
ರಾಜನಕೊಳೂರ
ಕಕ್ಕೇರಿ
ತಿಂಥಣಿ
ಕೊಡೆಕಲ್ಲು
ಕೃಷ್ಣಾ ನದಿ
ನಾರಾಯಣಪುರ



ನೆಲದಲ್ಲಿ ಹೂತುಹೋಗಿರುವ ಶಾಸನ, ಅಣಬಿ

ಕುಂಬಾರ ಶಾಲೆ, ಅಣಬಿ



ದನದ ಕೊಟ್ಟಿಗೆಯಾಗಿರುವ ಕಂಬಗಳ ಮಂಟಪ, ಅಣಬಿ

ಶಿವ ದೇವಾಲಯದ ಹೊರನೋಟ, ಅಣಬಿ



ದ್ವಾರಪಾಲ ಶಿಲ್ಪ , ಅಣಬಿ



ನಾಗ ದೇವಾಲಯ, ಅಣಬಿ



ಮುಂಭಾಗದ ಶಾಸನ ಮಂಟಪ, ಐವೂರು



ಸೋಮೇಶ್ವರ ದೇವಾಲಯ, ಐವೂರು



ಬಲಭಾಗದ ಶಾಸನ ಮಂಟಪ, ಏವೂರು



ಕಂಬಗಳ ಮಂಟಪ, ಏವೂರು



ನಾಗಲಿಂಗೇಶ್ವರ ದೇವಾಲಯ, ಕುಳಗೇರಿ



ಶಿಲ್ಪಗಳು, ಕುಳಗೇರಿ



ವೀರಭದ್ರೇಶ್ವರ ದೇವಾಲಯ, ಗೋಗಿ



ಜೈನ ಬಸದಿ, ಗೋಗಿ



ದ್ವಾರದ ಬಳಿಯಿರುವ ಮುದನೂರು ಶಾಸನ



ರಾಮನಾಥ ದೇವಾಲಯ, ಮುದನೂರು



ಶಿಲಾಬಾಲಕಿಯ ಶಿಲ್ಪ, ಮುದನೂರ



ನಾಗ ಶಿಲ್ಪಗಳು, ಮುದನೂರು



ಮುದನೂರು ಶಾಸನ



ಯತಿ ಶಿಲ್ಪ, ಮುದನೂರು



ಶಿವ ದೇವಾಲಯ, ಮುದನೂರು

ಸಪ್ತಮಾತ್ರಕೆ ( ಐದು ಉಳಿದಿವೆ) ಶಿಲ್ಪ, ಮುದನೂರು



ಆಂಜನೇಯ ದೇವಾಲಯ, ಮುದನೂರು

ಗೋಪಾಲಸ್ವಾಮಿ ದೇವಾಲಯ,ಮುದನೂರು



ರಾಮತೀರ್ಥ ಹಿಂಬದಿ ಶಾಸನ, ಯಡ್ರಾಮಿ



ರಾಮತೀರ್ಥ, ಯಡ್ರಾಮಿ



ಹೈಹಯ ವಂಶಾವಳಿ ತಿಳಿಸುವ ಶಾಸನ, ಯಡ್ರಾಮಿ



ಬಸವೇಶ್ವರ ದೇವಾಲಯ, ಯಡ್ರಾಮಿ



ವಡಗೇರಿ ಶಾಸನ



ಬಸವೇಶ್ವರ ದೇವಾಲಯ, ವಡಗೇರಿ



ಶಿರವಾಳ ಶಾಸನ



ಶಿವ ದೇವಾಲಯ, ಶಿರವಾಳ



ಪಾರ್ಶ್ವನಾಥನ ಶಿಲ್ಪ, ಶಿರವಾಳ



ಪಾರ್ಶ್ವನಾಥ ಬಸದಿ, ಶಿರವಾಳ



ಶಿವ ದೇವಾಲಯ, ಸುಂಬಡ

ಮಲ್ಲಿಕಾರ್ಜುನ ದೇವಾಲಯ, ಸುಂಬಡ



ಮೈಲಾರಲಿಂಗೇಶ್ವರ, ಹಳೆಸಗರ



ಹಳೆಸಗರ, ಶಹಾಪುರ

